ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ನಂ. ೨೯

ಶ್ರೀವೇದವ್ಯಾಸರಿಂದ ರಚಿತವಾದ

# ನಾರದೀಯ ಮಹಾಪುರಾಣ

(ಕನ್ನಡ ಅರ್ಥಾನುವಾದ ವಿವರಣೆಗಳ ಸಹಿತ)

## ಭಾಗ—೧೦

ಉತ್ತರಭಾಗ

(೬೧—೮೨ ಅಧ್ಯಾಯಗಳು)



ಪಂಡಿತಶಿರೋಮಣಿ,
ಮಹಾವಿದ್ವಾನ್, ಪಂಡಿತರತ್ನಂ, ವಿದ್ವನ್ಮಣಿ,
**ದೊಡ್ಡಬಳ್ಳಾಪುರಂ ವಾಸುದೇವಾಚಾರ್ಯ.**
ಅನುವಾದಕ.



ಮೈಸೂರು
ಶ್ರೀಚಾಮುಂಡೇಶ್ವರೀ ಎಲೆಕ್ಟ್ರಿಕ್ ಪ್ರೆಸ್
೧೯೪೮

# ಪುರಾಣ



ಮೂರನೆಯ ಸಂಪುಟದಲ್ಲಿ ಅರಿಕೆಮಾಡಿರುವಂತೆ ಶ್ರೀಮದ್ಭಾಗವತ ಹನ್ನೆರಡನೆಯ ಸ್ಕಂಧದ ಆರನೆಯ ಅಧ್ಯಾಯ ೪೮-೪೯ ನೆಯ ಶ್ಲೋಕಗಳಲ್ಲಿ ಹೇಳಿರುವ ಪ್ರಕಾರ ಸರ್ಗ, ವಿಸರ್ಗ ಮುಂತಾದ ಹತ್ತು ಲಕ್ಷಣಗಳನ್ನೊಳಗೊಂಡಿರುವುದು ಮಹಾಪುರಾಣವೆನಿಸುವುದು. ಈ ನಾರದೀಯಪುರಾಣದಲ್ಲಿ ಆ ಹತ್ತು ಲಕ್ಷಣಗಳೂ ಇವೆಯೆಂದು ಈ ಸಂಪುಟದಲ್ಲಿನ ೮೨ನೆಯ ಅಧ್ಯಾಯದ ಮೂವತ್ತನೆಯ ಶ್ಲೋಕದಲ್ಲಿ ಹೇಳಿದೆ. ಆಮೂಲಾಗ್ರವಾಗಿ ಈ ಗ್ರಂಥವನ್ನೇ ಪರಿಶೀಲಿಸುವವರಿಗೆ ಅದು ಸ್ಪಷ್ಟವಾಗುವುದು.

ಈ ಮಹಾಪುರಾಣದಲ್ಲಿ ವಿವಿಧವಿದ್ಯೆಗಳ ತತ್ವಗಳು, ಭಕ್ತಿನೀತಿಮಾರ್ಗಗಳೂ ಕೂಡ ಸರಳೋದಾಹರಣೆಗಳಿಂದ ಹೃದಯಂಗಮವಾಗಿ ನಿರೂಪಿಸಲ್ಪಟ್ಟಿವೆ. ಅದರಂತೆ ಆಚರಿಸಿದರೆ ಐಹಿಕಾಮುಷ್ಮಿಕಶ್ರೇಯಸ್ಸು ಲಭಿಸುವುದು ಮಾತ್ರವೇ ಅಲ್ಲದೆ ಅತಿದುರ್ಲಭವಾದ, ದುಃಖಸಂಪರ್ಕವಿಲ್ಲದ ಸುಖಾನುಭವವೆಂಬ ಮೋಕ್ಷವೂ ಕೂಡ ಕರಗತವಾಗುವುದು.

ಆಧುನಿಕಪ್ರಪಂಚದಲ್ಲಿ ನಾಗರಿಕವಲ್ಲದ, ಅನುಪಾದೇಯವಾದ ಕಟ್ಟುಕಥೆಗಳ ಪ್ರಸ್ತಾಪಬಂದಾಗ "ಪುರಾಣದಮಾತು" ಎಂಬುದಾಗಿ ಹಾಸ್ಯಮಾಡುವ ರೂಢಿಯಿದೆ. ಇದರಿಂದ ಪುರಾಣದಲ್ಲಿ ಹೇಳಿರುವುದು ನಂಬಿಕೆಗೆ ಅರ್ಹವಲ್ಲ; ಅದು ಅನುಪಾದೇಯವು ಮುಂತಾಗಿ ಅವರು ತಿಳಿದಿರುವಂತೆ ತೋರುತ್ತದೆ. ಅದು ಸರಿಯೆ? ಪುರಾಣವು ಹಾಗೆ ಅನಾದರಣೀಯವೆ? ಎಂಬ ಅಂಶವನ್ನು ವಿಚಾರಮಾಡುವುದು ಅವಶ್ಯಕವಾಗಿದೆ.

ಪುರಾಣಗಳನ್ನು ಪರಿಶೀಲಿಸಿದವರಾರೂ ಇಂತಹ ಅನುಚಿತಪ್ರಸಂಗವನ್ನೊಪ್ಪುವುದಿಲ್ಲ. ಸಂಸ್ಕೃತಭಾಷೆ ಮತ್ತು ತತ್ವಶಾಸ್ತ್ರಗಳನ್ನು ಸಪರಿಕರವಾಗಿ ವ್ಯಾಸಂಗಮಾಡಿ ಅದರಲ್ಲಿ ವಿಶೇಷವಾದ ಅಭಿಜ್ಞತೆಯನ್ನು ಹೊಂದಿ ಪುರಾಣಗಳ ವಿಮರ್ಶೆಯಲ್ಲಿ ತೊಡಗಿದರೆ ಪುರಾಣದ ಮಹತ್ವವು ಮನಗಾಣುವುದು. ಸಾಮಾನ್ಯರಿಗೆ

ಪುರಾಣವು ಸರಿಯಾಗಿ ಅರ್ಥವಾಗುವುದಿಲ್ಲ. ಪುರಾಣದ ಭಾಷೆ, ರೀತಿ ಮುಂತಾದುವು ಬೇರೆಯಾಗಿವೆ. ಭಾಷಾವಿವೇಕವೆಂಬ ಪುರಾತನಗ್ರಂಥದಲ್ಲಿ ಗುಹ್ಯ, ದರ್ಶನ ಮತ್ತು ಸಮಾಧಿಭಾಷೆಯೆಂಬುದಾಗಿ ಮೂರು ಪ್ರಧಾನಭಾಷೆಗಳು; ಅವುಗಳಲ್ಲಿ ಒಂದೊಂದೂ ಗುಹ್ಯಗುಹ್ಯ, ಗುಹ್ಯದರ್ಶನ, ಗುಹ್ಯಸಮಾಧಿ ಎಂಬುದಾಗಿ ಮೂರುವಿಧವು; ಹೀಗೆಯೇ ಪರಸ್ಪರಸಂಕಲನದಿಂದ ವಿಭಕ್ತವಾಗಿ ಎಂಬತ್ತೊಂದು ಭಾಷೆಗಳಿವೆಯೆಂದು ಉಕ್ತವಾಗಿದೆ:—

ಗುಹ್ಯದರ್ಶನಭಾಷೇ ಚ ಭಾಷಾ ಚೈವ ಸಮಾಧಿಕಾ ।
ತಿಸ್ರಸ್ತು ಮೂಲಭಾಷಾಃ ಸ್ಯುರೇಕೈಕಾ ತು ತ್ರಿಧಾ ಪುನಃ ।
ಗುಹ್ಯದರ್ಶನಸಂಜ್ಞಾ ತು ಗುಹ್ಯಗುಹ್ಯಾ ತಥಾಪರಾ ।
ಏವಮಾದಿಕ್ರಮೇಣೈವ ತ್ವೇಕಾಶೀತಿವಿಭೇದಿತಾಃ ॥

—ಭಾಷಾವಿವೇಕ

ಪುರಾಣವು ಗುಹ್ಯ, ದರ್ಶನ, ಸಮಾಧಿಗಳೆಂಬ ಮೂರು ಭಾಷೆಗಳಲ್ಲಿ ವಿವಿಧರೀತಿ, ವ್ಯತ್ಯಾಸಗಳನ್ನನುಸರಿಸಿ ಸರ್ವಜ್ಞರಾದ ವೇದವ್ಯಾಸರಿಂದ ರಚಿತವಾಗಿದೆ. ಭಾಷೆ, ರೀತಿ ಮುಂತಾದುವುಗಳ ತತ್ತ್ವವನ್ನು ಚೆನ್ನಾಗಿ ತಿಳಿದ ಹೊರತು ಪುರಾಣದ ನೈಜವಾದ ಅರ್ಥವು ತೋರುವುದಿಲ್ಲ. ಅದನ್ನರಿಯದೇ ಪುರಾಣಗಳಿಗೆ ಅರ್ಥಮಾಡತೊಡಗಿದರೆ ಅನರ್ಥವಾಗುವುದೆಂದು ಲಕ್ಷಣಶಾಸ್ತ್ರದಲ್ಲಿ ಹೇಳಿದೆ:—

ತ್ರಿಭಾಷಾಂ ಯೋ ನ ಜಾನಾತಿ ರೀತೀನಾಂ ಶತಮೇವ ಚ ।
ವ್ಯತ್ಯಾಸಾದೀನ್ ಸಪ್ತಭೇದಾನ್ವೇದಾದ್ಯರ್ಥಂ ತು ಯೋ ವದೇತ್ ।
ಸ ಯಾತಿ ನಿರಯಂ ಘೋರಮನ್ಯಥಾಜ್ಞಾನಸಂಭವಂ ॥

ಈಗ ಪ್ರಚಾರದಲ್ಲಿರುವ ಭಾಷೆಗಳಲ್ಲಿಯೂ ಕೂಡ ಸಾಮಾನ್ಯವಾಗಿ ಅರ್ಥವಾಗದಿರುವ ರಹಸ್ಯಾರ್ಥಕವಾದ ಮಾತುಗಳಿವೆ. ಕರ್ಣಾಟಕಭಾಷೆಯಲ್ಲಿ ಒಗಟೆಗಳು, ಆಂಗ್ಲಭಾಷೆಯಲ್ಲಿ ಇಡಿಯಂ (Idiom) ಮುಂತಾದ ನುಡಿಗುಟ್ಟುಗಳು ಪ್ರಸಿದ್ಧವಾಗಿವೆ. ಒಗಟೆ, ಇಡಿಯಂ ಮಾತುಗಳಿಗೆ ಮೇಲೆ ತೋರುವ ಅರ್ಥವು ಸಮಂಜಸವಾಗಿರುವುದಿಲ್ಲ. ಅದರ ಸಂಕೇತವನ್ನರಿತವರಿಗೇ ಸರಿಯಾದ ಅರ್ಥವು ತಿಳಿಯುತ್ತದೆ. ಅಂತೆಯೇ ಪುರಾಣಗಳಲ್ಲಿ ಮೇಲೆ ತೋರುವ

ಅರ್ಥವು ಕೆಲವೆಡೆಗಳಲ್ಲಿ ಸಮಂಜಸವಾಗಿ ಕಾಣದಿದ್ದರೂ, ಅದು ಯಾವಭಾಷೆ ರೀತಿಗಳಿಂದ ಪ್ರವೃತ್ತವಾಗಿದೆಯೆಂಬುದನ್ನು ವಿಮರ್ಶಿಸಿ ಅದರ ಗುಟ್ಟನ್ನರಿತರೆ ಸಮಂಜಸವಾದ ಅರ್ಥವನ್ನು ತಿಳಿಯಬಹುದು. ಪುರಾಣವೆಂಬ ಹೆಸರಿನಿಂದಲೇ ಅದು ಪ್ರಾಚೀನವೆಂದು ಸಿದ್ಧಿಸುತ್ತದೆ. ಅದರ ಭಾಷೆಯನ್ನೂ ಪ್ರಾಚೀನ ಗ್ರಂಥಗಳಿಂದಲೇ ತಿಳಿಯಬೇಕು. ಹೀಗೆ ಸಂದರ್ಭಾನುಸಾರವಾಗಿ ಪುರಾಣದಲ್ಲಿ ಉಪಯೋಗಿಸಿರುವ ಭಾಷೆರೀತಿಗಳನ್ನರಿತು ಅದರ ನೈಜವಾದ ಅರ್ಥವನ್ನು ಗ್ರಹಿಸುವ ವಿಮರ್ಶಕರಿಗೆ ಪುರಾಣದಲ್ಲಿ ಗೌರವವೇ ಹೆಚ್ಚಿ ಅದರ ಫಲವನ್ನು ಪಡೆಯುವರು. ಅದರಲ್ಲಿ ಅನಾದರಣೆಯು ಎಂದಿಗೂ ಉಂಟಾಗುವುದಿಲ್ಲ. ಇಹಪರಗಳಲ್ಲಿ ಶ್ರೇಯಸ್ಸಾಧನವಾದ ತತ್ವಗಳ ಭಾಂಡಾಗಾರವೇ ಪುರಾಣವು. ಇದು ಬಹು ಪ್ರಾಚೀನವೆಂಬ ವಿಷಯದಲ್ಲಿ:—

ಏತಚ್ಛ್ರುತ್ವಾ ರಹಃ ಸೂತೋ ರಾಜಾನಮಿದಮಬ್ರವೀತ್ |
ಶ್ರೂಯತಾಂ ಯತ್ಪುರಾವೃತ್ತಂ ಪುರಾಣೇಷು ಮಯಾ ಶ್ರುತಂ ||

"ಸುಮಂತ್ರನು ದಶರಥರಾಜನನ್ನು ಕುರಿತು ನಿನ್ನ ಪೂರ್ವವೃತ್ತಾಂತವನ್ನು ನಾನು ಹಿಂದೆಯೇ ಪುರಾಣಗಳಿಂದ ತಿಳಿದಿರುವೆನು" ಎಂಬುದಾಗಿ ತ್ರೇತಾಯುಗದಲ್ಲಿ ರಚಿತವಾದ ಶ್ರೀರಾಮಾಯಣದಲ್ಲಿ ಹೇಳಿರುವುದರಿಂದ ಅದಕ್ಕಿಂತಲೂ ಹಿಂದೆ ಪುರಾಣಗಳಿದ್ದುವೆಂದು ಸ್ಪಷ್ಟಪಡುವುದು. ಅಷ್ಟೇ ಅಲ್ಲ; ಅನಾದಿಸಿದ್ಧವಾದ ಅಥರ್ವವೇದ, ಶತಪಥಬ್ರಾಹ್ಮಣ, ಬೃಹದಾರಣ್ಯಕ, ಛಾಂದೋಗ್ಯೋಪನಿಷತ್ತು, ತೈತ್ತಿರೀಯಾರಣ್ಯಕ ಮುಂತಾದ ವೇದಗಳು, ಮಹಾಭಾಷ್ಯ, ಆಶ್ವಲಾಯನಗೃಹ್ಯಸೂತ್ರ, ಆಪಸ್ತಂಬಧರ್ಮಸೂತ್ರ, ಮನುಸಂಹಿತೆ ಮತ್ತು ಮಹಾಭಾರತ ಮುಂತಾದ ಅತಿ ಪ್ರಾಚೀನಗ್ರಂಥಗಳಲ್ಲಿಯೂ ಕೂಡ ಪುರಾಣಪ್ರಸಂಗವು ಉಕ್ತವಾಗಿದೆ.

ಪುರಾಣವು ನೂರುಕೋಟಿಗ್ರಂಥಪರಿಮಿತಿಯುಳ್ಳುದಾಗಿದ್ದಿತು. ಶ್ರೀವೇದವ್ಯಾಸರು ದ್ವಾಪರಯುಗದ ಅಂತ್ಯಭಾಗದಲ್ಲಿ, ಮುಂದಿನ ಕಲಿಯುಗದ ಜನರ ಮೇಧಾಶಕ್ತಿಯು ಅಲ್ಪವಾಗುವುದನ್ನರಿತು, ಅಂತಹವರಿಗೂ ತತ್ವಜ್ಞಾನವುಂಟಾಗಲೆಂಬ ಉದಾರಭಾವದಿಂದ ಬಹುವಿಸ್ತಾರವಾದ ಪುರಾಣವನ್ನು ನಾಲ್ಕುಲಕ್ಷ ಗ್ರಂಥ (ಗ್ರಂಥ= ಮೂವತ್ತೆರಡು ಅಕ್ಷರಗಳು) ಗಳಲ್ಲಿ ಸಂಗ್ರಹಿಸಿ ಅದನ್ನು ಹದಿ

ನೆಂಟು ಪುರಾಣಗಳನ್ನಾಗಿ ವಿಂಗಡಿಸಿಕೊಟ್ಟಿರುವರು. ಆ ಹದಿನೆಂಟುಪುರಾಣ ಗಳ ಹೆಸರು, ಗ್ರಂಥಸಂಖ್ಯೆ, ಅಲ್ಲಿ ಹೇಳಿರುವ ವಿಷಯಗಳ ಸಂಗ್ರಹ ಇವುಗಳನ್ನು ಈ ಪುರಾಣದ ಏಳನೆಯ ಸಂಪುಟದಲ್ಲಿ ಅಡಗಿರುವ ೯೨-೧೧೯ ಈ ಅಧ್ಯಾಯ ಗಳಲ್ಲಿ ವಿಶದಪಡಿಸಿದೆ.

ಸರ್ಗ, ಪ್ರತಿಸರ್ಗ ಮುಂತಾದ ಪುರಾಣಲಕ್ಷಣಗಳು ಎಲ್ಲಾ ಪುರಾಣ ಗಳಲ್ಲಿಯೂ ಇವೆ. ಒಂದೊಂದು ಕಥೆಯೂ ಒಂದೊಂದು ಪುರಾಣದಲ್ಲಿ ವಿಸ್ತಾರ ವಾಗಿಯೂ, ಇನ್ನೊಂದುಪುರಾಣದಲ್ಲಿ ಸಂಕ್ಷೇಪವಾಗಿಯೂ ನಿರೂಪಿತವಾಗಿದೆ. ಸೃಷ್ಟ್ಯಾದಿ ವಿಷಯದಲ್ಲಿ ಒಂದೊಂದು ಕಲ್ಪದ ಸೃಷ್ಟಿವೈಖರಿಯನ್ನು ಒಂದೊಂದು ಪುರಾಣವು ವಿವರಿಸುತ್ತದೆ. ಆದುದರಿಂದ ಅಂತಹ ವಿಷಯಗಳಲ್ಲಿ ಸ್ವಲ್ಪ ವ್ಯತ್ಯಾಸವು ಕಂಡುಬರುವುದು ಸಹಜವೇ ಸರಿ. ಒಟ್ಟಿನಲ್ಲಿ ಎಲ್ಲಾ ಪುರಾಣಗಳ ಗುರಿಯೂ ಮತ್ತು ಮುಖ್ಯವಿಷಯವೂ ಒಂದೇ ಆಗಿರುವುದು. ಆದರೂ ಪುರಾಣ ವನ್ನು ವಿಭಾಗಿಸಿರುವುದು ಸಕಾರಣವಾಗಿದೆ.

ಪ್ರಪಂಚಕ್ಕೆ ಮೂಲಕಾರಣವಾದ ಸತ್ವರಜಸ್ತಮೋಗುಣಗಳು ಪರಸ್ಪರ ಸಂಕಲನೆಯಿಂದ ಹದಿನೆಂಟು ಭಾಗಗಳಾಗಿವೆ. ಅವುಗಳಲ್ಲಿ ಆಯಾಯಾ ಗುಣ ಮಯವಾದ ಪ್ರಕೃತಿಯುಳ್ಳ ಮನುಷ್ಯರಲ್ಲಿ ಅವರದರ ಪ್ರಭಾವವು ಹೆಚ್ಚಾಗಿ ಕಾಣುವುದು ಸಹಜವಾದುದು. ಅದಕ್ಕನುಸಾರವಾಗಿ ಅವರವರಿಗೆ ಅಂತಹ ಕರ್ಮ, ದೇವತೆ, ಆಹಾರ ಮುಂತಾದುವುಗಳನ್ನಾಶ್ರಯಿಸುವ ಅಭಿಲಾಷೆಯುಂಟಾ ಗುವುದು. ಅದಕ್ಕೆ ತಕ್ಕಂತೆ ಸರ್ವರಿಗೂ ಇಷ್ಟಾರ್ಥಸಾಧಕವಾಗುವ ರೀತಿಯಲ್ಲಿ ಪುರಾಣಗಳನ್ನು ಹದಿನೆಂಟು ಭಾಗವಾಗಿ ವಿಂಗಡಿಸಿರುವರು. ಈ ವಿಭಾಗದ ವಿವರಣೆಯು ಪದ್ಮಪುರಾಣ ಉತ್ತರಖಂಡದ ೨೬೩ ನೆಯ ಅಧ್ಯಾಯದಲ್ಲಿ ಸ್ಪಷ್ಟ ವಾಗಿದೆ.

ಹೀಗೆ ಅತ್ಯಂತೋಪಾದೇಯವೂ, ಸಾತ್ವಿಕವೂ ಆದ ಈ ಮಹಾಪುರಾಣವು ಇಪ್ಪತ್ತೈದುಸಾವಿರ ಗ್ರಂಥಪರಿಮಿತವಾಗಿ ದೊಡ್ಡದಾಗಿದೆ. ಈ ಹತ್ತನೆಯ ಸಂಪುಟದೊಂದಿಗೆ ಕರ್ಣಾಟಕಾನುವಾದಸಹಿತವಾಗಿ ಈ ಪುರಾಣಪ್ರಕಟನೆಯು ಮುಗಿಯುತ್ತದೆ. ಈ ಸಂಪುಟದಲ್ಲಿ ಉತ್ತರಭಾಗದ ( ೬೧-೮೨) ಇಪ್ಪತ್ತೆರಡು ಅಧ್ಯಾಯಗಳು ಅಡಕವಾಗಿವೆ.

ಶಿಕ್ಷಾದಿ ಆರು ವೇದಾಂಗಗಳು, ಹೆಚ್ಚಿನದಾಗಿ ಮಂತ್ರಶಾಸ್ತ್ರ ಇವುಗಳ ನ್ನೊಳಗೊಂಡಿರುವ ಈ ಪುರಾಣವನ್ನು ಭಾಷಾಂತರವಮಾಡುವುದಕ್ಕೆ ತಕ್ಕ ಜ್ಞಾನ ಶರೀರಸಾಮರ್ಥ್ಯಗಳನ್ನು ದಯೆಪಾಲಿಸಿ, ಈ ಮಹಾಕಾರ್ಯವನ್ನು ನಿರ್ವಿಘ್ನವಾಗಿ ಕೊನೆಗಾಣಿಸುವಂತೆ ಅನುಗ್ರಹವಮಾಡಿರುವ ಭಗವಂತನ ಚರಣಾರವಿಂದಗಳಲ್ಲಿ ಸಾಷ್ಟಾಂಗನಮಸ್ಕಾರಗಳನ್ನು ಅರ್ಪಿಸುತ್ತೇನೆ.

ಜ್ಞಾನಭಂಡಾರದಂತಿರುವ ಈ ಪುರಾಣವನ್ನು ದೇಶಭಾಷೆಯಲ್ಲಿ ಪರಿವರ್ತಿಸಲು ನನಗೆ ಅವಕಾಶವನ್ನು ಕಲ್ಪಿಸಿದುದಕ್ಕಾಗಿ ಆಳುವ ಮಹಾಸ್ವಾಮಿಯುವರಾದ ಶ್ರೀಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ.ಸಿ.ಬಿ., ಜಿ.ಸಿ. ಎಸ್.ಐ., ರವರ ಸನ್ನಿಧಾನದಲ್ಲಿ ಕೃತಜ್ಞತೆಯನ್ನರ್ಪಿಸಿ ನಮ್ಮ ಮಹಾಪ್ರಭುಗಳಿಗೆ ಪುರಾಣದೇವತೆಯು ಆಯುರಾರೋಗ್ಯಸತ್ಸಂತಾನಾದಿ ಸಕಲಸಂಪತ್ತುಗಳನ್ನೂ ಅನುಗ್ರಹಿಸಲೆಂದು ಭಗವಂತನನ್ನು ಪ್ರಾರ್ಥಿಸುತ್ತೇನೆ.

ಮೈಸೂರು,
ಸರ್ವಧಾರಿ ಸಂ॥ ಮಾರ್ಗಶಿರ ಪೂರ್ಣಿಮಾ,

16—12—1948

ಪಂಡಿತಶಿರೋಮಣಿ, ಮಹಾವಿದ್ವಾನ್,
ಪಂಡಿತರತ್ನಂ, ವಿದ್ವನ್ಮಣಿ,
**ಡಿ. ವಾಸುದೇವಾಚಾರ್ಯ**
ಅನುವಾದಕ.



# ವಿಷಯಾನುಕ್ರಮಣಿಕೆ

ಜಯ ಜಯ ಜಲಧಿಶಯನ ಜಯ ಜಯ ವೇದಧರ ।
ಜಯ ಜಯ ವಿಶ್ವಮೂರ್ತೇ ಜಯ ಚಕ್ರಧರ ॥ ೪ ॥

ಜಯ ಜಯ ಭೂನಾಥ ಜಯ ಶ್ರೀನಿವಾಸ ಜಯ ಜಯ ।
ಜಯ ಜಯ ಸೂರ್ಯನೇತ್ರ ಜಯ ದೇವ ವರಾಹ ॥ ೫ ॥

ಜಯ ಜಯ ಕೈಟಭಾರೇ ಜಯ ಜಯ ದೇವವರ ।
ಜಯ ಜಯ ಕೂರ್ಮರೂಪ ಜಯ ಯಜ್ಞವರ ॥ ೬ ॥

ಜಯ ಜಯ ಕಮಲನಾಭ ಜಯ ಶೈಲಧರ ।
ಜಯ ಜಯ ಯೋಗೇಶ ಜಯ ವೇಗಧರ ॥ ೭ ॥

ಜಯ ಜಯ ವಿಶ್ವಮೂರ್ತೇ ಜಯ ಚಕ್ರಧರ ।
ಜಯ ಜಯ ಭೂತನಾಥ ಜಯ ಧರಣೀಧರ ॥ ೮ ॥

---

೪. ಸಾಗರಶಾಯಿಯೇ! ನಿನಗೆ ಜಯ! ಯೋಗೇಶ್ವರ! ನಿನಗೆ ಜಯಜಯ! ವೇದಪಾಲಕ! ನಿನಗೆ ಜಯ! ವಿಶ್ವಮೂರ್ತಿಯೇ! ನಿನಗೆ ಜಯಜಯ! ಚಕ್ರಧರನೇ! ಜಯಶೀಲನಾಗು!

೫. ಭೂತನಾಥ! ಜಯಜಯ! ಶ್ರೀನಿವಾಸ! ನಿನಗೆ ಜಯ! ಯೋಗಿಶ್ರೇಷ್ಠ! ನಿನಗೆ ಜಯ! ಸೂರ್ಯನೇ ಕಣ್ಣಾಗಿ ಉಳ್ಳವನೇ! ನಿನಗೆ ಜಯ ಜಯ! ವರಾಹದೇವ! ಜಯಶೀಲನಾಗು!

೬-೮. ಕೈಟಭವೈರಿಯೇ! ಜಯಜಯ! ವೇದಸ್ತುತ್ಯ! ಜಯಜಯ! ಕೂರ್ಮರೂಪಿಯೇ! ಜಯಜಯ! ಯಜ್ಞವರನೇ! ಜಯಶೀಲನಾಗು! ಕಮಲನಾಭ! ಜಯಜಯ! ಶೈಲಧಾರೀ! ಜಯಜಯ! ಯೋಗಪ್ರವರ್ತಕ! ಜಯಜಯ! ವೇಗಧಾರೀ! ಜಯಶೀಲನಾಗು! ಧರಣೀಧರ! ಜಯ ಶೀಲನಾಗು!

ಜಯ ಜಯ ಶೇಷಶಾಯಿನ್ಜಯ ಪೀತವಾಸ |
ಜಯ ಜಯ ಧರ್ಮಕಾಂತ ಜಯ ಜಯ ಮತಿನಿವಾಸ ॥ ೯ ॥

ಜಯ ಜಯ ಗಹನಗೇಹನಿವಾಸ |
ಜಯ ಜಯ ಯೋಗಿಗಮ್ಯ ಜಯ ಜಯ ರಮಾನಿವಾಸ ॥ ೧೦ ॥

ಜಯ ಜಯ ವೇದಗಮ್ಯ ಜಯ ಶಾಂತಿಕರ |
ಜಯ ಜಯ ಯೋಗಿಚಿಂತ್ಯ ಜಯ ಪುಷ್ಟಿಕರ ॥ ೧೧ ॥

ಜಯ ಜಯ ಜ್ಞಾನಮೂರ್ತೇ ಜಯ ಕಮಲಾಕರ |
ಜಯ ಜಯ ಭಾವವೇದ್ಯ ಜಯ ಮುಕ್ತಿಕರ ॥ ೧೨ ॥

ಜಯ ವಿಮಲದೇಹ ಜಯ ಸತ್ವನಿಲಯ |
ಜಯ ಜಯ ಗುಣಸಮೂಹ ಜಯ ಜಯ ಯಜ್ಞಕರ ॥ ೧೩ ॥

---

೯. ಶೇಷಶಾಯಿಯೇ ! ಜಯಜಯ ! ಪೀತಾಂಬರಧಾರಿಯೇ ! ಜಯ ಜಯ ! ಧರ್ಮಕಾಂತ ! ಜಯಜಯ ! ಮತಿನಿವಾಸ ! ಜಯಜಯ !

೧೦. ಗಹನಗೇಹನಿವಾಸ ! ಜಯಜಯ ! ಯೋಗಿಗಮ್ಯ ! ಜಯ ಜಯ ! ರಮಾನಿವಾಸ ! ಜಯಜಯ ?

೧೧. ವೇದವೇದ್ಯ ! ಜಯಜಯ ! ಶಾಂತಿಕಾರಕ ! ಜಯ ! ಯೋಗಿ ಧ್ಯೇಯ ! ಜಯಜಯ ! ಪುಷ್ಟಿಕಾರಕ ! ಜಯಶೀಲನಾಗು !

೧೨. ಜ್ಞಾನಮೂರುತಿಯೇ ! ಜಯಜಯ ! ಕಮಲಾಕರ ! ಜಯ ! ಭಾವವೇದ್ಯ ! ಜಯಜಯ ! ಮೋಕ್ಷಕಾರಕ ! ಜಯಶೀಲನಾಗು !

೧೩. ನಿರ್ಮಲವಾದ ಶರೀರವುಳ್ಳವನೇ ! ಜಯ ! ಸತ್ವಾಧಾರ ! ಜಯ ಜಯ ! ಗುಣಸಮೂಹಸ್ವರೂಪ ! ಯಜ್ಞಕಾರಕ ! ಜಯಜಯ !

ಜಯ ಜಯ ಗುಣವಿಹೀನ ಜಯ ಜಯ ಮೋಕ್ಷಕರ ।
ಜಯ ಜಯ ಭೂರಿಹಿರಣ್ಯ ಜಯ ಜಯ ಕಾಂತಿಯುತ || ೧೪ ||

ಜಯ ಲೋಕಶರಣ ಜಯ ಜಯ ಲಕ್ಷ್ಮೀಪತೇ ।
ಜಯ ಪಂಕಜಾಕ್ಷ ಜಯ ಜಯ ಸೃಷ್ಟಿಕರ || ೧೫ ||

ಜಯ ಯೋಗಯುತ ಜಯಾತಸೀಕುಸುಮಶ್ಯಾಮದೇಹ ।
ಜಯ ಜಯ ಸಮುದ್ರಾವಿಷ್ಟದೇಹ ಜಯ ಲಕ್ಷ್ಮೀಪಂಕಜಭೋಗದೇಹ||

ಜಯ ಜಯ ಭಕ್ತಿಭಾವನ ಲೋಕಗೇಯ ಜಯ ।
ಲೋಕಕಾಂತ ಜಯ ಪರಮಶಾಂತ || ೧೭ ||

ಜಯ ಜಯ ಪರಮಸಾರ ಜಯ ಚಕ್ರಧರ ।
ಜಯ ಭೋಗಿಯುತ ಜಯ ನೀಲಾಂಬರ || ೧೮ ||

---

೧೪. ಲೋಕಪ್ರಸಿದ್ಧಗುಣವಿಹೀನ ! ಜಯಜಯ ! ಮೋಕ್ಷದಾಯಕ ! ಜಯಜಯ ! ಭೂಹಿರಣ್ಯ ! ಜಯಜಯ ! ಕಾಂತಿಸಂಪನ್ನ ! ಜಯಜಯ !

೧೫. ಲೋಕರಕ್ಷಕ ! ಜಯಜಯ ! ಲಕ್ಷ್ಮೀಪತಿಯೇ ! ಜಯಜಯ! ಪದ್ಮಾಕ್ಷ ! ಜಯ ! ಸೃಷ್ಟಿಕರ್ತ ! ಜಯಜಯ !

೧೬. ಯೋಗಸಂಪನ್ನ ! ಜಯಶೀಲನಾಗು ! ಅಗಸೆಯಹೂವಿನಂತೆ ಶ್ಯಾಮವರ್ಣದ ದೇಹವುಳ್ಳವನೇ ! ನಿನಗೆ ಜಯ ! ಸಮುದ್ರದಲ್ಲಿ ಪ್ರವೇಶಿಸಿದ ದೇಹವುಳ್ಳವನೇ ! ನಿನಗೆ ಜಯಜಯ ! ಲಕ್ಷ್ಮೀಪದ್ಮಭೋಗದೇಹ ! ನಿನಗೆ ಜಯ !

೧೭. ಭಕ್ತಿಭಾವನ ! ಜಯಜಯ ! ಲೋಕಸ್ತುತ್ಯ ! ಜಯ । ಲೋಕನಾಥ ! ಜಯ ! ಪರಮಶಾಂತ ! ಜಯ !

೧೮. ಪರಮಸಾರ ! ಜಯಜಯ ! ಚಕ್ರಪಾಣಿಯೇ ! ಜಯಜಯ ! ಭೋಗಿಯುತ ! ಜಯಜಯ ! ನೀಲಾಂಬರ ನಿನಗೆ ಜಯವಾಗಲಿ !

ಜಯ ಸಾಂಖ್ಯನುತ ಜಯ ಕಲುಷಹರ |
ಜಯ ಕೃಷ್ಣ ಜಗನ್ನಾಥ ಜಯ ಸಂಕರ್ಷಣಾನುಜ ‖ ೧೯ ‖

ಜಯ ಜಯ ಪದ್ಮಪಲಾಶಾಕ್ಷ ಜಯ ವಾಂಛಿತಫಲಪ್ರದ |
ಜಯ ಮಾಲಾವೃತೋರಸ್ಕ ಜಯ ಚಕ್ರಗದಾಧರ ‖ ೨೦ ‖

ಜಯ ಪದ್ಮಾಲಯಾಕಾಂತ ಜಯ ವಿಷ್ಣೋ ನಮೋಽಸ್ತು ತೇ |
ಏವಂ ಸ್ತುತ್ವಾ ತದಾ ದೇವಾಃ ಶಕ್ರಾದ್ಯಾ ಹೃಷ್ಟಮಾನಸಾಃ ‖ ೨೧ ‖

ಸಿದ್ಧಚಾರಣಗಂಧರ್ವಾ ಯೇ ಚಾನ್ಯೇ ಸ್ವರ್ಗವಾಸಿನಃ |
ದೃಷ್ಟ್ವಾ ಸ್ತುತ್ವಾ ನಮಸ್ಕೃತ್ಯ ತದ್ಗತೇನಾಂತರಾತ್ಮನಾ ‖ ೨೨ ‖

ಕೃಷ್ಣಂ ರಾಮಂ ಸುಭದ್ರಾಂ ಚ ಯಾಂತಿ ಸ್ವಂ ಸ್ವಂ ನಿವೇಶನಂ |
ಕಪಿಲಾಶತದಾನೇನ ಯತ್ಫಲಂ ಪುಷ್ಕರೇ ಸ್ಮೃತಂ ‖ ೨೩ ‖

---

೧೯. ಜ್ಞಾನಿವಂದ್ಯ! ಜಯ! ದೋಷಪರಿಹಾರಕ! ಜಯ! ಕೃಷ್ಣ! ಜಯ! ಜಗನ್ನಾಥ! ಜಯ! ಬಲರಾಮಾನುಜ! ಜಯ!

೨೦. ಪತ್ರದಳಾಯತನೇತ್ರ! ಜಯಜಯ! ಇಷ್ಟಾರ್ಥದಾಯಕ! ಜಯಜಯ! ಎದೆಯಲ್ಲಿ ಮಾಲೆಗಳನ್ನು ಹಾಕಿಕೊಂಡಿರುವವನೇ! ಜಯಶೀಲನಾಗು! ಚಕ್ರಗದಾಧಾರಿಯೇ! ಜಯಶೀಲನಾಗು!

೨೧-೨೩. ಲಕ್ಷ್ಮೀಕಾಂತ! ಜಯಶೀಲನಾಗು! ವಿಷ್ಣುವೇ! ನೀನು ಜಯಶೀಲನಾಗು! ನಿನಗೆ ನಮಸ್ಕಾರಮಾಡುವೆನು! ಎಂಬುದಾಗಿ ಸ್ತೋತ್ರ ಮಾಡಿ ಹರ್ಷಚಿತ್ತರಾಗಿ ಇಂದ್ರಾದಿದೇವತೆಗಳು, ಸಿದ್ಧ, ಚಾರಣ, ಗಂಧರ್ವ, ಸ್ವರ್ಗವಾಸಿಗಳಾದ ಇತರರೂ ಸಹಕೃಷ್ಣ, ರಾಮ, ಸುಭದ್ರೆಯರನ್ನು ಅವರಲ್ಲಿಯೇ ಮನಸ್ಸಿಟ್ಟು ಸಂದರ್ಶಿಸಿ, ಸ್ತುತಿಸಿ, ನಮಸ್ಕಾರಮಾಡಿ ತಮ್ಮತಮ್ಮ ಸ್ಥಳಕ್ಕೆ ಹೋಗುವರು.

೨೩-೨೪. ಪುಷ್ಕರಕ್ಷೇತ್ರದಲ್ಲಿ ಒಂದು ನೂರು ಕಪಿಲಗೋವುಗಳನ್ನು

ತತ್ಫಲಂ ಕೃಷ್ಣಮಾಲೋಕ್ಯ ಮಂಚಸ್ಥಂ ಸಹಲಾಯುಧಂ ।
ಕನ್ಯಾಶತಪ್ರದಾನೇನ ಯತ್ಫಲಂ ಸಮುದಾಹೃತಂ ॥ ೨೪ ॥

ತತ್ಫಲಂ ಕೃಷ್ಣಮಾಲೋಕ್ಯ ಮಂಚಸ್ಥಂ ಲಭತೇ ನರಃ ।
ಶತನಿಷ್ಕಸುವರ್ಣೇನ ಭೂಮಿದಾನೇನ ಯತ್ಫಲಂ ॥ ೨೫ ॥

ತತ್ಫಲಂ ಚಾನ್ನದಾನೇನ ಸರ್ವಾತಿಥ್ಯೇನ ಯತ್ಫಲಂ ।
ವೃಷೋತ್ಸರ್ಗೇಣ ವಿಧಿವದ್ಗ್ರೀಷ್ಮೇ ತೋಯಪ್ರದಾನತಃ ॥ ೨೬ ॥

ತಿಲಧೇನುಪ್ರದಾನೇನ ಗಜಾಶ್ವರಥದಾನತಃ ।
ಚಾಂದ್ರಾಯಣೇನ ಚೀರ್ಣೇನ ತಥಾ ಮಾಸೋಪವಾಸತಃ ॥ ೨೭ ॥

ಯತ್ಫಲಂ ಸರ್ವತೀರ್ಥೇಷು ವ್ರತೈರ್ದಾನೈಶ್ಚ ಯತ್ಫಲಂ ।
ಸಸುಭದ್ರೌ ರಾಮಕೃಷ್ಣೌ ತಲ್ಲಭೇದ್ವೀಕ್ಷ್ಯ ಮಂಚಗೌ ॥ ೨೮ ॥

---

ದಾನಮಾಡುವುದರಿಂದ ಬರುವ ಫಲವು ಮಂಚದಮೇಲೆ ಕುಳಿತಿರುವ, ಬಲರಾಮ ಸಹಿತನಾದ ಕೃಷ್ಣನ ದರ್ಶನಮಾತ್ರದಿಂದ ಲಭಿಸುವುದು.

೨೪-೨೫. ಒಂದು ನೂರು ಕನ್ಯಾದಾನಮಾಡವುದರಿಂದ ಬರುವ ಫಲವನ್ನು ಮನುಷ್ಯನು ಮಂಚಸ್ಥಿತನಾದ ಕೃಷ್ಣನ ದರ್ಶನದಿಂದಲೇ ಪಡೆಯುವನು.

೨೫-೨೮. ನೂರು ನಿಷ್ಕ ಸುವರ್ಣಸಹಿತವಾದ ಭೂದಾನ, ಅನ್ನದಾನ, ಸರ್ವಾತಿಥ್ಯಮಾಡುವುದು, ವಿಧಿವತ್ತಾದ ವೃಷೋತ್ಸರ್ಗ, ಗ್ರೀಷ್ಮಕಾಲದಲ್ಲಿ ಉದಕದಾನ, ಎಳ್ಳಿನಗೋದಾನ, ಗಜ, ಅಶ್ವ, ರಥಗಳದಾನ, ಚಾಂದ್ರಾಯಣ ವ್ರತಾನುಷ್ಠಾನ, ಮಾಸೋಪವಾಸ, ಸಕಲತೀರ್ಥಗಳಲ್ಲಿಯೂ ಮಾಡುವ ವ್ರತದಾನಗಳು ಇವುಗಳೆಲ್ಲವನ್ನು ಮಾಡುವುದರಿಂದ ಬರುವ ಫಲವು ಮಂಚಸ್ಥಿತರಾದ ಸುಭದ್ರಾ, ಬಲರಾಮ ಕೃಷ್ಣರ ದರ್ಶನಮಾಡುವುದರಿಂದಲೇ ಲಭಿಸುವುದು.

ತಸ್ಮಾನ್ನರೋಥವಾ ನಾರೀ ಪಶ್ಯೇತಾಂ ಪುರುಷೋತ್ತಮಂ ।
ಸ್ನಾನಶೇಷೇಣ ಕೃಷ್ಣಸ್ಯ ತೋಯೇನ ಯದಿ ಮೋಹಿನಿ ॥ ೨೯ ॥

ವಂಧ್ಯಾ ಮೃತಪ್ರಜಾ ವಾಪಿ ದುರ್ಭಗಾ ಗ್ರಹಪೀಡಿತಾಃ ।
ರಾಕ್ಷಸಾದ್ಯೈರ್ಗೃಹೀತಾ ವಾ ತಥಾ ರೋಗೈಶ್ಚ ಸಂಹತಾಃ ॥ ೩೦ ॥

ಸದ್ಯಸ್ತಾಃ ಶುದ್ಧಿಮಾಯಾಂತಿ ವಿಧಿನಾ ಹ್ಯಭಿಷೇಚಿತಾಃ ।
ಪ್ರಾಪ್ನುವಂತೀಪ್ಸಿತಾನ್ ಕಾಮಾನ್ಯಾನ್ಯಾನ್ವಾಂಛಂತಿ ಸುಪ್ರಭೇ ॥ ೩೧ ॥

ಪುಣ್ಯಾನಿ ಯಾನಿ ತೋಯಾನಿ ಸಂತ್ಯನ್ಯಾನಿ ಧರಾತಲೇ ।
ತಾನಿ ಸ್ನಾತಾವಶೇಷಸ್ಯ ಕಲಾಂ ನಾರ್ಹಂತಿ ಷೋಡಶೀಂ ॥ ೩೨ ॥

ತಸ್ಮಾತ್ ಸ್ನಾನಾವಶೇಷೇಣ ಜಲೇನ ಜಲಶಾಯಿನಃ ।
ಅಭ್ಯುಕ್ಷೇತ್ಸರ್ವಗಾತ್ರಾಣಿ ಸರ್ವಕಾಮಪ್ರದೇನ ಚ ॥ ೩೩ ॥

---

೨೯-೩೧. ಮೋಹಿನೀ! ಮಹಾಫಲವು ಲಭಿಸುತ್ತದೆಯಾದಕಾರಣ ಪುರುಷ ಅಥವಾ ಸ್ತ್ರೀಯಾದರೂ ಆ ಪುರುಷೋತ್ತಮದರ್ಶನವನ್ನು ಮಾಡಬೇಕು. ಬಂಜೆ, ಮಕ್ಕಳುಸತ್ತವಳು, ದುರ್ಭಗಳು, ಗ್ರಹಪೀಡಿತರು, ರಾಕ್ಷಸಾದಿಗಳಿಂದ ಗ್ರಸ್ತರು, ರೋಗಗಳಿಂದ ನರಳುತ್ತಿರುವವರು ಇವರೆಲ್ಲರೂ ಕೃಷ್ಣನಿಗೆ ಅಭಿಷೇಕವಾಡಿದ ತೀರ್ಥದಿಂದ ವಿಧಿವತ್ತಾಗಿ ಪ್ರೋಕ್ಷಿಸಲ್ಪಟ್ಟರೆ ತಕ್ಷಣದಲ್ಲಿಯೇ ಶುದ್ಧರಾಗುವರು. ಒಳ್ಳೆಯ ತೇಜಸ್ವಿನಿಯಾದ ಮೋಹಿನೀ! ಅಂತಹವರು ಬಯಸುವ ಇಷ್ಟಾರ್ಥಗಳೆಲ್ಲವೂ ಸಿದ್ಧಿಸುವುವು.

೩೨. ಭೂಮಂಡಲದಲ್ಲಿರುವ ಸಕಲ ಪುಣ್ಯತೀರ್ಥಗಳ ಉದಕಗಳೂ ಕೃಷ್ಣಾಭಿಷೇಕಮಾಡಿದ ತೀರ್ಥದ ಹದಿನಾರನೆಯ ಒಂದು ಭಾಗದಷ್ಟು ಮಹಿಮೆಯನ್ನೂ ಸಹ ಹೊಂದಲರ್ಹವಲ್ಲ.

೩೩. ಆದಕಾರಣ ಸಕಲೇಷ್ಟಾರ್ಥಪ್ರದವಾದ, ಜಲಶಾಯಿ ಕೃಷ್ಣನ ಅಭಿಷೇಕೋದಕದಿಂದ ಶರೀರದ ಎಲ್ಲಾಭಾಗಗಳಲ್ಲಿಯೂ ಪ್ರೋಕ್ಷಿಸಬೇಕು.

ಸ್ನಾತಂ ಪಶ್ಯಂತಿ ಯೇ ಕೃಷ್ಣಂ ವ್ರಜಂತಂ ದಕ್ಷಿಣಾಮುಖಂ ।
ಬ್ರಹ್ಮಹತ್ಯಾದಿಭಿಃ ಪಾಪೈರ್ಮುಚ್ಯಂತೇ ತೇ ನ ಸಂಶಯಃ ॥ ೩೪ ॥

ಶಾಸ್ತ್ರೇಷು ಯತ್ಫಲಂ ಪ್ರೋಕ್ತಂ ತ್ರಿಃ ಪ್ರದಕ್ಷಿಣಯಾ ಭುವಃ ।
ದೃಷ್ಟ್ವಾ ನರೋ ಲಭೇತ್ ಕೃಷ್ಣಂ ತತ್ಫಲಂ ದಕ್ಷಿಣಾಮುಖಂ ॥ ೩೫ ॥

ತೀರ್ಥಯಾತ್ರಾಫಲಂ ಯತ್ತು ಪೃಥಿವ್ಯಾಂ ಸಮುದಾಹೃತಂ ।
ದೃಷ್ಟ್ವಾ ಯಾಂತಂ ಲಭೇತ್ ಕೃಷ್ಣಂ ತತ್ಫಲಂ ದಕ್ಷಿಣಾಮುಖಂ ॥ ೩೬ ॥

ಗಂಗಾದ್ವಾರೇ ಚ ಕುಬ್ಜಾಮ್ರೇ ಕುರುಕ್ಷೇತ್ರೇಽರ್ಕಪರ್ವಣಿ ।
ಪುಷ್ಕರಾದಿಷು ಚಾನ್ಯೇಷು ಯತ್ಫಲಂ ಸ್ನಾನತಃ ಸ್ಮೃತಂ ॥ ೩೭ ॥

---

೩೪. ಅಭಿಷಿಕ್ತನಾಗಿ ದಕ್ಷಿಣಾಭಿಮುಖವಾಗಿ ಹೋಗುತ್ತಿರುವ ಕೃಷ್ಣನನ್ನು ದರ್ಶನಮಾಡಿದವರಿಗೆ ಬ್ರಹ್ಮಹತ್ಯಾದಿ ಪಾಪಗಳೂ ಸಹ ಹೋಗುವುವು; ಸಂದೇಹವಿಲ್ಲ.

೩೫. ಮೂರಾವರ್ತಿ ಭೂಪ್ರದಕ್ಷಿಣೆ ಮಾಡಿದರೆ ಯಾವ ಫಲವು ಬರುತ್ತದೆಂದು ಶಾಸ್ತ್ರದಲ್ಲಿ ಹೇಳಿದೆಯೋ ಅಂತಹ ಫಲವನ್ನು ಮನುಷ್ಯನು ದಕ್ಷಿಣಾಭಿಮುಖನಾದ ಕೃಷ್ಣನ ದರ್ಶನಮಾಡುವುದರಿಂದ ಪಡೆಯುವನು.

೩೬. ಭೂಮಂಡಲದಲ್ಲಿ ಯಾವಯಾವ ತೀರ್ಥಯಾತ್ರೆಗಳಿಗೆ ಎಷ್ಟೆಷ್ಟು ಫಲವು ಉಕ್ತವಾಗಿದೆಯೋ ಅದೆಲ್ಲವೂ ದಕ್ಷಿಣಾಭಿಮುಖನಾಗಿರುವ ಕೃಷ್ಣನನ್ನು ನೋಡಿದರೆ ಬರುವುದು.

೩೭-೩೮. ಗಂಗಾದ್ವಾರ, ಕುಬ್ಜಾಮ್ರ, ಕುರುಕ್ಷೇತ್ರ, ಪುಷ್ಕರಾದಿಗಳು, ಇನ್ನೂ ಇತರ ತೀರ್ಥಗಳು ಇವುಗಳಲ್ಲಿ ಸೌರಪರ್ವಕಾಲದಲ್ಲಿ ಸ್ನಾನಮಾಡುವುದರಿಂದ ಬರುವ ಫಲವು ದಕ್ಷಿಣಾಭಿಮುಖನಾದ ಕೃಷ್ಣನನ್ನು ದರ್ಶನಮಾಡುವ ಮಾತ್ರದಿಂದ ಲಭಿಸುವುದು,

ತತ್ಫಲಂ ದಕ್ಷಿಣಾಸ್ಯಂ ತು ಕೃಷ್ಣಂ ಯಾಂತಂ ನಿರೀಕ್ಷ್ಯ ಚ ।
ಅಥ ಕಿಂ ಬಹುನೋಕ್ತೇನ ಯತ್ಫಲಂ ಪುಣ್ಯಕರ್ಮಣಃ ॥ ೩೮ ॥

ವೇದಶಾಸ್ತ್ರಪುರಾಣೇಷು ಭಾರತೇ ಸಂಹಿತಾದಿಷು ।
ತತ್ಫಲಂ ವೀಕ್ಷ್ಯ ದಕ್ಷಾಸ್ಯೌ ಸಭದ್ರಾ ಬಲಕೇಶವೌ ॥ ೩೯ ॥

ಗುಂಡಿಚಾಮಂಡಪಂ ಯಾಂತಂ ಯೇ ಪಶ್ಯಂತಿ ರಥೇ ಸ್ಥಿತಂ ।
ಸಭದ್ರಂ ಸಬಲಂ ಕೃಷ್ಣಂ ತೇ ಯಾಂತಿ ಭವನಂ ಹರೇಃ ॥ ೪೦ ॥

ಗುಂಡಿಚಾಯಾನಸಮಯೇ ಫಾಲ್ಗುನ್ಯಾಂ ವಿಷುವೇ ತಥಾ ।
ಸಕೃದ್ಯಾತ್ರಾಂ ನರಃ ಕೃತ್ವಾ ವಿಷ್ಣುಲೋಕಂ ಪ್ರಯಚ್ಛತಿ ॥ ೪೧ ॥

ಯಾವತೀಃ ಕುರುತೇ ಮರ್ತ್ಯೋ ಯಾತ್ರಾಃ ಶ್ರೀಪುರುಷೋತ್ತಮೇ ।
ತಾವತ್ಕಲ್ಪಂ ವಿಷ್ಣುಲೋಕೇ ವಸೇದಿತಿ ವಿನಿಶ್ಚಯಃ ॥ ೪೨ ॥

---

೩೮-೩೯. ಹೆಚ್ಚು ಹೇಳಿದುದರಿಂದೇನು? ವೇದ, ಶಾಸ್ತ್ರ, ಪುರಾಣ, ಭಾರತ, ಸಂಹಿತೆ, ಮುಂತಾದುವುಗಳಲ್ಲಿ ಪುಣ್ಯ ಕರ್ಮಗಳಿಗೆ ವಿಹಿತವಾಗಿರುವ ಫಲವೆಲ್ಲವೂ ದಕ್ಷಿಣಾಭಿಮುಖರಾದ ಸುಭದ್ರಾ, ಬಲರಾಮ, ಕೃಷ್ಣರ ದರ್ಶನ ಮಾತ್ರದಿಂದ ಲಭಿಸುವುದು.

೪೦. ರಥದಲ್ಲಿ ಕುಳಿತು ಗುಂಡಿಚಾಮಂಟಪಕ್ಕೆ ದಯಮಾಡಿಸುತ್ತಿರುವಾಗ ಸುಭದ್ರೆ ಬಲರಾಮ ಸಹಿತ ಕೃಷ್ಣನನ್ನು ದರ್ಶನಮಾಡುವವರು ಹರಿಮಂದಿರಕ್ಕೆ ಹೋಗುವರು.

೪೧. ಫಾಲ್ಗುಣಮಾಸದ ಪೂರ್ಣಿಮಾದಿನ, ವಿಷುವ ಪುಣ್ಯಕಾಲ, ಈ ಸಂದರ್ಭಗಳಲ್ಲಿ ಗುಂಡಿಚಾಮಂಟಪಕ್ಕೆ ಕೃಷ್ಣ, ಬಲರಾಮ, ಸುಭದ್ರೆಯರು ವಿಜಯಮಾಡಿಸುತ್ತಿರುವಾಗ ಒಂದು ಬಾರಿ ಯಾತ್ರೆಯನ್ನು ಮಾಡುವ ಮನುಷ್ಯನು ವಿಷ್ಣುಲೋಕಕ್ಕೆ ಹೋಗುವನು.

೪೨. ಮನುಷ್ಯನು ಎಷ್ಟುಬಾರಿ ಪುರುಷೋತ್ತಮಯಾತ್ರೆ ಮಾಡುವನೋ ಅಷ್ಟು ಕಲ್ಪಗಳಕಾಲ ವಿಷ್ಣುಲೋಕದಲ್ಲಿ ಅವನು ವಾಸಿಸುವನು. ಇದು ಖಂಡಿತ.

ಯಾತ್ರಾ ದ್ವಾದಶ ಸಂಪೂರ್ಣಾ ಯದಾ ಸ್ಯುರ್ವಿಧಿನಂದಿನಿ ।
ತದಾ ಪ್ರತಿಷ್ಠಾಂ ಕುರ್ವೀತ ವಿಧಿನಾ ಪಾಪನಾಶಿನೀಂ ॥ ೪೩ ॥

ಜ್ಯೇಷ್ಠಮಾಸಿ ಸಿತೇ ಪಕ್ಷೇ ಹ್ಯೇಕಾದಶ್ಯಾಂ ಸಮಾಹಿತಃ ।
ಗತ್ವಾ ಜಲಾಶಯಂ ಪುಣ್ಯಮಾಚಮ್ಯ ಪ್ರಯತಃ ಶುಚಿಃ ॥ ೪೪ ॥

ಆವಾಹ್ಯ ಸರ್ವತೀರ್ಥಾನಿ ಧ್ಯಾತ್ವಾ ನಾರಾಯಣಂ ತಥಾ ।
ತತಃ ಸ್ನಾನಂ ಪ್ರಕುರ್ವೀತ ವಿಧಿಚೋದಿತವರ್ತ್ಮನಾ ॥ ೪೫ ॥

ಸ್ನಾತ್ವಾ ಸಮ್ಯಕ್ತತೋ ದೇವಾನೃಷೀಂಶ್ಚಾಪಿ ಪಿತೄನ್ಸ್ವಕಾನ್ ।
ಸಂತರ್ಪಯೇತ್ತಥಾನ್ಯಾಂಶ್ಚ ನಾಮಮಂತ್ರಾಂಸ್ತಥೋಚ್ಚರನ್ ॥ ೪೬ ॥

ಉತ್ತೀರ್ಯ ವಾಸಸೀ ಧೌತೇ ನಿರ್ಮಲೇ ಪರಿಧಾಯ ಚ ।
ಉಪಸ್ಪೃಶ್ಯ ವಿಧಾನೇನ ತಥೋಪಸ್ಥಾಯ ಭಾಸ್ಕರಂ ॥ ೪೭ ॥

---

೪೩. ವಿಧಿಕುಮಾರಿಯೇ! ಹನ್ನೆರಡುಬಾರಿ ಪುರುಷೋತ್ತಮ ಯಾತ್ರೆಯನ್ನುಮಾಡಿದಮೇಲೆ ಪಾಪನಾಶಕವಾದ ಪ್ರತಿಷ್ಠೆ (ಉದ್ಯಾಪನೆ) ಯನ್ನುವಿಧಿವತ್ತಾಗಿ ಮಾಡಬೇಕು.

೪೪-೪೫. ಜ್ಯೇಷ್ಠಮಾಸ ಶುಕ್ಲಪಕ್ಷದ ಏಕಾದಶಿಯ ದಿನದಲ್ಲಿ ಸಮಾಧಾನಚಿತ್ತನಾಗಿ ಪುಣ್ಯತೀರ್ಥಕ್ಕೆ ಹೋಗಿ ಆಚಮನಮಾಡಿ ಪರಿಶುದ್ಧನು, ಜಿತೇಂದ್ರಿಯನೂ ಆಗಿ ಅಲ್ಲಿ ಸಕಲತೀರ್ಥಗಳನ್ನೂ ಆವಾಹನೆಮಾಡಿ ನಾರಾಯಣನನ್ನು ಧ್ಯಾನಿಸಿ ನಂತರ ವಿಧ್ಯುಕ್ತಪ್ರಕಾರವಾಗಿ ಸ್ನಾನಮಾಡಬೇಕು.

೪೬. ಸ್ನಾನಾನಂತರ ದೇವ, ಋಷಿ, ಸ್ವಪಿತೃಗಳಿಗೆ ಮತ್ತು ಇತರರಿಗೂ ಸಹ ನಾಮಮಂತ್ರಾದಿಗಳನ್ನು ಹೇಳುತ್ತಾ ತರ್ಪಣ ಮಾಡಬೇಕು.

೪೭-೪೮. ಉಟ್ಟಿದ್ದ ಕಶ್ಮಲಬಟ್ಟೆಗಳನ್ನು ಬಿಚ್ಚಿ ಒಗೆದ ನಿರ್ಮಲವಾದ ವಸ್ತ್ರಗಳನ್ನುಟ್ಟು, ವಿಧಿವತ್ತಾಗಿ ಜಲಸ್ಪರ್ಶಮಾಡಿ ಅನಂತರ ಸೂರ್ಯನಿಗಾಗಿ ಉಪಸ್ಥಾನಮಾಡಬೇಕು. ಬಳಿಕ ಪುಣ್ಯಕರವಾದ ಗಾಯತ್ರೀ ಮಂತ್ರವನ್ನು ನೂರೆಂಟು

ವೇದಮಾತರಮಾವರ್ತ್ಯ ಪುಣ್ಯಾಮಷ್ಟೋತ್ತರಂ ಶತಂ ।
ಸೌರಮಂತ್ರಾಂಸ್ತಥಾ ಚಾನ್ಯಾಂಸ್ತ್ರಿಃ ಪರೀತ್ಯ ನಮೇದ್ರವಿಂ ॥ ೪೮ ॥
ವೇದೋಕ್ತಂ ತ್ರಿಷು ವರ್ಣೇಷು ಸ್ನಾನಂ ಜಪ್ಯಮುದಾಹೃತಂ ॥ ೪೯ ॥

ಸ್ತ್ರೀಶೂದ್ರಯೋರ್ವರಾರೋಹೇ ವೇದೋಕ್ತವಿಧಿವರ್ಜಿತಂ ।
ತತೋ ವ್ರಜೇನ್ಮಂದಿರಸ್ಥಂ ಭಕ್ತ್ಯಾ ಶ್ರೀಪುರುಷೋತ್ತಮಂ ॥ ೫೦ ॥

ಪ್ರಕ್ಷಾಲ್ಯ ಹಸ್ತೌ ಪಾದೌ ಚ ಉಪಸ್ಪೃಶ್ಯ ಯಥಾವಿಧಿ ।
ಘೃತೇನ ಸ್ನಾಪಯೇದ್ದೇವಂ ಕ್ಷೀರೇಣ ತದನಂತರಂ ॥ ೫೧ ॥

ಮಧುಗಂಧೋದಕೇನಾಪಿ ತೀರ್ಥಚಂದನವಾರಿಣಾ ।
ತತೋ ವಸ್ತ್ರಯುಗಂ ಶ್ರೇಷ್ಠಂ ಭಕ್ತ್ಯಾ ತಂ ಪರಿಧಾಪಯೇತ್ ॥ ೫೨ ॥

---

ಬಾರಿ ಜಪಿಸಿ ಸೌರಮಂತ್ರವನ್ನೂ ಇತರಮಂತ್ರಗಳನ್ನೂ ಸಹ ಮೂರುಬಾರಿ ಹೇಳಿ ಸೂರ್ಯನಿಗೆ ನಮಸ್ಕಾರಮಾಡಬೇಕು.

೪೯-೫೦. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಎಂಬ ತ್ರಿವರ್ಣದವರು ವೇದೋಕ್ತ ವಿಧಾನಾನುಸಾರವಾಗಿ ಸ್ನಾನಜಪಾದಿಗಳನ್ನು ಮಾಡಬೇಕು. ಸ್ತ್ರೀಶೂದ್ರರು ವೇದೋಕ್ತ ವಿಧಾನವನ್ನು ಆಚರಿಸಬಾರದು. ಅನಂತರ ಮಂದಿರಸ್ಥನಾದ ಪುರುಷೋತ್ತಮನ ಬಳಿಗೆ ಭಕ್ತಿಯಿಂದ ಹೋಗಬೇಕು.

೫೧-೫೨. ಕೈಕಾಲುಗಳನ್ನು ತೊಳೆದುಕೊಂಡು ವಿಧಾನಾನುಸಾರವಾಗಿ ಆಚಮನಾದಿಗಳನ್ನು ಮಾಡಿ ದೇವರಿಗೆ ತುಪ್ಪದಿಂದ ಅಭಿಷೇಕಮಾಡಿ ಅನಂತರ ಕ್ಷೀರ, ಬಳಿಕ ಮಧು, ಗಂಧೋದಕ, ಚಂದನಮಿಶ್ರ ತೀರ್ಥಜಲ ಇವುಗಳಿಂದ ಕ್ರಮವಾಗಿ ಅಭಿಷೇಕಮಾಡಿ ನಂತರ ಉತ್ತಮವಾದ ಎರಡು ವಸ್ತ್ರಗಳನ್ನು ಹೊದಿಸಬೇಕು.

ಚಂದನಾಗರುಕರ್ಪೂರೈಃ ಕುಂಕುಮೇನ ವಿಲೇಪಯೇತ್ ।
ಪೂಜಯೇತ್ಪರಯಾ ಭಕ್ತ್ಯಾ ಪದ್ಮೈಶ್ಚ ಪುರುಷೋತ್ತಮಂ ॥ ೫೩ ॥

ಸಂಪೂಜ್ಯೈವಂ ಜಗನ್ನಾಥಂ ಭುಕ್ತಿಮುಕ್ತಿಪ್ರದಂ ಹರಿಂ ।
ಧೂಪಂ ಚಾಗರುಸಂಯುಕ್ತಂ ದೇಹೇ ದೇವಸ್ಯ ಚಾಗ್ರತಃ ॥ ೫೪ ॥

ಗುಗ್ಗುಲಂ ಚ ಸುನಿಷ್ಪೂತಂ ದಹೇದ್ಘೃತಸಮನ್ವಿತಂ ।
ದೀಪಂ ಪ್ರಜ್ವಾಲಯೇದ್ಭಕ್ತ್ಯಾ ಯಥಾಶಕ್ತಿ ಘೃತೇನ ವೈ ॥ ೫೫ ॥

ಅನ್ಯಾಂಶ್ಚ ದೀಪಕಾನ್ ದದ್ಯಾದ್ದ್ವಾದಶೈವ ಸಮಾಹಿತಃ ।
ಗೋಘೃತೇನ ತು ದೇವೇಶಿ ತಿಲತೈಲೇನ ವಾ ಪುನಃ ॥ ೫೬ ॥

ನೈವೇದ್ಯಂ ಪಾಯಸಾಪೂಪಶಷ್ಕುಲೀವೇಷ್ಟಕಾನಿ ಚ ।
ಮೋದಕಂ ಕಾಣಿಕಂ ಚಾನ್ಯತ್ ಫಲಾನಿ ಚ ನಿವೇದಯೇತ್ ॥ ೫೭ ॥

---

೫೩. ಚಂದನ, ಅಗರು, ಕರ್ಪೂರ, ಕುಂಕುಮ ಇವುಗಳನ್ನು ದೇವರಿಗೆ ಲೇಪನೆಮಾಡಬೇಕು. ಆಮೇಲೆ ಉತ್ಕೃಷ್ಟಭಕ್ತಿಯಿಂದ ಪದ್ಮಪುಷ್ಪಗಳನ್ನು ಪುರುಷೋತ್ತಮನಿಗರ್ಪಿಸಬೇಕು.

೫೪. ಈರೀತಿಯಾಗಿ ಭೋಗಮೋಕ್ಷಪ್ರದನಾದ, ಜಗನ್ನಿಯಾಮಕನಾದ ಹರಿಯನ್ನು ಪೂಜಿಸಿ ದೇವಗೃಹದಲ್ಲಿ ದೇವರ ಮುಂದೆ ಅಗರು ಸಂಯುಕ್ತವಾದ ಧೂಪವನ್ನರ್ಪಿಸಬೇಕು.

೫೫. ಚೆನ್ನಾಗಿ ಶುದ್ಧಿಮಾಡಿದ ಗುಗ್ಗುಲವನ್ನೂ ಸಹ ಘೃತಸಹಿತವಾಗಿ ಅಗ್ನಿಯಲ್ಲಿ ಸುಟ್ಟು ಧೂಪವನ್ನು ಸಮರ್ಪಿಸಬೇಕು. ತನ್ನ ಶಕ್ತ್ಯನುಸಾರವಾಗಿ ಭಕ್ತಿಯಿಂದ ತುಪ್ಪದ ದೀಪವನ್ನು ಹಚ್ಚಬೇಕು.

೫೬. ದೇವೇಶೀ ! ಹಸುವಿನ ತುಪ್ಪ ಅಥವಾ ಎಳ್ಳೆಣ್ಣೆಯಿಂದ ಇತರ ಹನ್ನೆರಡು ದೀಪಗಳನ್ನು ಚಿತ್ತೈಕಾಗ್ರದಿಂದ ಹರಿಗರ್ಪಿಸಬೇಕು.

೫೭. ಪಾಯಸ, ಅಪೂಪ, ಚಕ್ಕುಲಿ, ಮುಚ್ಚೋರೆ, ಕಡಬು, ಕಾಣಿಕ ಮತ್ತು ಫಲ ಇವುಗಳನ್ನು ಮಾಡಿ ಹರಿಗೆ ನಿವೇದನೆ ಮಾಡಬೇಕು.

ಏವಂ ಪಂಚೋಪಚಾರೇಣ ಸಂಪೂಜ್ಯ ಪುರುಷೋತ್ತಮಂ ।
ಓಂ ನಮಃ ಪುರುಷೋತ್ತಮಾಯೇತಿ ಜಪೇದಷ್ಟೋತ್ತರಂ ಶತಂ ॥ ೫೮ ॥

ತತಃ ಪ್ರಸಾದಯೇದ್ದೇವಂ ದಂಡವತ್ಪ್ರಣಿಪತ್ಯ ಚ ।
ತತೋರ್ಚಯೇದ್ಗುರುಂ ಭಕ್ತ್ಯಾ ಪುಷ್ಪವಸ್ತ್ರಾನುಲೇಪನೈಃ ॥ ೫೯ ॥

ನಾನಯೋರಂತರಂ ಯಸ್ಮಾದ್ವಿದ್ಯತೇ ವಿಧಿನಂದಿನಿ ।
ದೇವಸ್ಯೋಪರಿ ಕುರ್ವೀತ ಮಂಡಪಂ ಸುಸಮಾಹಿತಃ ॥ ೬೦ ॥

ನಾನಾಪುಷ್ಪೈಃ ಸುವಿಶದಂ ವಿಚಿತ್ರಂ ಮಂಡಲಂ ಪುರಃ ।
ಕೃತ್ವಾವಧಾರಣಂ ಪಶ್ಚಾಜ್ಜಾಗರಂ ಕಾರಯೇನ್ನಿಶಿ ॥ ೬೧ ॥

ಕಥಾಂ ಚ ವಾಸುದೇವಸ್ಯ ಗೀತಿಕಾಂ ಚಾಪಿ ಕಾರಯೇತ್ ।
ಧ್ಯಾಯನ್ ಪಠನ್ ಸ್ತುವನ್ದೇವಂ ಪ್ರಣಯೇದ್ರಜನೀಂ ಬುಧಃ ॥ ೬೨ ॥

---

೫೮. ಈ ಪ್ರಕಾರ ಪಂಚೋಪಚಾರ ಎಂದರೆ ವಸ್ತ್ರ, ಗಂಧ, ಧೂಪ, ದೀಪ ನೈವೇದ್ಯಗಳನ್ನರ್ಪಿಸಿ ಪುರುಷೋತ್ತಮಪೂಜೆ ಮಾಡಿದಮೇಲೆ "ಓಂ ನಮಃ ಪುರುಷೋತ್ತಮಾಯ" ಎಂಬುದಾಗಿ ನೂರೆಂಟುಬಾರಿ ಜಪಿಸಬೇಕು.

೫೯. ಅನಂತರ ಸಾಷ್ಟಾಂಗ ನಮಸ್ಕಾರಮಾಡಿ ಪುರುಷೋತ್ತಮನ ಅನುಗ್ರಹವನ್ನು ಸಂಪಾದಿಸಬೇಕು. ತರುವಾಯ ಭಕ್ತಿಪೂರ್ವಕವಾಗಿ ಪುಷ್ಪ, ವಸ್ತ್ರ, ಗಂಧ ಇವುಗಳಿಂದ ಗುರುಪೂಜೆಯನ್ನು ಮಾಡಬೇಕು.

೬೦-೬೧. ವಿಧಿಕುಮಾರಿಯೇ ! ದೇವಗುರುಗಳಿಗೆ ಅಂತರವಿಲ್ಲ. ದೇವರಿರುವೆಡೆಯಲ್ಲಿ ಮೇಲ್ಭಾಗದಲ್ಲಿ ಸಮಾಧಾನಚಿತ್ತದಿಂದ ನಾನಾವಿಧ ಪುಷ್ಪಗಳಿಂದ ಅಲಂಕೃತವಾದ, ವಿಸ್ತಾರವಾದ ಮಂಟಪವನ್ನು ರಚಿಸಬೇಕು. ದೇವರಮುಂದೆ ಚಿತ್ರಮಂಡಲವನ್ನು ಮಾಡಿ ಅದರಲ್ಲಿ ತೊಟ್ಟಿಲನ್ನಿಟ್ಟು ಪುರುಷೋತ್ತಮನನ್ನು ತೂಗುತ್ತಾ ರಾತ್ರಿಯೆಲ್ಲಾ ಜಾಗರಣೆ ಮಾಡಬೇಕು.

೬೨. ಪಂಡಿತನು ವಾಸುದೇವನ ಕಥೆ, ಗಾನ ಇವನ್ನು ಮಾಡಿಸುತ್ತಾ, ದೇವರ ಧ್ಯಾನ, ಸ್ತೋತ್ರಪಠನೆಗಳನ್ನು ಮಾಡುತ್ತಾ ರಾತ್ರಿಯನ್ನು ಕಳೆಯಬೇಕು.

ತತಃ ಪ್ರಭಾತೇ ವಿಮಲೇ ದ್ವಾದಶ್ಯಾಂ ದ್ವಾದಶೈವ ತು ।
ನಿಮಂತ್ರಯೇದ್ವ್ರತಸ್ನಾತಾನ್ ಬ್ರಾಹ್ಮಣಾನ್ ವೇದಪಾರಗಾನ್ ॥ ೬೩ ॥

ಇತಿಹಾಸಪುರಾಣಜ್ಞಾನ್ ಶ್ರೋತ್ರಿಯಾನ್ಸಂಯತೇಂದ್ರಿಯಾನ್ ।
ಸ್ನಾತ್ವಾ ಸಮ್ಯಗ್ವಿಧಾನೇನ ಧೌತವಾಸಾ ಜಿತೇಂದ್ರಿಯಃ ॥ ೬೪ ॥

ಸ್ನಾಪಯೇತ್ಪೂರ್ವವದ್ಭಕ್ತ್ಯಾ ತತ್ರಸ್ಥಂ ಪುರುಷೋತ್ತಮಂ ।
ಗಂಧೈಃ ಪುಷ್ಪೈಸ್ತೂಪಹಾರೈರ್ನೈವೇದ್ಯೈರ್ದೀಪಕೈಸ್ತಥಾ ॥ ೬೫ ॥

ಉಪಚಾರೈರ್ಬಹುವಿಧೈಃ ಪ್ರಣಿಪಾತೈಃ ಪ್ರದಕ್ಷಿಣೈಃ ।
ಜಾಪ್ಯಸ್ತುತಿನಮಸ್ಕಾರೈರ್ಗೀತವಾದ್ಯೈರ್ಮನೋಹರೈಃ ॥ ೬೬ ॥

ಸಂಪೂಜ್ಯೈವಂ ಜಗನ್ನಾಥಂ ಬ್ರಾಹ್ಮಣಾನ್ಪೂಜಯೇತ್ತತಃ ।
ದ್ವಾದಶೈವ ತು ಗಾಸ್ತೇಭ್ಯೋ ದತ್ವಾ ಕನಕಮೇವ ಚ ॥ ೬೭ ॥

---

೬೩-೬೪. ಬೆಳಗಾದ ಮೇಲೆ ದ್ವಾದಶಿಯದಿನದಲ್ಲಿ ಏಕಾದಶೀ ಉಪವಾಸ ವ್ರತ ಮಾಡಿದ, ವೇದಪಾರಂಗತರಾದ, ಇತಿಹಾಸ ಪುರಾಣಗಳನ್ನು ಚೆನ್ನಾಗಿ ತಿಳಿದಿರುವ, ಶ್ರೋತ್ರಿಯರು, ಜಿತೇಂದ್ರಿಯರೂ ಆದ ಹನ್ನೆರಡು ಜನ ಬ್ರಾಹ್ಮಣ ರನ್ನು ಆಹ್ವಾನಮಾಡಬೇಕು.

೬೪-೬೫. ತಾನು ಜಿತೇಂದ್ರಿಯನಾಗಿ ವಿಹಿತರೀತಿಯಿಂದ ಸ್ನಾನಮಾಡಿ ಮಡಿಯನ್ನುಟ್ಟು ಹಿಂದಿನಂತೆ ಅಲ್ಲಿರುವ ಪುರುಷೋತ್ತಮನಿಗೆ ಭಕ್ತಿಯಿಂದ ಅಭಿ ಷೇಕ ಮಾಡಿಸಬೇಕು.

೬೫-೬೭. ಅನಂತರ ಗಂಧ, ಹೂವು, ಉಪಹಾರ, ನೈವೇದ್ಯ, ದೀಪ ಮುಂತಾದ ಬಹುವಿಧೋಪಚಾರಗಳು, ಪ್ರದಕ್ಷಿಣೆ, ನಮಸ್ಕಾರ, ಮಂತ್ರಜಪ, ಸ್ತೋತ್ರಪಠನ, ಗಾನ, ಮನೋಹರ ವಾದ್ಯ ಇವುಗಳನ್ನೆಲ್ಲಾ ಸಮರ್ಪಿಸಿ ಜಗ ನ್ನಾಥನನ್ನು ಪೂಜೆಮಾಡಿ ಬ್ರಾಹ್ಮಣರನ್ನು ಪೂಜಿಸಬೇಕು.

ಛತ್ರೋಪಾನದ್ಯುಗಂ ಚಾರ್ಪ್ಯ ಕಾಂಸ್ಯಪಾತ್ರಂ ಚ ಭಕ್ತಿತಃ ।
ತತಸ್ತಾನ್ಭೋಜಯೇದ್ವಿಪ್ರಾನ್ಭೋಜ್ಯಂ ಪಾಯಸಪೂರ್ವಕಂ ॥ ೬೮ ॥
ಪಕ್ವಾನ್ನಂ ಭಕ್ಷ್ಯಭೋಜ್ಯಂ ಚ ಸಗುಡಂ ಶರ್ಕರಾನ್ವಿತಂ ।
ತತೋ ಭುಕ್ತ್ವಾ ಸುಸಂತೃಪ್ತಾನ್ಬ್ರಾಹ್ಮಣಾನ್ಸುಸ್ಥಮಾನಸಾನ್ ॥ ೬೯ ॥
ದ್ವಾದಶೈವೋದಕುಂಭಾಂಶ್ಚ ಗ್ರಾಹಯೇತ್ತಾನ್ಸಮೋದಕಾನ್ ।
ದಕ್ಷಿಣಾಂ ಚ ಯಥಾಶಕ್ತಿ ವಿಷ್ಣುತುಲ್ಯಾನ್ವಿರಿಂಚಿಜೇ ॥ ೭೦ ॥
ಸುವರ್ಣವಸ್ತ್ರಗೋಧಾನ್ಯೈರ್ದ್ರವ್ಯೈಶ್ಚಾನ್ಯೈರ್ವರೈರ್ಬುಧಃ ।
ಸಂಪೂಜ್ಯ ತಾನ್ನಮಸ್ಕೃತ್ಯ ಇಮಂ ಮಂತ್ರಮುದೀರಯೇತ್ ॥ ೭೧ ॥
ಸರ್ವವ್ಯಾಪೀ ಜಗನ್ನಾಥಃ ಶಂಖಚಕ್ರಗದಾಧರಃ ।
ಅನಾದಿನಿಧನೋ ದೇವಃ ಪ್ರೀಯತಾಂ ಪುರುಷೋತ್ತಮಃ ॥ ೭೨ ॥

---

೬೭-೬೮. ತರುವಾಯ ಆ ಹನ್ನೆರಡು ಮಂದಿ ಬ್ರಾಹ್ಮಣರಿಗೆ, ಹನ್ನೆರಡು ಗೋವುಗಳು, ಸುವರ್ಣ, ಛತ್ರಿ, ಪಾದರಕ್ಷೆ, ಕಂಚಿನಪಾತ್ರೆ ಇವುಗಳನ್ನು ಭಕ್ತಿಯಿಂದರ್ಪಿಸಿ ಆ ಬ್ರಾಹ್ಮಣರಿಗೆ ಪಾಯಸ ಮುಂತಾದ ಭೋಜ್ಯವಸ್ತುಗಳನ್ನು ಬಡಿಸಿ ಭೋಜನಮಾಡಿಸಬೇಕು.

೬೯-೭೦. ಪಕ್ವಾನ್ನ, ಭಕ್ಷ್ಯ, ಭೋಜ್ಯ, ಬೆಲ್ಲ, ಸಕ್ಕರೆ ಇವುಗಳನ್ನೆಲ್ಲಾ ಅವರಿಗೆ ಭೋಜನಮಾಡಿಸಬೇಕು. ಭೋಜನಮಾಡಿ ತೃಪ್ತರಾಗಿ ಸ್ವಸ್ಥಚಿತ್ತರಾದ ಬ್ರಾಹ್ಮಣರಿಗೆ ಮೋದಕಸಹಿತವಾಗಿ ಹನ್ನೆರಡು ಉದಕುಂಭಗಳನ್ನು ದಕ್ಷಿಣೆಯೊಡನೆ ಕೊಡಬೇಕು.

೭೦-೭೧. ಬ್ರಹ್ಮಜಾತಳೇ ! ಜ್ಞಾನಿಯು ಸುವರ್ಣ, ವಸ್ತ್ರ, ಗೋವು, ಧಾನ್ಯ, ಇತರಪದಾರ್ಥಗಳು ಇವನ್ನು ವಿಷ್ಣ್ವನುಗ್ರಹಪಾತ್ರರಾದ ಆ ಬ್ರಾಹ್ಮಣರಿಗೆ ತನ್ನ ಐಶ್ವರ್ಯಕ್ಕನುಸಾರವಾಗಿ ಕೊಡಬೇಕು. ಹೀಗೆ ಅವರನ್ನು ಸತ್ಕರಿಸಿ ನಮಸ್ಕಾರಮಾಡಿ ಈ ಮಂತ್ರವನ್ನು ಹೇಳಬೇಕು.

೭೨. ಮಂತ್ರಾರ್ಥ :—ಸರ್ವವ್ಯಾಪಕನು, ಜಗದೊಡೆಯನು, ಶಂಖಚಕ್ರಗದಾಪಾಣಿಯು, ಆದ್ಯಂತಶೂನ್ಯನೂ ಆದ ಪುರುಷೋತ್ತಮ ದೇವನು ಪ್ರಸನ್ನನಾಗಲಿ !

ಇತ್ಯುಚ್ಚಾರ್ಯ ತತೋ ವಿಪ್ರಾಂಸ್ತ್ರಿಃ ಪರಿಕ್ರಮ್ಯ ಸಾದರಂ |
ಪ್ರಣಮ್ಯ ಶಿರಸಾ ಭಕ್ತ್ಯಾ ಸಾಚಾರ್ಯಾಂಸ್ತಾನ್ವಿಸರ್ಜಯೇತ್ || ೭೩ ||

ತತಸ್ತಾನ್ಬ್ರಾಹ್ಮಣಾನ್ಭಕ್ತ್ಯಾ ವಾ ಸೀಮಾಂತಮನುವ್ರಜೇತ್ |
ಅನುವ್ರಜ್ಯ ತು ತಾನ್ವಿಪ್ರಾನ್ನಮಸ್ಕೃತ್ಯ ನಿವರ್ತ್ಯ ಚ || ೭೪ ||

ಬಾಂಧವೈಃ ಸ್ವಜನೈರ್ಯುಕ್ತಸ್ತತೋ ಭುಂಜೀತ ವಾಗ್ಯತಃ |
ಏವಂ ಕೃತ್ವಾ ನರಃ ಸಮ್ಯಙ್ನಾರೀ ವಾ ಲಭತೇ ಫಲಂ || ೭೫ ||

ಅಶ್ವಮೇಧಸಹಸ್ರಸ್ಯ ರಾಜಸೂಯಶತಸ್ಯ ಚ |
ಅತೀತಂ ಶತಮುದ್ಧೃತ್ಯ ಪುರುಷಾಣಾಂ ನರೋತ್ತಮಃ || ೭೬ ||

ಭವಿಷ್ಯಂ ಚ ಶತಂ ದೇವಿ ದಿವ್ಯರೂಪಧರೋಽವ್ಯಯಃ |
ಸರ್ವಲಕ್ಷಣಸಂಪನ್ನಃ ಸರ್ವಾಲಂಕಾರಭೂಷಿತಃ || ೭೭ ||

---

೭೩. ಈರೀತಿ ಪ್ರಾರ್ಥಿಸಿ ಆ ಬ್ರಾಹ್ಮಣರನ್ನು ಮೂರುಬಾರಿ ಪ್ರದಕ್ಷಿಣೆಮಾಡಿ ಭಕ್ತಿಯಿಂದ ತಲೆಬಾಗಿ ನಮಸ್ಕರಿಸಿ ಆಚಾರ್ಯರಸಹಿತವಾಗಿ ಆ ಬ್ರಾಹ್ಮಣರನ್ನು ವಿಸರ್ಜನೆ ಮಾಡಬೇಕು.

೭೪-೭೫. ತರುವಾಯ ಅಲ್ಲಿಂದ ತೆರಳಿದ ಬ್ರಾಹ್ಮಣರ ಹಿಂದೆ ತನ್ನ ಮನೆಯ ಎಲ್ಲೆಯವರೆಗೆ ಹೋಗಿ ಪುನಃ ನಮಸ್ಕರಿಸಿ ಹಿಂದಿರುಗಿ ಬಂದು ಬಂಧುಗಳು ಮುಂತಾದ ಸ್ವಜನರೊಡನೆ ಮೌನದಿಂದ ಊಟಮಾಡಬೇಕು.

೭೫-೭೬. ಪುರುಷ ಅಥವಾ ಸ್ತ್ರೀಯಾದರೂ ಈರೀತಿಯಾಗಿ ಮಾಡಿದರೆ ಸಾವಿರ ಅಶ್ವಮೇಧಯಾಗಗಳ ಮತ್ತು ನೂರು ರಾಜಸೂಯಯಾಗಗಳ ಫಲವನ್ನು ಪಡೆಯುವರು.

೭೬-೮೦. ಅಷ್ಟೇ ಅಲ್ಲದೆ ಅಂತಹ ನರೋತ್ತಮನು ಹಿಂದು ಮುಂದಿನ ನೂರುನೂರು ಕುಲಗಳನ್ನುದ್ಧರಿಸಿ, ಹ್ರಾಸವಿಲ್ಲದ ಮನೋಹರ ರೂಪವನ್ನು ಧರಿಸಿ, ಸಕಲ ಲಕ್ಷಣಸಂಪನ್ನನು, ಸಕಲಾಭರಣ ಭೂಷಿತನು, ಸಕಲೇಷ್ಟಗಳನ್ನೂ

ಸರ್ವಕಾಮಸಮೃದ್ಧಾತ್ಮಾ ಗುಣರೂಪವಯೋಽನ್ವಿತಃ ।
ಸ್ತೂಯಮಾನೋಽಥ ಗಂಧರ್ವೈರಪ್ಸರೋಭಿಃ ಸಮಂತತಃ ॥ ೭೮ ॥

ವಿಮಾನೇನಾರ್ಕವರ್ಣೇನ ಕಾಮಗೇನ ಸ್ಥಿರೇಣ ಚ ।
ಪತಾಕಾಧ್ವಜಯುಕ್ತೇನ ಶತಸೂರ್ಯಪ್ರಭೇಣ ಚ ॥ ೭೯ ॥

ಉದ್ಯೋತಯನ್ದಿಶಃ ಸರ್ವಾ ಆಕಾಶೇ ವಿಗತಕ್ಲಮಃ ।
ಯುವಾ ಮಹಾಬಲೋ ಧೀಮಾನ್ವಿಷ್ಣುಲೋಕಂ ಸ ಗಚ್ಛತಿ ॥ ೮೦ ॥

ತತ್ರ ಕಲ್ಪಶತಂ ಯಾವದ್ಭುಂಕ್ತೇ ಭೋಗಾನ್ಯಥೇಪ್ಸಿತಾನ್ ।
ಸ್ತುತೋ ಮುನಿವರೈರ್ದೇವಿ ತಿಷ್ಠೇಚ್ಚ ವಿಗತಜ್ವರಃ ॥ ೮೧ ॥

ಯಥಾ ದೇವೋ ಜಗನ್ನಾಥಃ ಶಂಖಚಕ್ರಗದಾಧರಃ ।
ತಥಾಸೌ ಮುದಿತೋ ದೇವಿ ಧೃತ್ವಾ ರೂಪಂ ಚತುರ್ಭುಜಂ ॥ ೮೨ ॥

---

ಹೊಂದಿ ಸಮೃದ್ಧನಾಗಿರುವವನು, ಗುಣ, ಸೌಂದರ್ಯ, ವಯಸ್ಸು ಇವುಗಳಿಂದ ಕೂಡಿರುವವನು, ಸುತ್ತಲೂ ಗಂಧರ್ವರು ಮತ್ತು ಅಪ್ಸರಸ್ತ್ರೀಯರಿಂದ ಸ್ತೋತ್ರ ಮಾಡಿಸಿಕೊಳ್ಳಲ್ಪಡುವವನಾಗಿ ಸೂರ್ಯನಂತೆ ಹೊಳೆಯುತ್ತಿರುವ, ಕಾಮಚಾರಿಯು ಸ್ಥಿರವು, ಪತಾಕೆ, ಧ್ವಜಗಳುಳ್ಳದು, ನೂರಾರು ಸೂರ್ಯರ ಕಾಂತಿಯುಳ್ಳದೂ ಆಗಿರುವ ವಿಮಾನದಲ್ಲಿ ಕುಳಿತು ಆಕಾಶದಲ್ಲಿ ಸಕಲ ದಿಕ್ಕುಗಳನ್ನೂ ಪ್ರಕಾಶ ಪಡಿಸುತ್ತಾ, ಯುವಕನು, ಮಹಾಬಲಿಷ್ಠನೂ ಆದ ಆ ಜ್ಞಾನಿಯು ಆಯಾಸ ವಿಲ್ಲದೆ ವಿಷ್ಣುಲೋಕಕ್ಕೆ ಹೋಗುವನು.

೮೧. ದೇವಿಯೇ! ಅಲ್ಲಿ ಅವನು ಕ್ಲೇಶವಿಲ್ಲದೆ ನೂರುಕಲ್ಪಗಳು ಮುಗಿಯುವವರೆಗೂ ಯಥೇಷ್ಟಭೋಗಗಳನ್ನು ಅನುಭವಿಸುತ್ತ, ಶ್ರೇಷ್ಠಮುನಿಗಳಿಂದ ಸ್ತೋತ್ರಮಾಡಿಸಿಕೊಳ್ಳಲ್ಪಡುತ್ತಿರುವನು.

೮೨-೮೩. ದೇವಿಯೇ! ಜಗನ್ನಾಥದೇವನು ಹೇಗೆ ಶಂಖಚಕ್ರ ಗದಾಪಾಣಿಯಾಗಿ ರೂಪವನ್ನು ಧರಿಸಿರುವನೋ ಅಂತಹ ನಾಲ್ಕು ಭುಜಗಳುಳ್ಳ,

ಭುಕ್ತ್ವಾ ತತ್ರ ವರಾನ್ ಭೋಗಾನ್ಕ್ರೀಡಿತ್ವಾ ಸುಚಿರಂ ಸತಿ |
ತದಂತೇ ಬ್ರಹ್ಮಸದನಮಾಯಾತ್ಯಖಿಲಕಾಮದಂ || ೮೩ ||

ಸಿದ್ಧವಿದ್ಯಾಧರೈಶ್ಚಾಪಿ ಶೋಭಿತಂ ಸುರಕಿನ್ನರೈಃ |
ಕಾಲಂ ನವತಿಕಲ್ಪಂ ತು ತತ್ರ ಭುಕ್ತ್ವಾ ಸುಖಂ ನರಃ || ೮೪ ||

ರುದ್ರಲೋಕಂ ಸಮಾಯಾತಿ ಸುಖದಂ ಸೇವಿತಂ ನರೈಃ |
ಸಿದ್ಧವಿದ್ಯಾಧರೈರ್ಯಕ್ಷೈರ್ಭೂಷಿತಂ ದೈತ್ಯದಾನವೈಃ || ೮೫ ||

ಅಶೀತಿಕಲ್ಪಕಾಲಂ ತು ತತ್ರ ಭುಕ್ತ್ವಾ ಸುಖಂ ನರಃ |
ತದಂತೇ ಯಾತಿ ಗೋಲೋಕಂ ಸರ್ವಭೋಗಸಮನ್ವಿತಂ || ೮೬ ||

ಸುರಸಿದ್ಧಾಪ್ಸರೋಭಿಶ್ಚ ಶೋಭಿತಂ ಸುಮನೋಹರಂ |
ತತ್ರ ಸಪ್ತತಿಕಲ್ಪಂ ತು ಭುಕ್ತ್ವಾ ಭೋಗಾನಭೀಪ್ಸಿತಾನ್ || ೮೭ ||

---

ಉತ್ತಮರೂಪವನ್ನೇ ಇವನೂ ಧರಿಸಿ ಅಲ್ಲಿ ಉತ್ಕೃಷ್ಟಭೋಗಗಳನ್ನನುಭವಿಸಿ ಬಹುವಾಗಿ ಕ್ರೀಡಿಸಿ ಕೊನೆಗೆ ಸಕಲೇಷ್ಟಾರ್ಥದಾಯಕವಾದ ಬ್ರಹ್ಮಸದನಕ್ಕೆ ಬರುವನು.

೮೪-೮೫. ಆ ಬ್ರಹ್ಮಸದನವು ಸಿದ್ಧ, ವಿದ್ಯಾಧರರಿಂದಲೂ, ದೇವಕಿನ್ನರರಿಂದಲೂ ಅಲಂಕೃತವಾಗಿರುತ್ತದೆ. ಅಲ್ಲಿ ಈ ಮನುಷ್ಯನು ತೊಂಬತ್ತು ಕಲ್ಪಗಳು ಭೋಗಪಟ್ಟು, ಸುಖಪ್ರದವು, ಸಿದ್ಧ, ವಿದ್ಯಾಧರ, ಯಕ್ಷ, ದೈತ್ಯ, ದಾನವ ಇವರಿಂದ ಭೂಷಿತವೂ ಆಗಿರುವ ರುದ್ರಲೋಕಕ್ಕೆ ಹೋಗುವನು.

೮೬-೮೭. ಅಲ್ಲಿ ಮನುಷ್ಯನು ಎಂಬತ್ತು ಕಲ್ಪಗಳಕಾಲ ಸುಖವನ್ನನುಭವಿಸಿ ಆಮೇಲೆ ಸಕಲಭೋಗಯುಕ್ತವು, ದೇವತೆ, ಸಿದ್ಧ, ಅಪ್ಸರಸ್ತ್ರೀಯರು, ಇವರಿಂದ ಅಲಂಕರಿಸಲ್ಪಟ್ಟ, ಅತ್ಯಂತ ಮನೋಹರವಾದ ಗೋಲೋಕಕ್ಕೆ ಹೋಗುವನು.

೮೭-೮೮. ಅಲ್ಲಿ ಎಪ್ಪತ್ತುಕಲ್ಪಗಳು ಇಷ್ಟಭೋಗಗಳನ್ನನುಭವಿಸಿ

ಪಶ್ಚಾದಾಯಾತಿ ವೈ ಲೋಕಂ ಪ್ರಾಜಾಪತ್ಯಮನುತ್ತಮಂ ।
ಷಷ್ಟಿಕಲ್ಪಂ ಸುಖಂ ತತ್ರ ಭುಕ್ತ್ವಾ ನಾನಾವಿಧಂ ಮುದಾ ॥ ೮೮ ॥

ತದಂತೇ ಶಕ್ರಭವನಂ ನಾನಾಶ್ಚರ್ಯಂ ಸಮಾವ್ರಜೇತ್ ।
ಆಗತ್ಯ ತತ್ರ ಪಂಚಾಶತ್ಕಲ್ಪಂ ಭುಕ್ತ್ವಾ ಸುಖಂ ನರಃ ॥ ೮೯ ॥

ತದಂತೇ ಸೂರ್ಯಭವನಂ ನಾನಾಶ್ಚರ್ಯಂ ಸಮಾವ್ರಜೇತ್ ।
ತತ್ರ ಭುಕ್ತ್ವಾ ವರಾನ್ಭೋಗಾಂಸ್ತ್ರಿಂಶತ್ಕಲ್ಪಂ ಯಥೇಪ್ಸಿತಾನ್ ॥ ೯೦ ॥

ತಸ್ಮಾದ್ಗಚ್ಛತಿ ತಂ ಲೋಕಂ ಶಶಾಂಕಸ್ಯ ವಿರಿಂಚಿಜೇ ।
ಯತ್ರ ತಿಷ್ಠತಿ ಸೋಮೋಽಸೌ ಸರ್ವದೇವೈರಲಂಕೃತಃ ॥ ೯೧ ॥

ತತ್ರ ವಿಂಶತಿಕಲ್ಪಂ ತು ಭುಕ್ತ್ವಾ ಭೋಗಂ ಸುದುರ್ಲಭಂ ।
ಆದಿತ್ಯಸ್ಯ ತತೋ ಲೋಕಮಾಯಾತಿ ಸುರಪೂಜಿತಂ ॥ ೯೨ ॥

---

ಅನಂತರ ಶ್ರೇಷ್ಠವಾದ ಪ್ರಾಜಾಪತ್ಯ ಲೋಕಕ್ಕೆ ಬರುವನು. ಅಲ್ಲಿ ಅರವತ್ತು ಕಲ್ಪಗಳು ನಾನಾವಿಧಸುಖವನ್ನು ಸಂತೋಷದಿಂದ ಭೋಗಿಸುವನು.

೮೯. ಅದಾದಮೇಲೆ ಅನೇಕವಿಧಾಶ್ಚರ್ಯಯುಕ್ತವಾದ ಇಂದ್ರಭವನಕ್ಕೆ ಬರುವನು. ಅಲ್ಲಿಗೆ ಬಂದನಂತರ ಮನುಷ್ಯನು ಐವತ್ತುಕಲ್ಪಗಳಕಾಲ ಸುಖವನ್ನು ಅನುಭವಿಸುವನು.

೯೦. ಅದು ಮುಗಿದಮೇಲೆ ಅನೇಕಾಶ್ಚರ್ಯಗಳುಳ್ಳ ಸೂರ್ಯಮಂದಿರಕ್ಕೆ ಬರುವನು. ಅಲ್ಲಿ ಉತ್ತಮಭೋಗಗಳನ್ನು ಯಥೇಷ್ಟವಾಗಿ ಮೂವತ್ತುಕಲ್ಪಗಳ ವರೆಗೆ ಅನುಭವಿಸುವನು.

೯೧. ಬ್ರಹ್ಮಜಾತಳೇ ! ಆಮೇಲೆ ಅವನು ಸೂರ್ಯಲೋಕವನ್ನು ಬಿಟ್ಟು ಸಕಲದೇವತೆಗಳಿಂದಲಂಕೃತವಾದ, ಚಂದ್ರನಿರುವ, ಶಶಾಂಕಲೋಕಕ್ಕೆ ಹೋಗುವನು.

೯೨. ಅಲ್ಲಿ ಅತ್ಯಂತ ದುರ್ಲಭವಾದ ಭೋಗವನ್ನು ಇಪ್ಪತ್ತುಕಲ್ಪಗಳ ಕಾಲ ಅನುಭವಿಸಿ ಅನಂತರ ದೇವಪೂಜಿತವಾದ ಆದಿತ್ಯಲೋಕಕ್ಕೆ ಹೋಗುವನು.

ತತ್ರ ಭುಕ್ತ್ವಾ ಶುಭಾನ್ಭೋಗಾನ್ದಶಕಲ್ಪಂ ಸುನಿರ್ವೃತಃ ।
ತಸ್ಮಾದಾಯಾತಿ ಭವನಂ ಗಂಧರ್ವಾಣಾಂ ಸುದುರ್ಲಭಂ ॥ ೯೩ ॥

ತತ್ರ ಭೋಗಾನ್ಸಮಸ್ತಾಂಶ್ಚ ಕಲ್ಪಮೇಕಂ ಯಥಾಸುಖಂ ।
ಭುಕ್ತ್ವಾ ಚಾಯಾತಿ ಮೇದಿನ್ಯಾಂ ರಾಜಾ ಭವತಿ ಧಾರ್ಮಿಕಃ ॥ ೯೪ ॥

ಚಕ್ರವರ್ತೀ ಮಹಾವೀರ್ಯೋ ಗುಣೈಸ್ಸರ್ವೈರಲಂಕೃತಃ ।
ಕೃತ್ವಾ ರಾಜ್ಯಂ ತು ಧರ್ಮೇಣ ಯಜ್ಞೈರಿಷ್ಟ್ವಾ ಸದಕ್ಷಿಣೈಃ ॥ ೯೫ ॥

ತದಂತೇ ಯೋಗಿನಾಂ ಲೋಕಂ ಗತ್ವಾ ಮೋಕ್ಷಪ್ರದಂ ಶಿವಂ ।
ತತ್ರ ಭುಕ್ತ್ವಾ ವರಾನ್ಭೋಗಾನ್ಯಾವದಾಭೂತಸಂಪ್ಲವಂ ॥ ೯೬ ॥

ತಸ್ಮಾತ್ಪುನರಿಹಾಯಾತೋ ಜಾಯತೇ ಯೋಗಿನಾಂ ಕುಲೇ ॥ ೯೭ ॥

---

೯೩. ಅಲ್ಲಿ ಹತ್ತುಕಲ್ಪಗಳವರೆಗೆ ಅತ್ಯಂತ ಸುಖಿಯಾಗಿ ಶುಭಭೋಗಗಳನ್ನು ಅನುಭವಿಸಿ ಅಲ್ಲಿಂದ ಸಾಮಾನ್ಯರು ಪಡೆಯಲಶಕ್ಯವಾದ ಗಂಧರ್ವಭವನಕ್ಕೆ ಬರುವನು.

೯೪. ಅಲ್ಲಿ ಒಂದು ಕಲ್ಪಕಾಲ ಸುಖವಾಗಿ ಸಮಸ್ತಭೋಗಗಳನ್ನೂ ಅನುಭವಿಸಿ ಭೂಲೋಕದಲ್ಲಿ ಧರ್ಮಿಷ್ಠನಾದ ರಾಜನಾಗಿ ಹುಟ್ಟುವನು.

೯೫. ಆಗ ಅವನು ಮಹಾಪರಾಕ್ರಮಶಾಲಿಯಾದ ಚಕ್ರವರ್ತಿಯಾಗಿ, ಸಕಲ ಸುಗುಣಗಳಿಂದ ಕೂಡಿ ಧರ್ಮದಿಂದ ರಾಜ್ಯಪರಿಪಾಲನೆ ಮಾಡುತ್ತಾ ಯಜ್ಞಗಳನ್ನು ಮಾಡಿ ದಕ್ಷಿಣೆಗಳನ್ನು ಕೊಡುವನು.

೯೬. ಆ ಜನ್ಮವು ಕಳೆದನಂತರ ಮೋಕ್ಷದಾಯಕವು, ಮಂಗಳಪ್ರದವೂ ಆದ ಯೋಗಿಲೋಕಕ್ಕೆ ಹೋಗಿ ಅಲ್ಲಿ ಪ್ರಳಯಪರ್ಯಂತವಾಗಿ ಉತ್ಕೃಷ್ಟಭೋಗಗಳನ್ನು ಅನುಭವಿಸುವನು.

೯೭-೯೮. ಸಾಧ್ವಿಯೇ ! ಅಲ್ಲಿಂದ ಪುನಃ ಈ ಲೋಕಕ್ಕೆ ಬಂದು ಉತ್ತಮವು, ಮಂಗಳಕರವು, ದುರ್ಲಭವು, ಸಜ್ಜನಸಂಮತವೂ ಆದ ವಿಷ್ಣುಭಕ್ತರಾದ

ಪ್ರವರೇ ವೈಷ್ಣವೇ ಭದ್ರೇ ದುರ್ಲಭೇ ಸಾಧುಸಂಮತೇ ।
ಚತುರ್ವೇದೀ ವಿಪ್ರವರೋ ಬ್ರಹ್ಮಯಜ್ಞಪರಃ ಸತಿ ॥ ೯೮ ॥

ವೈಷ್ಣವಂ ಯೋಗಮಾಸಾದ್ಯ ಕೈವಲ್ಯಂ ಮೋಕ್ಷಮಾಪ್ನುಯಾತ್ ॥ ೯೯ ॥

ಏವಂ ಯಾತ್ರಾಫಲಂ ತುಭ್ಯಂ ಪ್ರೋಕ್ತಂ ಶ್ರೀಪುರುಷೋತ್ತಮೇ ।
ಭುಕ್ತಿಮುಕ್ತಿಪ್ರದಂ ನೃಣಾಂ ಕಿಮನ್ಯಚ್ಛ್ರೋತುಮಿಚ್ಛಸಿ ॥ ೧೦೦ ॥

ಇತಿ ಶ್ರೀನಾರದೀಯಮಹಾಪುರಾಣೋತ್ತರಭಾಗೇ ಮೋಹಿನೀವಸು ಸಂವಾದೇ ಪುರುಷೋತ್ತಮಮಾಹಾತ್ಮ್ಯೇ ಪುರುಷೋತ್ತಮಕ್ಷೇತ್ರ ಯಾತ್ರಾಫಲವರ್ಣನಂ ನಾಮ ಏಕಷಷ್ಟಿತಮೋಽಧ್ಯಾಯಃ

---

ಯೋಗಿಗಳ ಕುಲದಲ್ಲಿ ಚತುರ್ವೇದಪಾರಂಗತನು, ಬ್ರಹ್ಮಯಜ್ಞಪರನೂ ಆದ ಉತ್ತಮ ಬ್ರಾಹ್ಮಣನಾಗಿ ಹುಟ್ಟುವನು.

೯೯-೧೦೦. ಅಲ್ಲಿ ವೈಷ್ಣವಯೋಗವನ್ನು ಹೊಂದಿ, ಮೋಕ್ಷ ಕೈವಲ್ಯವನ್ನು ಪಡೆಯುವನು. ಈರೀತಿಯಾಗಿ ನಿನಗೆ ಪುರುಷೋತ್ತಮಯಾತ್ರೆಯ ಫಲವನ್ನು ಹೇಳಿರುವೆನು. ಈ ಫಲಶ್ರವಣವು ಮನುಷ್ಯರಿಗೆ ಭೋಗಮೋಕ್ಷ ದಾಯಕವು. ಮೋಹಿನೀ ! ನೀನು ಇನ್ನೇನನ್ನು ಕೇಳಬಯಸುವೆ ?

ಇಂತು ಶ್ರೀನಾರದೀಯಪುರಾಣೋತ್ತರಭಾಗದೊಳು ಮೋಹಿನೀ ವಸು ಸಂವಾದದೊಳು ಪುರುಷೋತ್ತಮಕ್ಷೇತ್ರ ಯಾತ್ರೆಯ ಫಲ ವರ್ಣನೆಯೆಂಬ ಅರವತ್ತೊಂದನೆಯ ಅಧ್ಯಾಯವು ಮುಗಿದುದು.



# ದ್ವಿಷಷ್ಟಿತಮೋಽಧ್ಯಾಯಃ

---

## ವಸಿಷ್ಠ ಉವಾಚ

ಏತಚ್ಛ್ರುತ್ವಾ ತು ಭೂಪಾಲ ಮೋಹಿನೀ ವಿಧಿನಂದಿನೀ ।
ಪುರುಷೋತ್ತಮಮಾಹಾತ್ಮ್ಯಂ ಭುಕ್ತಿಮುಕ್ತಿಪ್ರದಾಯಕಂ ॥ ೧ ॥

ಪುನಃ ಪಪ್ರಚ್ಛ ತಂ ವಿಪ್ರಂ ವಸುಂ ಸ್ವಸ್ಯ ಪುರೋಹಿತಂ ।

ಮೋಹಿನ್ಯುವಾಚ

ಶ್ರುತಮತ್ಯದ್ಭುತಂ ವಿಪ್ರ ಪುರುಷೋತ್ತಮಸಂಭವಂ ॥ ೨ ॥

ಮಾಹಾತ್ಮ್ಯಂ ಚಾಧುನಾ ಬ್ರೂಹಿ ಪ್ರಯಾಗಸ್ಯಾಪಿ ಸುವ್ರತ ।
ತೀರ್ಥರಾಜಃ ಪ್ರಯಾಗಾಖ್ಯಃ ಶ್ರುತಃ ಪೂರ್ವಂ ಮಯಾ ಗುರೋ ॥ ೩ ॥

---

## ಅರವತ್ತೆರಡನೆಯ ಅಧ್ಯಾಯ

೧-೨. ವಸಿಷ್ಠನು ಹೇಳಿದನು—ಭೂಪತಿಯೇ! ಬ್ರಹ್ಮಕುಮಾರಿಯಾದ ಮೋಹಿನಿಯು ಭೋಗಮೋಕ್ಷದಾಯಕವಾದ ಈ ಪುರುಷೋತ್ತಮ ಮಾಹಾತ್ಮ್ಯೆಯನ್ನು ಕೇಳಿ ತನ್ನ ಪುರೋಹಿತನಾದ ವಸುವೆಂಬ ಬ್ರಾಹ್ಮಣನನ್ನು ಪುನಃ ಪ್ರಶ್ನೆಮಾಡಿದಳು.

೨-೩. ಮೋಹಿನಿಯು ಹೇಳಿದಳು—ಬ್ರಾಹ್ಮಣನೇ! ಪುರುಷೋತ್ತಮ ಕ್ಷೇತ್ರದಲ್ಲಿರುವ ತೀರ್ಥಾದಿಗಳ ಅದ್ಭುತಮಹಿಮೆಯನ್ನು ನಿನ್ನಿಂದ ಕೇಳಿದೆನು. ಈಗ ಪ್ರಯಾಗಕ್ಷೇತ್ರದ ಮಾಹಾತ್ಮ್ಯೆಯನ್ನೂ ಹೇಳು. ಸುವ್ರತನೇ! ಪೂರ್ವದಲ್ಲಿ ನಾನು ಪ್ರಯಾಗವೆಂಬ ಉತ್ತಮತೀರ್ಥದ ವಿಷಯವನ್ನು ಕೇಳಿದ್ದೆನು.

ತನ್ಮಾಹಾತ್ಮ್ಯಂ ಸಮಾಖ್ಯಾಹಿ ತೀರ್ಥಯಾತ್ರಾವಿಧಾನಯುಕ್ ।
ಸಾಮಾನ್ಯಾನಾಂ ವಿಶೇಷಾಣಾಂ ತೀರ್ಥಾನಾಂ ಗಮನೇ ದ್ವಿಜ ॥ ೪ ॥

ಯತ್ಕರ್ತವ್ಯಂ ಚ ವಿಧಿನಾ ನೃಭಿರ್ಧರ್ಮಪರಾಯಣೈಃ ।
ತಚ್ಛ್ರುತ್ವಾ ಸ ದ್ವಿಜೋ ರಾಜನ್ಮೋಹಿನ್ಯಾ ಭಾಷಿತಂ ವಚಃ ॥ ೫ ॥

ಸಾಮಾನ್ಯವಿಧಿಪೂರ್ವಂ ತತ್ಪ್ರಯಾಗಾಖ್ಯಾನಮಬ್ರವೀತ್ ।
ವಸುರುವಾಚ
ಶೃಣು ಭದ್ರೇ ಪ್ರವಕ್ಷ್ಯಾಮಿ ತೀರ್ಥಾಭಿಗಮನೇ ವಿಧಿಂ ॥ ೬ ॥

ಯಂ ಸಮಾಶ್ರಿತ್ಯ ಮನುಜೋ ಯಥೋಕ್ತಂ ಫಲಮಾಪ್ನುಯಾತ್ ।
ತೀರ್ಥಾಭಿಗಮನಂ ಪುಣ್ಯಂ ಯಜ್ಞೈರಪಿ ವಿಶಿಷ್ಯತೇ ॥ ೭ ॥

ಅನುಪೋಷ್ಯ ತ್ರಿರಾತ್ರಾಣಿ ತೀರ್ಥಾನ್ಯಪ್ಯಭಿಗಮ್ಯ ಚ ।
ಅದತ್ವಾ ಕಾಂಚನಂ ಗಾಶ್ಚ ದರಿದ್ರೋ ಜಾಯತೇ ನರಃ ॥ ೮ ॥

---

೪-೫. ದ್ವಿಜನೇ! ಆ ಪ್ರಯಾಗದ ಮಾಹಾತ್ಮ್ಯೆಯನ್ನು ತೀರ್ಥಯಾತ್ರಾ ವಿಧಾನ ಸಹಿತವಾಗಿ ನನಗೆ ಹೇಳು. ಧರ್ಮಾಚರಣೆಯಲ್ಲಾಸಕ್ತರಾದ ಮನುಷ್ಯರು ಸಾಮಾನ್ಯ ಅಥವಾ ವಿಶೇಷತೀರ್ಥಗಳಿಗೆ ಹೋದಾಗ ಏನನ್ನು ಮಾಡಬೇಕು? ಅದರ ವಿಧಾನವಾದರೂ ಯಾವುದು?

೫-೬. ರಾಜನೇ! ಆ ಬ್ರಾಹ್ಮಣನು ಮೋಹಿನಿಯು ಹೇಳಿದುದನ್ನು ಕೇಳಿ ಸಾಮಾನ್ಯ ವಿಧಾನಪೂರ್ವಕವಾಗಿ ಪ್ರಯಾಗಾಖ್ಯಾನವನ್ನು ಹೇಳತೊಡಗಿದನು.

೬-೭. ವಸುವು ಹೇಳಿದನು:—ಭದ್ರೇ! ತೀರ್ಥಯಾತ್ರೆಯ ವಿಧಾನವನ್ನು ಹೇಳುವೆನು; ಕೇಳು. ಆ ವಿಧಾನವನ್ನಾಶ್ರಯಿಸಿದರೆ ಮನುಷ್ಯನು ವಿಹಿತಫಲವನ್ನು ಸಂಪೂರ್ಣವಾಗಿ ಪಡೆಯುವನು. ತೀರ್ಥಯಾತ್ರೆಯು ಪುಣ್ಯಕರವಾದುದು. ಅದು ಯಜ್ಞಗಳಿಗಿಂತಲೂ ಅಧಿಕವಾದುದು.

೮. ತೀರ್ಥಕ್ಕೆ ಹೋಗಿಯೂ ಮೂರು ದಿವಸಗಳು ಉಪವಾಸಮಾಡದಿದ್ದರೆ ಮತ್ತು ಹಿರಣ್ಯ, ಗೋದಾನಗಳನ್ನೂ ಮಾಡದಿದ್ದರೆ ಮನುಷ್ಯನು ಬಡವನಾಗುವನು.

ಅಗ್ನಿಷ್ಟೋಮಾದಿಭಿರ್ಯಜ್ಞೈರಿಷ್ಟ್ವಾ ವಿಪುಲದಕ್ಷಿಣೈಃ ।
ನ ತತ್ಫಲಮವಾಪ್ನೋತಿ ತೀರ್ಥಾಭಿಗಮನೇನ ಯತ್ ॥ ೯ ॥

ಅಜ್ಞಾನೇನಾಪಿ ಯಸ್ಯೇಹ ತೀರ್ಥಾಭಿಗಮನಂ ಭವೇತ್ ।
ಸರ್ವಕಾಮಸಮೃದ್ಧಃ ಸ ಸ್ವರ್ಗಲೋಕೇ ಮಹೀಯತೇ ॥ ೧೦ ॥

ಸ್ಥಾನಂ ಚ ಲಭತೇ ನಿತ್ಯಂ ಧನಧಾನ್ಯಸಮಾಕುಲಂ ।
ಐಶ್ವರ್ಯಜ್ಞಾನಸಂಪೂರ್ಣಃ ಸದಾ ಭವತಿ ಭೋಗವಾನ್ ॥ ೧೧ ॥

ತಾರಿತಾಃ ಪಿತರಸ್ತೇನ ನರಕಾತ್ಪ್ರಪಿತಾಮಹಾಃ ।
ಯಸ್ಯ ಹಸ್ತೌ ಚ ಪಾದೌ ಚ ಮನಶ್ಚೈವ ಸುಸಂಯತಂ ॥ ೧೨ ॥

ವಿದ್ಯಾ ತಪಶ್ಚ ಕೀರ್ತಿಶ್ಚ ಸ ತೀರ್ಥಫಲಮಶ್ನುತೇ ।
ಪ್ರತಿಗ್ರಹಾದಪಾವೃತ್ತಃ ಸಂತುಷ್ಟೋ ಯೇನ ಕೇನಚಿತ್ ॥ ೧೩ ॥

---

೯. ಬಹುದಕ್ಷಿಣೆಗಳನ್ನು ಕೊಟ್ಟು, ಅಗ್ನಿಷ್ಟೋಮ ಮುಂತಾದ ಯಾಗಗಳನ್ನು ಮಾಡಿದರೂ ತೀರ್ಥಯಾತ್ರೆಯ ಫಲವನ್ನು ಹೊಂದಲಾರನು.

೧೦. ತಿಳಿಯದೆ ತೀರ್ಥಯಾತ್ರೆಯನ್ನು ಮಾಡುವವನೂ ಸಹ ಇಷ್ಟಾರ್ಥಗಳನ್ನೆಲ್ಲಾ ಹೊಂದಿ ಸ್ವರ್ಗಲೋಕಕ್ಕೆ ಹೋಗಿ ಭೋಗಿಸುವನು.

೧೧-೧೨. ಅಷ್ಟೇ ಅಲ್ಲ; ಆವನು ಧನಧಾನ್ಯ ಪರಿಪೂರ್ಣವಾದ ಸ್ಥಾನವನ್ನೂ ಹೊಂದಿ ಸಂಪೂರ್ಣವಾದ ಐಶ್ವರ್ಯ ಜ್ಞಾನಗಳಿಂದ ಯುಕ್ತನಾಗಿ ಯಾವಾಗಲೂ ಭೋಗಿಯಾಗುವನು. ಮತ್ತು ಅವನು ಪ್ರಪಿತಾಮಹ ಮುಂತಾದ ಪಿತೃಗಳನ್ನೂ ಸಹ ಉದ್ಧಾರಮಾಡ.ವನು.

೧೨-೧೩. ಹಸ್ತ, ಪಾದ, ಮನಸ್ಸು ಇವುಗಳನ್ನು ವಶಪಡಿಸಿಕೊಂಡು ವಿದ್ಯೆ, ತಪಸ್ಸು, ಕೀರ್ತಿ ಇವುಗಳನ್ನು ಸಂಪಾದಿಸಿದವನು ತೀರ್ಥಯಾತ್ರೆಯ ಫಲವನ್ನು ಪಡೆಯುವನು.

ಅಹಂಕಾರವಿಮುಕ್ತಶ್ಚ ಸ ತೀರ್ಥಫಲಮಾಪ್ನುಯಾತ್ ।
ಅಕಲ್ಕಕೋ ನಿರಾರಂಭೋ ಲಘ್ವಾಹಾರೋ ಜಿತೇಂದ್ರಿಯಃ ॥ ೧೪ ॥

ವಿಮುಕ್ತಾಃ ಸರ್ವಸಂಗೈಸ್ತು ಸ ತೀರ್ಥಫಲಭಾಗ್ಭವೇತ್ ।
ತೀರ್ಥಾನ್ಯನುಸರನ್ಧೀರಃ ಶ್ರದ್ದಧಾನಃ ಸಮಾಹಿತಃ ॥ ೧೫ ॥

ಕೃತಪಾಪೋ ವಿಶುಧ್ಯೇತ್ತು ಕಿಂ ಪುನಃ ಶುದ್ಧಕರ್ಮಕೃತ್ ।
ಅಶ್ರದ್ದಧಾನಃ ಪಾಪಾತ್ಮಾ ನಾಸ್ತಿಕೋಽಚ್ಛಿನ್ನಸಂಶಯಃ ॥ ೧೬ ॥

ಹೇತುನಿಷ್ಠಶ್ಚ ಪಂಚೈತೇ ನ ತೀರ್ಥಫಲಭಾಗಿನಃ ।
ನೃಣಾಂ ಪಾಪಕೃತಾಂ ತೀರ್ಥೇ ಪಾಪಸ್ಯ ಶಮನಂ ಭವೇತ್ ॥ ೧೭ ॥

---

೧೩-೧೪. ಅಹಂಕಾರವನ್ನು ಬಿಟ್ಟು, ಜಂಭವಿಲ್ಲದೆ, ಕಾಮ್ಯಕರ್ಮ ರಹಿತನಾಗಿ, ಲಘುವಾದ ಆಹಾರವನ್ನು ಸೇವಿಸುತ್ತ, ಇಂದ್ರಿಯಗಳನ್ನು ಜಯಿಸಿ, ಪ್ರತಿಗ್ರಹವನ್ನು ಪರಿತ್ಯಜಿಸಿ, ದೈವಲಬ್ಧದಿಂದಲೇ ಸಂತೋಷಿಸುವವನು ತೀರ್ಥ ಯಾತ್ರೆಯ ಫಲಕ್ಕೆ ಭಾಗಿಯಾಗುವನು.

೧೫. ಸಕಲಸಂಗಗಳನ್ನೂ ಬಿಟ್ಟು ತೀರ್ಥಯಾತ್ರೆ ಮಾಡುವ, ಆಸ್ತಿ ಕನು, ಸಮಾಧಾನಮನಸ್ಕನೂ ಆಗಿರುವ ಧೀರನು ತೀರ್ಥಫಲಭಾಗಿಯಾಗುವನು.

೧೬-೧೭. ಪಾಪಮಾಡಿದವನೂ ಸಹ ತೀರ್ಥಸೇವನೆಯಿಂದ ಪರಿಶುದ್ಧ ನಾಗುವನು. ಅಂದಬಳಿಕ ಪಾಪಕೃತ್ಯವನ್ನು ಮಾಡದೆ . ಸತ್ಕರ್ಮವನ್ನಾಚರಿಸು ವವನು ಪರಿಶುದ್ಧನಾಗುವನೆಂದು ಹೇಳಬೇಕಾದುದೇನು! ಶ್ರದ್ಧೆಯಿಲ್ಲದವನು, ಪಾಪದಿಂದ ದುಃಖಕ್ಕೀಡಾಗಿರುವವನು, ನಾಸ್ತಿಕನು, ತತ್ವಸಂಶಯವುಳ್ಳವನು ಮತ್ತು ಹೈತುಕನಾಗಿ ಎಂದರೆ ಕುಯುಕ್ತಿಗಳಿಂದ ವಾದಮಾಡುತ್ತಾ ವೇದವನ್ನು ನಿಂದಿಸುವವನು ಎಂಬೀ ಐದುಜನರು ತೀರ್ಥಯಾತ್ರೆ ಮಾಡಿದರೂ ಅದರ ಫಲ ವನ್ನು ಪಡೆಯಲಾರರು. ಪಾಪ ಮಾಡಿದ ಜನರ ಪಾಪವು ತೀರ್ಥಸೇವನೆ ಯಿಂದ ಹೋಗುವುದು.

ತೀರ್ಥಾನಿ ಚ ಯಥೋಕ್ತೇನ ವಿಧಿನಾ ಸಂಚರಂತಿ ಯೇ ।
ಸರ್ವದ್ವಂದ್ವಸಹಾ ಧೀರಾಸ್ತೇ ನರಾಃ ಸ್ವರ್ಗಗಾಮಿನಃ ॥ ೧೮ ॥

ಗಂಗಾದಿತೀರ್ಥೇಷು ವಸಂತಿ ಮತ್ಸ್ಯಾ
ದೇವಾಲಯೇ ಪಕ್ಷಿಗಣಾಶ್ಚ ಸಂತಿ ।
ಭಾವೋಜ್ಝಿತಾಸ್ತೇ ನ ಫಲಂ ಲಭಂತೇ
ತೀರ್ಥಾಚ್ಚ ದೇವಾಯತನಾಚ್ಚ ಮುಖ್ಯಾತ್ ॥ ೧೯ ॥

ಭಾವಂ ತತೋ ಹೃತ್ಕಮಲೇ ನಿಧಾಯ
ತೀರ್ಥಾನಿ ಸೇವೇತ ಸಮಾಹಿತಾತ್ಮಾ ।
ಯಾ ತೀರ್ಥಯಾತ್ರಾ ಕಥಿತಾ ಮುನೀಂದ್ರೈಃ
ಕೃತಾ ಪ್ರಯುಕ್ತಾ ಹ್ಯನುಮೋದಿತಾ ಚ ॥ ೨೦ ॥

---

೧೮. ಉಕ್ತವಿಧಾನಾನುಸಾರವಾಗಿ ತೀರ್ಥಯಾತ್ರೆಮಾಡುವ, ಸುಖ ದುಃಖಾದಿ ದ್ವಂದ್ವಸಹಿಷ್ಣುಗಳಾದ ಧೀರಜನರು ಸ್ವರ್ಗಕ್ಕೆ ಹೋಗುವರು.

೧೯. ಗಂಗೆ ಮುಂತಾದ ಉತ್ತಮತೀರ್ಥಗಳಲ್ಲಿ ಮೀನುಗಳು ವಾಸಿಸುತ್ತವೆ. ದೇವಾಲಯದಲ್ಲಿ ಪಕ್ಷಿಸಮೂಹಗಳು ಸೇರಿಕೊಂಡಿರುತ್ತವೆ. ಆದರೆ ಅವು ವಿಹಿತರೀತಿಯಲ್ಲಿ ಅನುಸಂಧಾನಪೂರ್ವಕ ಭಕ್ತಿರಹಿತಗಳಾಗಿರುವ ಕಾರಣ ತೀರ್ಥ ದೇವಾಲಯ ಸೇವನೆಗಳ ಫಲವನ್ನು ಪಡೆಯುವುದಿಲ್ಲ.

೨೦-೨೧. ಆದಕಾರಣ ಹೃದಯಕಮಲದಲ್ಲಿ ಭಕ್ತಿಭಾವವನ್ನಿಟ್ಟು ಸಮಾಧಾನಮನಸ್ಸಿನಿಂದ ತೀರ್ಥಗಳನ್ನು ಸೇವಿಸಬೇಕು. ಮುನಿಶ್ರೇಷ್ಠರು ತೀರ್ಥಯಾತ್ರೆಯನ್ನು ಸ್ವತಃ ಮಾಡಿ, ಇತರರಿಂದ ಮಾಡಿಸಿ ಅನುಮೋದಿಸಿರುವರು. ಆದುದರಿಂದ ಗುರುಕುಲವಾಸವನ್ನು ಮುಗಿಸಿ ಅವರ ಅಪ್ಪಣೆಯನ್ನು ಪಡೆದು ಜಿತೇಂದ್ರಿಯನಾದ ಬ್ರಹ್ಮಚಾರಿಯು ಅಲ್ಪವ್ಯಯ ಅಥವಾ ಸರ್ವಸ್ವವ್ಯಯದಿಂದ

ತಾಂ ಬ್ರಹ್ಮಚಾರೀ ವಿಧಿವತ್ಕರೋತಿ
ಸುಸಂಯತೋ ಗುರುಣಾ ಸಂನಿಯುಕ್ತಃ ।
ಸರ್ವಸ್ವನಾಶೇಪ್ಯಥ ವಾಲ್ಪಪಕ್ಷೇ
ಸ ಬ್ರಾಹ್ಮಣಾನಗ್ರತ ಏವ ಕೃತ್ವಾ　　॥ ೨೧ ॥

ಯಜ್ಞಾಧಿಕಾರೇಪ್ಯಥವಾ ನಿವೃತ್ತೇ
ವಿಪ್ರಸ್ತು ತೀರ್ಥಾನಿ ಪರಿಭ್ರಮೇಚ್ಛ ।
ತೀರ್ಥೇಷ್ವಲಂ ಯಜ್ಞಫಲಂ ಹಿ ಯಸ್ಮಾತ್
ಪ್ರೋಕ್ತಂ ಮುನೀಂದ್ರೈರಮಲಸ್ವಭಾವೈಃ　　॥ ೨೨ ॥

ಯಸ್ಯೇಷ್ಟಿಯಜ್ಞೇಷ್ವಧಿಕಾರಿತಾಸ್ತಿ
ವರಂ ಗೃಹಂ ಗೃಹಧರ್ಮಾಶ್ಚ ಸರ್ವೇ ।
ಏವಂ ಗೃಹಸ್ಥಾಶ್ರಮಸಂಸ್ಥಿತಸ್ಯ
ತೀರ್ಥೇ ಗತಿಃ ಪೂರ್ವತರೈರ್ನಿಷಿದ್ಧಾ ।
ಸರ್ವಾಣಿ ತೀರ್ಥಾನ್ಯಪಿ ಚಾಗ್ನಿಹೋತ್ರ
ತುಲ್ಯಾನಿ ನೈವೇತಿ ವದಂತಿ ಕೇಚಿತ್　　॥ ೨೩ ॥

---

ಲಾದರೂ ಬ್ರಾಹ್ಮಣರನ್ನು ಮುಂದೆಮಾಡಿಕೊಂಡು ವಿಧಿವತ್ತಾಗಿ ತೀರ್ಥಯಾತ್ರೆಯನ್ನು ಆಚರಿಸಬೇಕು.

೨೨. ನಿರ್ದೋಷಸ್ವಭಾವೋಪೇತರಾದ ಮುನೀಂದ್ರರು ತೀರ್ಥಯಾತ್ರೆಯಿಂದ ವಿಶೇಷವಾಗಿ ಯಜ್ಞಫಲವು ಲಭಿಸುತ್ತದೆಯೆಂದು ಹೇಳಿರುವುದರಿಂದ ಯಜ್ಞಾಧಿಕಾರವಿರಲಿ ಅಥವಾ ಇಲ್ಲದಿರಲಿ ಬ್ರಾಹ್ಮಣನು ತೀರ್ಥಯಾತ್ರೆಯನ್ನು ಮಾಡಬೇಕು.

೨೩. "ಇಷ್ಟಿಯಜ್ಞಗಳಲ್ಲಿ ಅಧಿಕಾರವನ್ನು ಪಡೆದಿರುವವರು ಗೃಹಸ್ಥಧರ್ಮಗಳನ್ನಾಚರಿಸುವುದೇ ಉತ್ತಮವು. ಸಕಲ ತೀರ್ಥಗಳೂ ಅಗ್ನಿಹೋತ್ರಕ್ಕೆ ಸಮವಾಗಲಾರವು ಎಂಬುದಾಗಿ ಗೃಹಸ್ಥಾಶ್ರಮದಲ್ಲಿರುವವರಿಗೆ ತೀರ್ಥಯಾತ್ರೆಯು ಪೂರ್ವೀಕರಿಂದ ನಿಷೇಧಿಸಲ್ಪಟ್ಟಿದೆ" ಎಂದು ಕೆಲವರು ಹೇಳುತ್ತಾರೆ.

ಯೋ ಯಃ ಕಶ್ಚಿತ್ತೀರ್ಥಯಾತ್ರಾಂ ತು ಗಚ್ಛೇತ್
ಸುಸಂಯತಃ ಸ ಚ ಪೂರ್ವಂ ಗೃಹೇಷು ।
ಕೃತೋಪವಾಸಃ ಶುಚಿರಪ್ರಮತ್ತಃ
ಸಂಪೂಜಯೇದ್ಭಕ್ತಿನಮ್ರೋ ಗಣೇಶಂ ॥ ೨೪ ॥

ದೇವಾನ್ ಪಿತೄನ್ ಬ್ರಾಹ್ಮಣಾಂಶ್ಚೈವ ಸಾಧೂನ್
ಧೀಮಾನ್ವಿಪ್ರೋ ವಿತ್ತಶಕ್ತ್ಯಾ ಪ್ರಯತ್ನಾತ್ ।
ಪ್ರತ್ಯಾಗತಶ್ಚಾಪಿ ಪುನಸ್ತಥೈವ
ದೇವಾನ್ ಪಿತೄನ್ ಬ್ರಾಹ್ಮಣಾನ್ ಪೂಜಯೇಚ್ಚ ॥ ೨೫ ॥

ಏವಂ ಕುರ್ವತಸ್ತಸ್ಯ ತೀರ್ಥಾದ್ಯದುಕ್ತಂ
ಫಲಂ ತತ್ಸ್ಯಾನ್ನಾತ್ರ ಸಂದೇಹಲೇಶಃ ॥ ೨೬ ॥

ಗಚ್ಛನ್ದೇಶಾಂತರಂ ಯತ್ತು ಶ್ರಾದ್ಧಂ ಕುರ್ಯಾತ್ಸಸರ್ಪಿಷಾ ।
ಯಾತ್ರಾರ್ಥಮಿತಿ ತತ್ಪ್ರೋಕ್ತಂ ಪ್ರವೇಶೇ ಚ ನ ಸಂಶಯಃ ॥ ೨೭ ॥

---

೨೪-೨೫. ತೀರ್ಥಯಾತ್ರೆಗೆ ಹೋಗುವ ಜ್ಞಾನಿಯಾದ ಬ್ರಾಹ್ಮಣನು ಪೂರ್ವದಲ್ಲಿ ಜಿತೇಂದ್ರಿಯನಾಗಿ ತನ್ನ ಮನೆಯಲ್ಲಿ ಉಪವಾಸದಿಂದ ಆಲಸ್ಯಾದಿಗಳಿಲ್ಲದೆ ಸ್ನಾನಾದಿಗಳಿಂದ ಪರಿಶುದ್ಧನಾಗಿ ಗಣೇಶ, ದೇವತೆ, ಪಿತೃ, ಬ್ರಾಹ್ಮಣ, ಸಾಧು ಇವರನ್ನು ಹಣದಿಂದಲೂ, ದೇಹಪ್ರಯಾಸದಿಂದಲೂ, ಭಕ್ತಿಪೂರ್ವಕವಾಗಿ ಪೂಜಿಸಬೇಕು. ತೀರ್ಥಯಾತ್ರೆಯನ್ನು ಮಾಡಿ ಹಿಂದಿರುಗಿ ಬಂದಮೇಲೂ ದೇವ, ಪಿತೃ, ಬ್ರಾಹ್ಮಣ ಇವರನ್ನು ಹಿಂದಿನಂತೆಯೇ ಪುನಃ ಪೂಜೆಮಾಡಬೇಕು.

೨೬. ಈರೀತಿಯಾಗಿ ಆಚರಿಸುವ ಗೃಹಸ್ಥನಿಗೆ ವಿಹಿತವಾದ ತೀರ್ಥಯಾತ್ರಾಫಲವು ಖಂಡಿತವಾಗಿಯೂ ಬರುವುದು. ಈ ವಿಷಯದಲ್ಲಿ ಸ್ವಲ್ಪವೂ ಸಂದೇಹವಿಲ್ಲ.

೨೭. ದೇಶಾಂತರಕ್ಕೆ ಹೋಗುವವನು ಯಾತ್ರಾರ್ಥವಾಗಿ ಘೃತಾದಿಪದಾರ್ಥಗಳಿಂದ ಶ್ರಾದ್ಧವನ್ನು ಮಾಡಬೇಕು. ತೀರ್ಥಪ್ರವೇಶಮಾಡಿದಾಗಲೂ ಅದೇರೀತಿ ಶ್ರಾದ್ಧವನ್ನು ಮಾಡಬೇಕು. ಸಂಶಯವಿಲ್ಲ.

ಪ್ರಯಾಗೇ ತೀರ್ಥಯಾತ್ರಾಯಾಂ ಪಿತೃಮಾತೃವಿಯೋಗತಃ ।
ಕಚಾನಾಂ ವಪನಂ ಕುರ್ಯಾತ್ತಥಾ ನ ವಿಕಚೋ ಭವೇತ್ ॥ ೨೮ ॥

ಉದ್ಯತಶ್ಚೇದುಪಾಗಂತುಂ ಶ್ರಾದ್ಧಂ ಕೃತ್ವಾ ವಿಧಾನತಃ ।
ವಿಧಾಯ ಕಾರ್ಪಟೀವೇಷಂ ಕೃತ್ವಾ ಗ್ರಾಮಪ್ರದಕ್ಷಿಣಂ ॥ ೨೯ ॥

ತತೋ ಗ್ರಾಮಾಂತರಂ ಗತ್ವಾ ಶ್ರಾದ್ಧಶೇಷಸ್ಯ ಭೋಜನಂ ।
ತತಃ ಪ್ರತಿದಿನಂ ಗಚ್ಛೇತ್ಪ್ರತಿಗ್ರಹವಿವರ್ಜಿತಃ ॥ ೩೦ ॥

ಪದೇಪದೇಽಶ್ವಮೇಧಸ್ಯ ಸ್ಯಾತ್ಫಲಂ ಗಚ್ಛತೋ ಗಯಾಂ ।
ಬಲೀವರ್ದಸಮಾರೂಢಸ್ತೀರ್ಥಂ ಯೋ ಯಾತಿ ಸುವ್ರತೇ ॥ ೩೧ ॥

ನರಕೇ ವಸತೇ ಘೋರೇ ಗವಾಂ ಕ್ರೋಧೋ ಹಿ ದಾರುಣಃ ।
ಸಲಿಲಂ ಚ ನ ಗೃಹ್ಣಂತಿ ಪಿತರಸ್ತಸ್ಯ ದೇಹಿನಃ ॥ ೩೨ ॥

---

೨೮. ಪ್ರಯಾಗಕ್ಷೇತ್ರ, ತೀರ್ಥಯಾತ್ರೆ, ಮಾತಾಪಿತೃವಿಯೋಗಕಾಲ ಇವುಗಳಲ್ಲಿ ಕ್ಷೌರವನ್ನು ಮಾಡಿಸಿಕೊಳ್ಳಬೇಕು. ಪೂರ್ತಿಯಾಗಿ ಎಲ್ಲಾ ಕೂದಲನ್ನೂ ತೆಗೆಸಬಾರದು.

೨೯-೩೦. ಯಾತ್ರೆಗೆ ಹೋಗಲುದ್ಯುಕ್ತನಾದಾಗ ವಿಧಾನೋಕ್ತಪ್ರಕಾರ ಶ್ರಾದ್ಧಮಾಡಿ ರಹಸ್ಯವೇಷವನ್ನು ಧರಿಸಿ ಗ್ರಾಮಪ್ರದಕ್ಷಿಣೆ ಮಾಡಿ ಅನಂತರ ಬೇರೆ ಗ್ರಾಮಕ್ಕೆ ಹೋಗಿ ಶ್ರಾದ್ಧಶೇಷವನ್ನು ಭೋಜನಮಾಡಬೇಕು. ತರುವಾಯ ದಾನ ತೆಗೆದುಕೊಳ್ಳದಂತೆ ಪ್ರತಿದಿನವೂ ಪ್ರಯಾಣಮಾಡಬೇಕು.

೩೧-೩೨. ಹೀಗೆ ಗಯಾಕ್ಷೇತ್ರಕ್ಕೆ ಹೋಗುವವನಿಗೆ ಹೆಜ್ಜೆಹೆಜ್ಜೆಗೂ ಅಶ್ವಮೇಧಯಾಗದ ಫಲವು ದೊರೆಯುವುದು. ಸುವ್ರತೇ ! ಎತ್ತಿನಮೇಲೆ ಕುಳಿತುಕೊಂಡು ತೀರ್ಥಕ್ಕೆ ಹೋಗುವವನು ಭಯಂಕರ ನರಕಕ್ಕೆ ಹೋಗುವನು. ಗೋವುಗಳ ಕೋಪವು ಭಯಂಕರವಾದುದು. ಆರೀತಿ ಮಾಡುವ ಮಾನವನ ಪಿತೃಗಳು ಅವನು ಕೊಟ್ಟ ನೀರನ್ನೂ ಸಹ ಸ್ವೀಕರಿಸುವುದಿಲ್ಲ.

ಐಶ್ವರ್ಯಾಲ್ಲೋಭಮೋಹಾದ್ವಾ ಗಚ್ಛೇದ್ಯಾನೇನ ಯೋ ನರಃ ।
ನಿಷ್ಫಲಂ ತಸ್ಯ ತತ್ತೀರ್ಥಂ ತಸ್ಮಾದ್ಯಾನಂ ವಿವರ್ಜಯೇತ್ ॥ ೩೩ ॥

ಗೋಯಾನೇ ಗೋವಧಃ ಪ್ರೋಕ್ತೋ ಹಯಯಾನೇ ತು ನಿಷ್ಫಲಂ ।
ನರಯಾನೇ ತದರ್ಧಂ ಸ್ಯಾತ್ಪದ್ಭ್ಯಾಂ ತಚ್ಚ ಚತುರ್ಗುಣಂ ॥ ೩೪ ॥

ವರ್ಷಾತಪಾಧಿಕೇ ಛತ್ರೀ ದಂಡೀ ಶರ್ಕರಕಂಟಕೇ ।
ಶರೀರತ್ರಾಣಕಾಮೋಽಸೌ ಸೋಪಾನತ್ಕಃ ಸದಾ ವ್ರಜೇತ್ ॥ ೩೫ ॥

ತೀರ್ಥಂ ಪ್ರಾಪ್ಯಾನುಷಂಗೇಣ ಸ್ನಾನಂ ತೀರ್ಥೇ ಸಮಾಚರೇತ್ ।
ಸ್ನಾನಜಂ ಫಲಮಾಪ್ನೋತಿ ತೀರ್ಥಯಾತ್ರಾಫಲಂ ನ ತು ॥ ೩೬ ॥

---

೩೩. ಐಶ್ವರ್ಯ ಅಥವಾ ಲೋಭಮೋಹಗಳಿಂದಲಾದರೂ ವಾಹನದ ಮೇಲೆ ಕುಳಿತು ತೀರ್ಥಕ್ಕೆ ಹೋಗುವವನ ಯಾತ್ರೆಯು ನಿಷ್ಫಲವಾಗುವುದು. ಆದಕಾರಣ ಯಾತ್ರಿಕನು ವಾಹನದಲ್ಲಿ ಹೋಗಬಾರದು.

೩೪. ಗೋವಿನ ಮೇಲೆ ಕುಳಿತು ಪ್ರಯಾಣಮಾಡಿದರೆ ಗೋವನ್ನು ಕೊಂದಂತೆಯೂ, ಅಶ್ವವಾಹನದಿಂದ ಹೋದರೆ ಆ ಯಾತ್ರೆಯು ನಿಷ್ಫಲವೂ ಆಗುವುದು. ಮನುಷ್ಯವಾಹನವನ್ನು ಪಯೋಗಿಸಿದರೆ ಅರ್ಧಫಲವೂ ಕಾಲ್ನಡಗೆಯಿಂದ ಯಾತ್ರೆಮಾಡಿದರೆ ವಿಹಿತಫಲದ ನಾಲ್ಕರಷ್ಟು ಫಲವೂ ಬರುವುದು ಎಂದು ಉಕ್ತವಾಗಿದೆ.

೩೫. ಯಾತ್ರಿಕನು ಮಳೆ, ಬಿಸಿಲು, ಮುಂತಾದುವುಗಳ ಬಾಧೆಯನ್ನು ಪರಿಹರಿಸಿಕೊಳ್ಳುವುದಕ್ಕಾಗಿ ಛತ್ರಿ, ದಂಡ ಇವನ್ನು ಧರಿಸಬೇಕು. ಮುಳ್ಳಿನ ಬಾಧೆಯನ್ನು ತಪ್ಪಿಸಿ ಶರೀರವನ್ನುಕಾಪಾಡಿಕೊಳ್ಳಬೇಕೆಂದು ಬಯಸುವವನು ಯಾವಾಗಲೂ ಪಾದರಕ್ಷೆ (ಚಪ್ಪಲಿ) ಯನ್ನು ಹಾಕಿಕೊಂಡು ಸಂಚಾರ ಮಾಡಬೇಕು.

೩೬. ಬೇರೆ ಕೆಲಸಕ್ಕಾಗಿ ಹೋಗುತ್ತಿರುವಾಗ ದಾರಿಯಲ್ಲಿ ತೀರ್ಥವು ಸಿಕ್ಕಿದರೆ ಆಗ ಅಲ್ಲಿ ಸ್ನಾನಮಾಡಿದರೆ ಸ್ನಾನಫಲಮಾತ್ರವೇ ದೊರೆಯುವುದು ; ತೀರ್ಥಯಾತ್ರೆಯ ಫಲವು ಬರುವುದಿಲ್ಲ.

ಷೋಡಶಾಂಶಂ ಸ ಲಭತೇ ಯಃ ಪರಾರ್ಥೇನ ಗಚ್ಛತಿ ।
ಅರ್ಧಂ ತೀರ್ಥಫಲಂ ತಸ್ಯ ಯಃ ಪ್ರಸಂಗೇನ ಗಚ್ಛತಿ ॥ ೩೭ ॥
ತೀರ್ಥೇಷು ಬ್ರಾಹ್ಮಣಂ ನೈವ ಪರೀಕ್ಷೇತ ಕದಾಚನ ।
ಅತ್ರಾರ್ಥಿನಮನುಪ್ರಾಪ್ತಂ ಭೋಜ್ಯಂ ತಂ ಮನುರಬ್ರವೀತ್ ॥ ೩೮ ॥
ಸಕ್ತುಭಿಃ ಪಿಂಡದಾನಂ ಚ ಸಂಯಾವೈಃ ಪಾಯಸೇನ ವಾ ।
ಬದರಾಮಲಕೈರ್ವಾಪಿ ಪಿಣ್ಯಾಕೈರ್ವಾ ಸುಲೋಚನೇ ॥ ೩೯ ॥
ಶ್ರಾದ್ಧಂ ತು ತತ್ರ ಕರ್ತವ್ಯಮರ್ಘ್ಯಾವಾಹನವರ್ಜಿತಂ ।
ಶ್ವಧ್ವಾಂಕ್ಷಗೃಧ್ರಪಾಪಿನಾಂ ನೈವ ದೃಷ್ಟಿಹತಂ ಚ ಯತ್ ॥ ೪೦ ॥
ಶ್ರಾದ್ಧಂ ತು ತೈರ್ಥಿಕಂ ಪ್ರೋಕ್ತಂ ಪಿತೄಣಾಂ ತೃಪ್ತಿಕಾರಕಂ ।
ಅಕಾಲೇಪ್ಯಥವಾ ಕಾಲೇ ತೀರ್ಥಶ್ರಾದ್ಧಂ ತಥಾ ನರೈಃ ॥ ೪೧ ॥

---

೩೭. ಇತರರಿಗಾಗಿ ಯಾತ್ರೆಮಾಡುವವನು ವಿಹಿತಫಲದಲ್ಲಿ ಹದಿನಾರನೆಯ ಒಂದು ಭಾಗವನ್ನು ಮಾತ್ರ ಹೊಂದುವನು. ಪ್ರಾಸಂಗಿಕವಾಗಿ ಹೋಗುವವನಿಗೆ ಅರ್ಧ ಫಲ ಬರುವುದು.

೩೮. ತೀರ್ಥಗಳಲ್ಲಿ ಯಾವಾಗಲೂ ಬ್ರಾಹ್ಮಣನನ್ನು ಪರೀಕ್ಷೆ ಮಾಡಬಾರದು. ಅಲ್ಲಿ ಬಂದ ಅರ್ಥಿಗೆ ಭೋಜನಮಾಡಿಸಬೇಕೆಂದು ಮನುವು ಹೇಳಿರುವನು.

೩೯. ಸುಲೋಚನೇ! ಅಲ್ಲಿ ಹಿಟ್ಟು, ಗೋಧಿಪಾಯಸ, ಬದರ, ಆಮಲಕ ಅಥವಾ ಹಿಂಡಿ ಇವುಗಳಲ್ಲಾವುದಾದರೊಂದರಿಂದ ಪಿಂಡಮಾಡಿ ಪಿತೃಗಳಿಗೆ ಕೊಡಬೇಕು.

೪೦. ಅಲ್ಲಿ ನಾಯಿ, ಕಾಗೆ, ಹದ್ದು, ಪಾಪಿಷ್ಠ ಇವರ ದೃಷ್ಟಿಗೆ ಬೀಳದಂತೆ ಅರ್ಚನೆ ಆವಾಹನೆಗಳನ್ನು ಬಿಟ್ಟು ಶ್ರಾದ್ಧಮಾಡಬೇಕು.

೪೧. ತೀರ್ಥದಲ್ಲಿ ಮಾಡುವ ಶ್ರಾದ್ಧವು ಪಿತೃಗಳಿಗೆ ತೃಪ್ತಿಯನ್ನುಂಟುಮಾಡುತ್ತದೆಯೆಂದು ಉಕ್ತವಾಗಿದೆ. ಆದಕಾರಣ ತೀರ್ಥಕ್ಕೆ ಹೋದಾಗ ಅಕಾಲವಾದರೂ ಅಥವಾ ಸಕಾಲವಾದರೂ ಮನುಷ್ಯರು ಶ್ರಾದ್ಧವನ್ನು ಮಾಡಲೇಬೇಕು.

ಪ್ರಾಪ್ತೈರೇವ ಸದಾ ತತ್ರ ಕರ್ತವ್ಯಂ ಪಿತೃತರ್ಪಣಂ ।
ವಿಲಂಬೋ ನೈವ ಕರ್ತವ್ಯೋ ನೈವ ವಿಘ್ನಂ ಸಮಾಚರೇತ್ ॥ ೪೨ ॥

ಪ್ರತಿಕೃತಿಂ ಕುಶಮಯೀಂ ತೀರ್ಥವಾರಿಣಿ ಮಜ್ಜಯೇತ್ ।
ಯಮುದ್ದಿಶ್ಯ ವಿಶಾಲಾಕ್ಷಿ ಸೋಽಷ್ಟಮಾಂಶಂ ಫಲಂ ಲಭೇತ್ ॥ ೪೩ ॥

ಕುಶೋಽಸಿ ಕುಶಪುತ್ರೋಽಸಿ ಬ್ರಹ್ಮಣಾ ನಿರ್ಮಿತಃ ಪುರಾ ।
ತ್ವಯಿ ಸ್ನಾತೇ ತು ಸ ಸ್ನಾತೋ ಯಸ್ಯೇದಂ ಗ್ರಂಥಿಬಂಧನಂ ॥ ೪೪ ॥

ಮುಂಡನಂ ಚೋಪವಾಸಶ್ಚ ಸರ್ವತೀರ್ಥೇಷ್ವಯಂ ವಿಧಿಃ ।
ವರ್ಜಯಿತ್ವಾ ಗಯಾಂ ಗಂಗಾಂ ವಿಶಾಲಾಂ ವಿರಜಾಂ ತಥಾ ॥ ೪೫ ॥

---

೪೨. ತೀರ್ಥಕ್ಕೆ ಹೋದ ಮನುಷ್ಯರು ಯಾವಾಗಲೂ ಅಲ್ಲಿ ಪಿತೃ ತರ್ಪಣಮಾಡಬೇಕು, ಸಾವಕಾಶಮಾಡಬಾರದು. ವಿಘ್ನವನ್ನೂ ಮಾಡ ಬಾರದು.

೪೩. ವಿಶಾಲಾಕ್ಷೀ! ದರ್ಭೆಯಿಂದ ಯಾವ ಮನುಷ್ಯನ ವಿಗ್ರಹವನ್ನು ಮಾಡಿ ತೀರ್ಥೋದಕದಲ್ಲಿ ಅವಗಾಹನಸ್ನಾನಮಾಡಿಸುವನೋ ಆ ಮನುಷ್ಯನಿಗೆ ಎಂಟನೆಯ ಒಂದು ಭಾಗ ತೀರ್ಥಸ್ನಾನಫಲವು ಬರುವುದು.

೪೪. ಕುಶಪುತ್ರನಾದ ನೀನು ಈ ದರ್ಭೆಯಲ್ಲಿ ಆವಾಹಿತನಾಗಿರುವೆ. ನೀನು ಬ್ರಹ್ಮನಿಂದ ಪೂರ್ವದಲ್ಲಿ ನಿರ್ಮಿತನು. ಕುಶರೂಪಿಯಾದ ನೀನು ಸ್ನಾನಮಾಡಿದರೆ ಈ ದರ್ಭೆಗಂಟಿನಲ್ಲಿ ಆವಾಹಿತನಾಗಿರುವ ಮನುಷ್ಯನು ಸ್ನಾನ ಮಾದಿದಂತೆಯೇ ಸರಿ.

೪೫. ಎಲ್ಲಾ ತೀರ್ಥಗಳಲ್ಲಿಯೂ ಕ್ಷೌರ ಮತ್ತು ಉಪವಾಸಗಳು ವಿಹಿತವಾಗಿವೆ. ಗಯೆ, ಗಂಗೆ, ವಿಶಾಲಾ, ವಿರಜಾ ಎಂಬೀ ಕ್ಷೇತ್ರಗಳಲ್ಲಿ ಮಾತ್ರ ಕ್ಷೌರೋಪವಾಸಗಳನ್ನು ಮಾಡಬಾರದು.

ಭೌಮಾನಾಮಥ ತೀರ್ಥಾನಾಂ ಪುಣ್ಯತ್ವೇ ಕಾರಣಂ ಶೃಣು ।
ಯಥಾ ಶರೀರಸ್ಯೋದ್ದೇಶಾಃ ಕೇಚಿನ್ಮುಖ್ಯತಮಾಃ ಸ್ಮೃತಾಃ ॥ ೪೬ ॥
ಪ್ರಭಾವಾದದ್ಭುತಾದ್ಭೂಮೇಃ ಸಲಿಲಸ್ಯ ಚ ತೇಜಸಃ ।
ಪರಿಗ್ರಹಾನ್ಮುನೀನಾಂ ಚ ತೀರ್ಥಾನಾಂ ಪುಣ್ಯತಾ ಸ್ಮೃತಾ ॥ ೪೭ ॥
ಗಂಗಾಂ ಸಂಪ್ರಾಪ್ಯ ಯೋ ದೇವಿ ಮುಂಡನಂ ನೈವ ಕಾರಯೇತ್ ।
ವ್ಯರ್ಥಾ ತಸ್ಯ ಕ್ರಿಯಾ ಸರ್ವಾ ತೀರ್ಥದ್ರೋಹೀ ಭವೇತ್ತಥಾ ॥ ೪೮ ॥
ಗಂಗಾಯಾಂ ಭಾಸ್ಕರಕ್ಷೇತ್ರೇ ಮುಂಡನಂ ಯೋ ನ ಕಾರಯೇತ್ ।
ಸ ಕೋಟಿಕುಲಸಂಯುಕ್ತ ಆಕಲ್ಪಂ ರೌರವಂ ವ್ರಜೇತ್ ॥ ೪೯ ॥
ಗಂಗಾಂ ಪ್ರಾಪ್ಯ ಸರಿಚ್ಛ್ರೇಷ್ಠಾಂ ಕಲ್ಪಾಂತಂ ಪಾಪಸಂಚಯಾಃ ।
ಕೇಶಾನಾಶ್ರಿತ್ಯ ತಿಷ್ಠಂತಿ ತಸ್ಮಾತ್ತಾನ್ಪರಿವರ್ಜಯೇತ್ ॥ ೫೦ ॥

---

೪೬-೪೭. ಭೂಲೋಕದ ತೀರ್ಥಗಳು ಪುಣ್ಯಕರವಾಗಲು ಕಾರಣವನ್ನು ಹೇಳುವೆನು ಕೇಳು :—ಶರೀರದ ಕೆಲವು ಅವಯವಗಳು ಅತ್ಯಂತ ಮುಖ್ಯವಾಗಿರುವಂತೆ ಭೂಮಿ, ನೀರು, ತೇಜಸ್ಸು ಇವುಗಳ ಅದ್ಭುತ ಪ್ರಭಾವ ಮತ್ತು ಮುನಿಗಳ ಪರಿಗ್ರಹಗಳಿಂದ ತೀರ್ಥಗಳು ಪುಣ್ಯಕರವಾಗಿವೆಯೆಂದು ಸ್ಮೃತವಾಗಿದೆ.

೪೮. ದೇವಿಯೇ ಗಂಗೆಗೆ ಹೋಗಿಯೂ ಮುಂಡನವನ್ನು ಮಾಡಿಸಿಕೊಳ್ಳದಿರುವವನು ಮಾಡಿದ ಕರ್ಮವೆಲ್ಲವೂ ನಿಷ್ಫಲವಾಗುವುದು. ಅವನು ತೀರ್ಥದ್ರೋಹಿಯಾಗುವನು.

೪೯. ಗಂಗಾ ಭಾಸ್ಕರಕ್ಷೇತ್ರಗಳಲ್ಲಿ ಕ್ಷೌರಮಾಡಿಸಿಕೊಳ್ಳದಿರುವವನು ಕೋಟಿಕುಲಸಹಿತವಾಗಿ ಕಲ್ಪಮುಗಿಯುವವರೆಗೂ ರೌರವವೆಂಬ ನರಕದಲ್ಲಿರಬೇಕಾಗುತ್ತದೆ.

೫೦. ಪಾಪಸಮೂಹಗಳು ಕಲ್ಪಾಂತದವರೆಗೂ ಕೇಶಗಳನ್ನಾಶ್ರಯಿಸಿಕೊಂಡಿರುತ್ತವೆ. ಆದಕಾರಣ ಅವುಗಳನ್ನು ಶ್ರೇಷ್ಠನದಿಯಾದ ಗಂಗೆಗೆ ಹೋದಾಗ ಕ್ಷೌರಮಾಡಿಸಿಕೊಳ್ಳಬೇಕು. ಆಶ್ರಯವಾದ ಕೂದಲು ತನ್ನನ್ನಾಶ್ರಯಿಸಿಕೊಂಡಿರುವ ಪಾಪಗಳ ಸಹಿತವಾಗಿ ಹೋಗುತ್ತದೆಂದು ಭಾವ.

ಯಾವಂತಿ ನಖಲೋಮಾನಿ ಗಂಗಾತೋಯೇ ಪತಂತಿ ವೈ ।
ತಾವದ್ವರ್ಷಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ॥ ೫೧ ॥

ಪ್ರಯಾಗವ್ಯತಿರೇಕೇ ತು ಗಂಗಾಯಾಂ ಮುಂಡನಂ ನ ಹಿ ।
ಯೋನ್ಯಥಾ ಕುರುತೇ ಮೋಹಾತ್ಸ ಮಹಾರೌರವಂ ವಿಶೇತ್ ॥ ೫೨ ॥

ಸ ಜೀವತ್ಪಿತೃಕೋ ಯಸ್ತು ತೀರ್ಥಂ ಪ್ರಾಪ್ಯ ವಿಧಾನವಿತ್ ।
ಕ್ಷೌರಂ ಸಮಾಚರೇನ್ನೈವ ಶ್ಮಶ್ರೂಣಾಂ ವಪನಂ ಸತಿ ॥ ೫೩ ॥

ಗಯಾದಾವಪಿ ದೇವೇಶಿ ಶ್ಮಶ್ರೂಣಾಂ ವಪನಂ ವಿನಾ ।
ನ ಕ್ಷೌರಂ ಮುನಿಭಿಃ ಸರ್ವೈರ್ನಿಷಿದ್ಧಂ ಚೇತಿ ಕೀರ್ತಿತಂ ॥ ೫೪ ॥

---

೫೧. ಯಾವನ ಉಗುರು ಮತ್ತು ಕೂದಲುಗಳು ಗಂಗೋದಕದಲ್ಲಿ ಎಷ್ಟು ಬೀಳುತ್ತವೆಯೋ ಅಷ್ಟುಸಾವಿರ ವರ್ಷಗಳು ಅವನು ಸ್ವರ್ಗಲೋಕದಲ್ಲಿ ಸತ್ಕರಿಸಲ್ಪಡುವನು.

೫೨. ಪ್ರಯಾಗಕ್ಷೇತ್ರದಲ್ಲಿ ಮಾತ್ರ ಗಂಗಾನದಿಯಲ್ಲಿ ಕ್ಷೌರವು ವಿಹಿತವಾಗಿದೆ. ಇತರಕ್ಷೇತ್ರಗಳಲ್ಲಿರುವ ಗಂಗೆಯಲ್ಲಿ ಕ್ಷೌರವು ವಿಹಿತವಲ್ಲ. ಅಜ್ಞಾನದಿಂದ ಇದಕ್ಕೆ ವಿರುದ್ಧವಾಗಿ ನಡೆಯುವವನು ಮಹಾ ರೌರವವೆಂಬ ನರಕಕ್ಕೆ ಹೋಗುವನು.

೫೩. ಸಾಧ್ವಿಯೇ ! ವಿಧಾನಜ್ಞನು ತೀರ್ಥಕ್ಕೆ ಹೋದರೆ ಜೀವತ್ಪಿತೃಕನಾದರೂ ಕ್ಷೌರಮಾಡಿಸಬೇಕು. ಆದರೆ ಅವನು ಮೀಸೆಯನ್ನುಮಾತ್ರ ಬೋಳಿಸಬಾರದು.

೫೪. ದೇವೇಶೀ ! ಗಯೆ ಮುಂತಾದ ಕ್ಷೇತ್ರಗಳಲ್ಲಿಯೂ ಸಹ ಶ್ಮಶ್ರುವಪನ ವಿನಹ ಕ್ಷೌರವನ್ನು ಮುನಿಗಳೆಲ್ಲರೂ ನಿಷೇಧಿಸಿಲ್ಲವೆಂಬುದಾಗಿ ಉಕ್ತವಾಗಿದೆ.

ಸಶ್ಮಶ್ರುಕೇಶವಪನಂ ಮುಂಡನಂ ತದ್ವಿದುರ್ಬುಧಾಃ ।
ನ ಕ್ಷೌರಂ ಮುಂಡನಂ ಸುಭ್ರು ಕೀರ್ತಿತಂ ವೇದವೇದಿಭಿಃ ॥ ೫೫ ॥

ಇತಿ ಶ್ರೀನಾರದೀಯಪುರಾಣೋತ್ತರಭಾಗೇ ವಸುಮೋಹಿನೀಸಂವಾದೇ
ಪ್ರಯಾಗರಾಜಮಾಹಾತ್ಮ್ಯೇ ತೀರ್ಥವಿಧಿರ್ನಾಮ
ದ್ವಿಷಷ್ಟಿತಮೋಽಧ್ಯಾಯಃ

---

೫೫. ಜ್ಞಾನಿಗಳು ಶ್ಮಶ್ರು, ಕೇಶ ಇವೆರಡನ್ನೂ ಬೋಳಿಸುವುದೇ ಮುಂಡನವು ಎಂದು ಭಾವಿಸಿರುವರು. ಕ್ಷೌರಮಾತ್ರವೇ ಮುಂಡನವಲ್ಲ ಎಂಬುದಾಗಿ ವೇದವೇತ್ತೃಗಳು ಹೇಳಿರುವರು.

ಇಂತು ಶ್ರೀನಾರದೀಯ ಪುರಾಣೋತ್ತರಭಾಗದಲ್ಲಿ ವಸು ಮೋಹಿನೀ
ಸಂವಾದದೊಳು ಪ್ರಯಾಗರಾಜ ಮಾಹಾತ್ಮ್ಯೆಯು ಪ್ರಸಂಗದಲ್ಲಿ
ತೀರ್ಥವಿಧಾನವೆಂಬ ಅರವತ್ತೆರಡನೆಯ ಅಧ್ಯಾಯುವು
ಮುಗಿದುದು.



## ತ್ರಿಷಷ್ಟಿತಮೋऽಧ್ಯಾಯಃ

---

### ವಸುರುವಾಚ

ಶೃಣು ಮೋಹಿನಿ ವಕ್ಷ್ಯಾಮಿ ಮಾಹಾತ್ಮ್ಯಂ ವೇದಸಂಮತಂ ।
ಪ್ರಯಾಗಸ್ಯ ವಿಧಾನೇನ ಸ್ನಾತ್ವಾ ಯತ್ರ ವಿಶುದ್ಧ್ಯತಿ ॥ ೧ ॥

ಕುರುಕ್ಷೇತ್ರಸಮಾ ಗಂಗಾ ಯತ್ರ ತತ್ರಾವಗಾಹಿತಾ ।
ತಸ್ಮಾದ್ದಶಗುಣಾ ಯತ್ರ ಪ್ರೋಕ್ತಾ ವಿಂಧ್ಯೇನ ಸಂಗತಾ ॥ ೨ ॥

ತಸ್ಮಾಚ್ಛತಗುಣಾ ಪ್ರೋಕ್ತಾ ಕಾಶ್ಯಾಮುತ್ತರವಾಹಿನೀ ।
ಕಾಶ್ಯಾಃ ಶತಗುಣಾ ಪ್ರೋಕ್ತಾ ಗಂಗಾ ಯತ್ರಾರ್ಕಜಾನ್ವಿತಾ ॥ ೩ ॥

---

### ಅರವತ್ತುಮೂರನೆಯ ಅಧ್ಯಾಯ

೧. ವಸುವು ಹೇಳಿದನು :—ಮೋಹಿನೀ ! ವಿಧಿವತ್ತಾಗಿ ಸ್ನಾನಮಾಡುವ ಮಾತ್ರದಿಂದಲೇ ಪಾಪಗಳನ್ನು ಪರಿಹರಿಸುವಂತಹ ವೇದಸಂಮತವಾದ ಪ್ರಯಾಗ ಮಾಹಾತ್ಮ್ಯೆಯನ್ನು ಹೇಳುವೆನು ಕೇಳು.

೨. ಗಂಗೆಯಲ್ಲಿ ಯಾವಪ್ರದೇಶದಲ್ಲಿ ಸ್ನಾನಮಾಡಿದರೂ ಕುರುಕ್ಷೇತ್ರ ಯಾತ್ರೆಗೆ ಸಮಾನವಾದ ಫಲವು ಬರುವುದು. ವಿಂಧ್ಯಪರ್ವತದಲ್ಲಿ ಹರಿಯುವ ಗಂಗೆಯು ಅದಕ್ಕಿಂತಲೂ ಹತ್ತರಷ್ಟು ಹೆಚ್ಚುಫಲ ಕೊಡುವುದು.

೩. ಕಾಶಿಯಲ್ಲಿ ಉತ್ತರದಿಕ್ಕಿಗೆ ಹರಿಯುವ ಗಂಗೆಯು ವಿಂಧ್ಯಗಂಗೆಗಿಂತಲೂ ನೂರರಷ್ಟು ಮಹಿಮೆಯುಳ್ಳದು. ಗಂಗಾ ಯಮುನಾ ಸಂಗಮವು ಕಾಶಿಗಿಂತಲೂ ನೂರರಷ್ಟು ಹೆಚ್ಚು ಗುಣವುಳ್ಳದು.

ಸಹಸ್ರಗುಣಿತಾ ಸಾಪಿ ಭವೇತ್ಪಶ್ಚಿಮವಾಹಿನೀ ।
ಸಾ ದೇವಿ ದರ್ಶನಾದೇವ ಬ್ರಹ್ಮಹತ್ಯಾದಿಹಾರಿಣೀ ॥ ೪ ॥

ಪಶ್ಚಿಮಾಭಿಮುಖೀ ಗಂಗಾ ಕಾಲಿಂದ್ಯಾ ಸಹ ಸಂಗತಾ ।
ಹಂತಿ ಕಲ್ಪಶತಂ ಪಾಪಂ ಸಾ ಮಾಘೇ ದೇವಿ ದುರ್ಲಭಾ ॥ ೫ ॥

ಅಮೃತಂ ಕಥ್ಯತೇ ಭದ್ರೇ ಸಾ ವೇಣೀ ಭುವಿ ಸಂಗತಾ ।
ಯಸ್ಯಾಂ ಮಾಘೇ ಮುಹೂರ್ತಂ ತು ದೇವಾನಾಮಪಿ ದುರ್ಲಭಂ ॥ ೬ ॥

ಪೃಥಿವ್ಯಾಂ ಯಾನಿ ತೀರ್ಥಾನಿ ಪುರ್ಯಃ ಪುಣ್ಯಾಸ್ತಥಾ ಸತಿ ।
ಸ್ನಾತುಮಾಯಾಂತಿ ತಾ ವೇಣ್ಯಾಂ ಮಾಘೇ ಮಕರಭಾಸ್ಕರೇ ॥ ೭ ॥

---

೪. ಆದರಲ್ಲಿಯೂ ಪಶ್ಚಿಮವಾಹಿನಿಯಾದುದು ಸಾವಿರಪಾಲು ಹೆಚ್ಚು ಮಹಿಮೆಯುಳ್ಳದು. ದೇವಿ ! ಅದು ದರ್ಶನಮಾತ್ರದಿಂದಲೇ ಬ್ರಹ್ಮಹತ್ಯೆ ಮುಂತಾದ ಪಾಪಗಳನ್ನು ಪರಿಹರಿಸುವುದು.

೫. ದೇವಿಯೇ ! ಯಮುನಾನದಿಯ ಸಂಗಮವಾದ ಪಶ್ಚಿಮಾಭಿಮುಖ ಗಂಗೆಯು ನೂರುಕಲ್ಪಗಳ ಪಾಪವನ್ನು ಪರಿಹರಿಸುತ್ತದೆ. ಮಾಘಮಾಸದಲ್ಲಿ ಆ ನದಿಯ ಸ್ನಾನಾದಿಗಳು ಲಭಿಸುವುದು ಕಷ್ಟ.

೬. ಭದ್ರೇ ! ತ್ರಿವೇಣೀಸಂಗಮಸ್ಥಾನವು ಅಮೃತವೆಂದು ಉಕ್ತವಾಗಿದೆ. ಮಾಘಮಾಸದಲ್ಲಿ ಒಂದು ಮುಹೂರ್ತಕಾಲ ಅಲ್ಲಿ ವಾಸವು ದೇವತೆಗಳಿಗೂ ಕೂಡ ದುರ್ಲಭ.

೭. ಸಾಧ್ವಿಯೇ ! ಮಾಘಮಾಸದಲ್ಲಿ ಮಕರಸಂಕ್ರಮಣವು ಸಂಭವಿಸಿದಾಗ ಭೂಮಂಡಲದಲ್ಲಿರುವ ತೀರ್ಥ, ಪುಣ್ಯಪುರಿ ಇವುಗಳೆಲ್ಲವೂ ಎಂದರೆ ಇವುಗಳ ಅಭಿಮಾನಿದೇವತೆಗಳೆಲ್ಲರೂ ತ್ರಿವೇಣೀ ಸಂಗಮಸ್ಥಾನದಲ್ಲಿ ಸ್ನಾನಮಾಡಲು ಬರುವರು.

ಬ್ರಹ್ಮವಿಷ್ಣುಮಹಾದೇವಾ ರುದ್ರಾದಿತ್ಯಮರುದ್ಗಣಾಃ |
ಗಂಧರ್ವಾ ಲೋಕಪಾಲಾಶ್ಚ ಯಕ್ಷಕಿನ್ನರಗುಹ್ಯಕಾಃ || ೮ ||

ಅಣಿಮಾದಿಗುಣೋಪೇತಾ ಯೇ ಚಾನ್ಯೇ ತತ್ತ್ವದರ್ಶಿನಃ |
ಬ್ರಹ್ಮಾಣೀ ಪಾರ್ವತೀ ಲಕ್ಷ್ಮೀಃ ಶಚೀ ಮೇಧಾದಿತೀ ರತಿಃ || ೯ ||

ಸರ್ವಾಸ್ತಾ ದೇವಪತ್ನ್ಯಶ್ಚ ತಥಾ ನಾಗಾಂಗನಾಃ ಶುಭೇ |
ಘೃತಾಚೀ ಮೇನಕಾ ರಂಭಾಪ್ಯೂರ್ವಶೀ ಚ ತಿಲೋತ್ತಮಾ || ೧೦ ||

ಗಣಾಶ್ಚಾಪ್ಸರಸಾಂ ಸರ್ವೇ ಪಿತೄಣಾಂ ಚ ಗಣಾಸ್ತಥಾ |
ಸ್ನಾತುಮಾಯಾಂತಿ ತೇ ಸರ್ವೇ ಮಾಘೇ ವೇಣ್ಯಾಂ ವಿರಂಚಿಜೇ || ೧೧ ||

ಕೃತೇ ಯುಗೇ ಸ್ವರೂಪೇಣ ಕಲೌ ಪ್ರಚ್ಛನ್ನರೂಪಿಣಃ |
ಸರ್ವತೀರ್ಥಾನಿ ಕೃಷ್ಣಾನಿ ಪಾಪಿನಾಂ ಸಂಗದೋಷತಃ || ೧೨ ||

---

೮-೧೧. ಬ್ರಹ್ಮಕುಮಾರಿಯೇ! ಬ್ರಹ್ಮ, ವಿಷ್ಣು, ಮಹಾದೇವ, ರುದ್ರ, ಆದಿತ್ಯ, ಮರುದ್ಗಣ, ಗಂಧರ್ವ, ಲೋಕಪಾಲಕ, ಯಕ್ಷ, ಕಿನ್ನರ, ಗುಹ್ಯಕ, ಅಣಿಮಾದಿ ವಿಭೂತಿಗಳುಳ್ಳ ಇತರ ತತ್ತ್ವಜ್ಞಾನಿಗಳು, ಸರಸ್ವತೀ, ಪಾರ್ವತೀ, ಲಕ್ಷ್ಮೀ ಶಚಿ, ಮೇಧಾ, ಅದಿತಿ, ರತಿ, ಸಕಲದೇವಪತ್ನಿಯರು, ನಾಗಾಂಗನೆಯರು, ಘೃತಾಚಿ, ಮೇನಕಾ, ರಂಭೆ, ಊರ್ವಶೀ, ತಿಲೋತ್ತಮೆ ಮುಂತಾದ ಅಪ್ಸರಸ್ತ್ರೀ ಗಣಗಳು ಮತ್ತು ಸಕಲ ಪಿತೃಗಣಗಳು ಇವರೆಲ್ಲರೂ ಮಾಘಮಾಸದಲ್ಲಿ ತ್ರಿವೇಣೀ ಸಂಗಮಸ್ನಾನಕ್ಕಾಗಿ ಬರುವರು.

೧೨-೧೩. ಸಕಲತೀರ್ಥಗಳೂ ಕೃತಯುಗದಲ್ಲಿ ಸಹಜರೂಪದಿಂದಿರುವುವು. ಅವು ಕಲಿಯುಗದಲ್ಲಿ ತಮ್ಮಸ್ವರೂಪವನ್ನು ಮರೆಮಾಚಿ ಪಾಪಿಗಳ ಸಂಗದೋಷದಿಂದ ಕಪ್ಪಾಗುವುವು. ಅವೇ ಮಾಘಮಾಸದಲ್ಲಿ ಪ್ರಯಾಗಕ್ಷೇತ್ರದಲ್ಲಿ ಸಂಗಮಸ್ನಾನ ಮಾಡುವುದರಿಂದ ಬೆಳ್ಳಗಾಗುವುವು.

ಭವಂತಿ ಶುಕ್ಲವರ್ಣಾನಿ ಪ್ರಯೋಗೇ ಮಾಘಮಜ್ಜನಾತ್ ।
ಮಕರಸ್ಥೇ ರವೌ ಮಾಘೇ ಗೋವಿಂದಾಚ್ಯುತ ಮಾಧವ ॥ ೧೩ ॥

ಸ್ನಾನೇನ ನೇ ದೇವಪಥೋ ಯಥೋಕ್ತಫಲದೋ ಭವ ।
ಇಮಂ ಮಂತ್ರಂ ಸಮುಚ್ಚಾರ್ಯ ಸ್ನಾನಾನ್ಮೌನಂ ಸಮಾಶ್ರಿತಃ ॥ ೧೪ ॥

ವಾಸುದೇವಂ ಹರಿಂ ಕೃಷ್ಣಂ ಮಾಧವಂ ಚ ಸ್ಮರೇತ್ಪುನಃ ।
ತಪ್ತೇನ ವಾರಿಣಾ ಸ್ನಾನಂ ಯದಿಹ ಕ್ರಿಯತೇ ನರೈಃ ॥ ೧೫ ॥

ಷಷ್ಟ್ಯಬ್ದೀನ ಫಲಂ ತದ್ಧಿ ಮಕರಸ್ಥೇ ದಿವಾಕರೇ ।
ಬಹಿಃ ಸ್ನಾನಂ ತು ವಾಪ್ಯಾದೌ ದ್ವಾದಶಾಬ್ದಫಲಂ ಸ್ಮೃತಂ ॥ ೧೬ ॥

ತಡಾಗೇ ದ್ವಿಗುಣಂ ತದ್ಧಿ ನದ್ಯಾದೌ ತಚ್ಚತುರ್ಗುಣಂ ।
ದಶಧಾ ದೇವಖಾತೇ ಚ ಮಹಾನದ್ಯಾಂ ಚ ತಚ್ಛತಂ ॥ ೧೭ ॥

---

೧೩-೧೫. "ಗೋವಿಂದ! ಅಚ್ಯುತ! ಮಾಧವ! ಮಕರಸಂಕ್ರಮಣವು ಬಂದಿರುವ ಈ ಮಾಘಮಾಸದಲ್ಲಿ ಮಾಡಿದ ಸ್ನಾನದಿಂದ ನನಗೆ ದೇವಮಾರ್ಗವನ್ನು ತೋರಿಸಿ ವಿಹಿತಫಲವನ್ನು ಕೊಡುವವನಾಗು" ಎಂಬೀ ಅರ್ಥವನ್ನು ಕೊಡುವ ಮೇಲಿನ ಮಂತ್ರವನ್ನು ಹೇಳಿ ಸ್ನಾನಮಾಡಿ ಮೌನವನ್ನಾಶ್ರಯಿಸಬೇಕು. ಅನಂತರ ವಾಸುದೇವ, ಹರಿ, ಕೃಷ್ಣ, ಮಾಧವ ಎಂಬುದಾಗಿ ಪುನಃ ಸ್ಮರಿಸಬೇಕು.

೧೫-೧೬. ಮನುಷ್ಯರು ಇಲ್ಲಿ ಬಿಸಿನೀರಿನಿಂದ ಮಾಡಿದಸ್ನಾನವು ಅರವತ್ತು ವರ್ಷಗಳಲ್ಲಿ ಫಲಪ್ರದವಾಗುವುದು. ಮಕರಸಂಕ್ರಮಣಕಾಲದಲ್ಲಿ ಸರೋವರ ಮುಂತಾದ ಬಾಹ್ಯೋದಕದಲ್ಲಿ ಮಾಡುವ ಸ್ನಾನವು ಹನ್ನೆರಡುವರ್ಷಗಳ ಫಲವನ್ನು ಕೊಡುವುದು.

೧೭-೧೯. ಆ ಸಂಕ್ರಮಣಕಾಲದಲ್ಲಿ ಕೆರೆಯಲ್ಲಿ ಸ್ನಾನಮಾಡಿದರೆ ಎರಡರಷ್ಟುಫಲವೂ, ನದೀ ಮುಂತಾದುವುಗಳಲ್ಲಿ ಸ್ನಾನಮಾಡಿದರೆ ಅದರ ನಾಲ್ಕರಷ್ಟುಫಲವೂ, ದೇವಖಾತದಲ್ಲಿ ಸ್ನಾನಮಾಡಿದರೆ ಹತ್ತುಪಾಲು ಫಲವೂ, ಮಹಾನದಿ

ಚತುರ್ಗುಣಶತಂ ತಚ್ಚ ಮಹಾನದ್ಯೋಸ್ತು ಸಂಗಮೇ |
ಸಹಸ್ರಗುಣಿತಂ ಸರ್ವಂ ತತ್ಫಲಂ ಮಕರೇ ರವೌ || ೧೮ ||

ಗಂಗಾಯಾಂ ಸ್ನಾನಮಾತ್ರೇಣ ಪ್ರಯಾಗೇ ತತ್ಪ್ರಕೀರ್ತಿತಂ |
ಗಂಗಾಂ ಯೇ ಚಾವಗಾಹಂತಿ ಮಾಘೇ ಮಾಸಿ ಸುಲೋಚನೇ || ೧೯ ||

ಚತುರ್ಯುಗಸಹಸ್ರಂ ತೇ ನ ಪತಂತಿ ಸುರಾಲಯಾತ್ |
ಶತೇನ ಗುಣಿತಂ ಮಾಘೇ ಸಹಸ್ರಂ ವಿಧಿನಂದಿನಿ || ೨೦ ||

ನಿರ್ದಿಷ್ಟಮೃಷಿಭಿಸ್ಸ್ನಾನಂ ಗಂಗಾಯಮುನಸಂಗಮೇ |
ಪಾಪೌಘೈರ್ಭುವಿ ಭಾರಸ್ಯ ದಾಹಾಯೇಮಂ ಪ್ರಜಾಪತಿಃ || ೨೧ ||

ಪ್ರಯಾಗಂ ವಿದಧೇ ದೇವಿ ಪ್ರಜಾನಾಂ ಹಿತಕಾಮ್ಯಯಾ |
ಸ್ನಾನಾಸ್ನಾನಮಿದಂ ಸಮ್ಯಕ್ ಸಿತಾಸಿತಜಲಂ ಕಿಲ || ೨೨ ||

---

ಯಲ್ಲಿ ಸ್ನಾನಮಾಡಿದರೆ ನೂರುಭಾಗ ಹೆಚ್ಚುಫಲವೂ, ಮಹಾನದಿಗಳ ಸಂಗಮ ಸ್ಥಾನದಲ್ಲಿ ಸ್ನಾನಮಾಡಿದರೆ ನಾನೂರರಷ್ಟುಫಲವೂ ಲಭಿಸುತ್ತದೆ. ಇದಕ್ಕೆ ಸಾವಿರಭಾಗ ಹೆಚ್ಚಾಗಿ ಆ ಫಲವೆಲ್ಲವೂ ಮಕರಸಂಕ್ರಮಣಕಾಲದಲ್ಲಿ ಪ್ರಯಾಗ ದಲ್ಲಿ ಗಂಗಾಸ್ನಾನಮಾಡುವ ಮಾತ್ರದಿಂದ ಲಭಿಸುವುದೆಂದು ವಿಹಿತವಾಗಿದೆ.

೧೯-೨೦. ಸುಲೋಚನೇ! ಮಾಘಮಾಸದಲ್ಲಿ ಗಂಗಾಸ್ನಾನಮಾಡು ವವರು ನಾಲ್ಕು ಯುಗಗಳೂ ಸಾವಿರಬಾರಿ ತಿರುಗುವವರೆಗೂ ದೇವಲೋಕ ದಿಂದ ಕೆಳಗೆ ಬೀಳುವುದಿಲ್ಲ. ಎಂದರೆ ಅಷ್ಟುಕಾಲ ದೇವಲೋಕದಲ್ಲಿದ್ದು ಸುಖ ಪಡುವರು.

೨೦-೨೧. ವಿಧಿನಂದನೇ! ಅದಕ್ಕಿಂತಲೂ ಲಕ್ಷಭಾಗ ಹೆಚ್ಚುಫಲವು ಗಂಗಾಸಂಗಮದಲ್ಲಿ ಮಾಘಮಾಸದಲ್ಲಿ ಮಾಡುವ ಸಂಕ್ರಮಣಸ್ನಾನದಿಂದ ಲಭಿ ಸುವುದೆಂದು ಋಷಿಗಳು ನಿರ್ಧರಿಸಿರುವರು.

೨೧-೨೨. ದೇವೀ! ಪ್ರಜಾಪತಿಯು ಪಾಪರಾಶಿಗಳಿಂದುಂಟಾಗಿರುವ ಭೂಭಾರವನ್ನು ದಹಿಸಿ ಪ್ರಜೆಗಳಿಗೆ ಹಿತವನ್ನುಂಟುಮಾಡಬೇಕೆಂಬ ಬಯಕೆ ಯಿಂದ ಈ ಪ್ರಯಾಗಕ್ಷೇತ್ರವನ್ನು ನಿರ್ಮಾಣಮಾಡಿದನು.

ಪಾಪರೂಪಪಶೂನಾಂ ಹಿ ಬ್ರಹ್ಮಣಾ ನಿರ್ಮಿತಂ ಪುರಾ ।
ಸಿತಾಸಿತಾ ತು ಯಾ ಧಾರಾ ಸರಸ್ವತ್ಯಾ ವಿವರ್ಭಿತಾ ॥ ೨೩ ॥

ತಂ ಮಾರ್ಗಂ ಬ್ರಹ್ಮಲೋಕಸ್ಯ ಸೃಷ್ಟಿಕರ್ತಾ ಸಸರ್ಜ ವೈ ।
ಜ್ಞಾನದೋ ಮಾನಸೇ ಮಾಘೋ ನ ತು ಮೋಕ್ಷಫಲಪ್ರದಃ ॥ ೨೪ ॥

ಹಿಮವತ್ಪೃಷ್ಠತೀರ್ಥೇಷು ಸರ್ವಪಾಪಪ್ರಣಾಶನಃ ।
ವೇದವಿದ್ಭಿರ್ವಿನಿರ್ದಿಷ್ಟ ಇಂದ್ರಲೋಕಪ್ರದೋ ಹಿ ಸಃ ॥ ೨೫ ॥

ಸರ್ವಮಾಸೋತ್ತಮೋ ಮಾಘೋ ಮೋಕ್ಷದೋ ಬದರೀವನೇ
ಪಾಪಹಾ ದುಃಖಹಾರೀ ಚ ಸರ್ವಕಾಮಫಲಪ್ರದಃ । ॥ ೨೬ ॥

ರುದ್ರಲೋಕಪ್ರದೋ ಮಾಘೋ ನಾರ್ಮದೇ ಪರಿಕೀರ್ತಿತಃ ।
ಸಾರಸ್ವತೇಽಘವಿಧ್ವಂಸೀ ಸರ್ವಲೋಕಸುಖಪ್ರದಃ ॥ ೨೭ ॥

---

೨೨-೨೩. ಸ್ನಾನಾರ್ಹವಾದ ಬಿಳಿಯನೀರುಳ್ಳ ಗಂಗೆ, ಸ್ನಾನಾನರ್ಹವಾದ ಕಪ್ಪುಜಲವುಳ್ಳ ಯಮುನೆ ಇವುಗಳನ್ನು ಪೂರ್ವದಲ್ಲಿ ಪಾಪವೆಂಬ ಪಶುಗಳ ಪರಿಹಾರಕ್ಕಾಗಿ ಬ್ರಹ್ಮನು ನಿರ್ಮಾಣಮಾಡಿರುವನು.

೨೩-೨೪. ಸರಸ್ವತೀನದಿಯಿಂದ ವಿಭಕ್ತವಾಗಿರುವ ಸಿತಾಸಿತಧಾರೆಯೆಂಬ ಬ್ರಹ್ಮಲೋಕದ ಮಾರ್ಗವನ್ನು ಸೃಷ್ಟಿಕರ್ತನು ಸೃಷ್ಟಿಮಾಡಿದನು. ಮಾಘಮಾಸದಲ್ಲಿ ಮಾನಸಸರೋವರಸೇವನೆಯು ಜ್ಞಾನದಾಯಕವು ಮೋಕ್ಷಪ್ರದವಲ್ಲ.

೨೫. ಹಿಮವತ್ಪರ್ವತದ ಹಿಂಭಾಗದಲ್ಲಿರುವ ತೀರ್ಥಗಳಲ್ಲಿ ಸಕಲಪಾಪಪರಿಹಾರವಾಗುವುದೆಂದು ವೇದಜ್ಞಾನಿಗಳು ಹೇಳಿರುವರು. ಅದು ಇಂದ್ರಲೋಕದಾಯಕವು.

೨೬. ಮಾಘಮಾಸವು ಮಾಸಗಳಲ್ಲೆಲ್ಲಾ ಉತ್ತಮವು. ಆಗ ಬದರಿಕಾಶ್ರಮವನ್ನು ಸೇವಿಸಿದರೆ ಮೋಕ್ಷವಾಗುವುದು. ಪಾಪದುಃಖಗಳು ಪರಿಹಾರವಾಗುವುವು. ಹೆಚ್ಚೇನು ! ಸಕಲೇಷ್ಟಫಲಗಳೂ ಲಭಿಸುವುವು.

೨೭. ಮಾಘಮಾಸದಲ್ಲಿ ನರ್ಮದಾನದಿಯ ಸ್ನಾನಾದಿಗಳು ರುದ್ರಲೋಕದಾಯಕಗಳೆಂದುಕ್ತವಾಗಿದೆ. ಸರಸ್ವತೀನದಿಯ ಸ್ನಾನಾದಿಗಳು ಪಾಪನಾಶಕ ಮತ್ತು ಸಕಲಲೋಕ ಸುಖದಾಯಕಗಳಾಗುತ್ತವೆ.

ವಿಶಾಲಫಲದೋ ಮಾಘೋ ವಿಶಾಲಾಯಾಂ ಪ್ರಕೀರ್ತಿತಃ
ಪಾಪೇಂಧನದವಾಗ್ನಿಶ್ಚ ಗರ್ಭವಾಸವಿನಾಶನಃ ।
ವಿಷ್ಣುಲೋಕಾಯ ಮೋಕ್ಷಾಯ ಜಾಹ್ನವೀ ಪರಿಕೀರ್ತಿತಾ ॥ ೨೮ ॥

ಸರಯೂರ್ಗಂಡಕೀ ಸಿಂಧುಶ್ಚಂದ್ರಭಾಗಾ ಚ ಕೌಶಿಕೀ ।
ತಾಪೀ ಗೋದಾವರೀ ಭೀಮಾ ಪಯೋಷ್ಣೀ ಕೃಷ್ಣವೇಣಿಕಾ ॥ ೨೯ ॥

ಕಾವೇರೀ ತುಂಗಭದ್ರಾ ಚ ಯಾಸ್ತಥಾನ್ಯಾಃ ಸಮುದ್ರಗಾಃ ।
ತಾಸು ಸ್ನಾಯೀ ನರೋ ಯಾತಿ ಸ್ವರ್ಗಲೋಕಂ ವಿಕಲ್ಮಷಃ ॥ ೩೦ ॥

ನೈಮಿಷೇ ವಿಷ್ಣುಸಾರೂಪ್ಯಂ ಪುಷ್ಕರೇ ಬ್ರಹ್ಮಣೋಂತಿಕಂ ।
ಆಖಂಡಲಸ್ಯ ಲೋಕೋ ಹಿ ಕುರುಕ್ಷೇತ್ರೇ ಚ ಮಾಘತಃ ॥ ೩೧ ॥

ಮಾಘೋ ದೇವಹ್ರದೇ ದೇವಿ ಯೋಗಸಿದ್ಧಿಫಲಪ್ರದಃ ।
ಪ್ರಭಾಸೇ ಮಕರಾದಿತ್ಯೇ ಸ್ನಾತ್ವಾ ರುದ್ರಗಣೋ ಭವೇತ್ ॥ ೩೨ ॥

---

೨೮. ವಿಶಾಲಾಕ್ಷೇತ್ರದಲ್ಲಿ ಮಾಘಮಾಸವು ಬಹುಫಲಗಳನ್ನು ಕೊಡುತ್ತದೆ. ಅದು ಪಾಪವೆಂಬ ಕಟ್ಟಿಗೆಗೆ ಕಾಡುಗಿಚ್ಚಿನೋಪಾದಿಯಲ್ಲಿದೆ. ಮತ್ತು ಗರ್ಭವಾಸವನ್ನು ನಾಶಪಡಿಸುತ್ತದೆಂದು ಉಕ್ತವಾಗಿದೆ. ಆಗ ಗಂಗೆಯ ಸ್ನಾನಾದಿಗಳನ್ನು ಮಾಡಿದರೆ ವಿಷ್ಣುಲೋಕಪ್ರಾಪ್ತಿಯಾಗಿ ಮೋಕ್ಷವಾಗುವುದು.

೨೯-೩೦. ಸರಯೂ, ಗಂಡಕೀ, ಸಿಂಧು, ಚಂದ್ರಭಾಗಾ, ಕೌಶಕೀ, ತಪತೀ, ಗೊದಾವರೀ, ಭೀಮರಥೀ, ಪಯೋಷ್ಣೀ, ಕೃಷ್ಣವೇಣೀ, ಕಾವೇರೀ, ತುಂಗಭದ್ರೆ ಮತ್ತು ಇತರ ಸಮುದ್ರಗಾಮಿನದಿಗಳು ಇವುಗಳಲ್ಲಿ ಸ್ನಾನಮಾಡಿದ ಮನುಷ್ಯನು ಪಾಪಗಳನ್ನು ಕಳೆದುಕೊಂಡು ಸ್ವರ್ಗಕ್ಕೆ ಹೋಗುವನು.

೩೧. ಮಾಘಮಾಸದಲ್ಲಿ ನೈಮಿಷಕ್ಷೇತ್ರಸೇವನೆಯು ವಿಷ್ಣುಸಾರೂಪ್ಯವನ್ನೂ, ಪುಷ್ಕರಕ್ಷೇತ್ರಸೇವನೆಯು ಬ್ರಹ್ಮಸಾಮೀಪ್ಯವನ್ನೂ, ಕುರುಕ್ಷೇತ್ರವು ಇಂದ್ರಲೋಕವನ್ನೂ ಕೊಡುವುದು.

೩೨. ದೇವೀ ! ದೇವಹ್ರದದಲ್ಲಿ ಮಾಘಮಾಸವು ಯೋಗಸಿದ್ಧಿ ಫಲದಾಯಕವು. ಪ್ರಭಾಸತೀರ್ಥದಲ್ಲಿ ಮಕರಸಂಕ್ರಮಣಕಾಲದಲ್ಲಿ ಸ್ನಾನಮಾಡಿದರೆ ರುದ್ರಗಣದಲ್ಲಿ ಸೇರುವನು.

ದೇವಕ್ಯಾಂ ದೇವತಾದೇಹೋ ನರೋ ಭವತಿ ಮಾಘುತಃ ।
ಮಾಘುಸ್ನಾನೇನ ವಿಧಿಜೇ ಗೋಮತ್ಯಾಂ ನ ಪುನರ್ಭವಃ　　॥ ೩೩ ॥

ಹೇಮಕೂಟೇ ಮಹಾಕಾಲೇ ಓಂಕಾರೇ ಹ್ಯಪರೇ ತಥಾ ।
ನೀಲಕಂಠಾರ್ಬುದೇ ಮಾಘೋ ರುದ್ರಲೋಕಪ್ರದೋ ಮತಃ　　॥ ೩೪ ॥

ಸರ್ವಾಸಾಂ ಸರಿತಾಂ ದೇವಿ ಸಂಪೂರೋ ಮಾಕರೇ ರವೌ ।
ಸ್ನಾನೇನ ಸರ್ವಕಾಮಾನಾಂ ಪ್ರಾಪ್ತ್ಯೈ ಜ್ಞೇಯೋ ವಿಚಕ್ಷಣೈಃ　　॥ ೩೫ ॥

ಮಾಘುಸ್ತು ಪ್ರಾಪ್ಯತೇ ಧನ್ಯೈಃ ಪ್ರಯಾಗೇ ವಿಧಿನಂದಿನಿ ।
ಅಪುನರ್ಭವದಂ ತತ್ರ ಸಿತಾಸಿತಜಲಂ ಯತಃ　　॥ ೩೬ ॥

---

೩೩. ಮಾಘಮಾಸದಲ್ಲಿ ಸ್ನಾನಮಾಡಿದರೆ ದೇವತೆಯ ದೇಹವನ್ನು ಧರಿಸಿದ ಮನುಷ್ಯನಾಗಿ ದೇವಕಿಯಲ್ಲಿ ಹುಟ್ಟುವನು. ಎಂದರೆ ಅಂತಹ ಮಹಾ ಮಹಿಮೆಯುಂಟಾಗುವುದೆಂದು ಭಾವ. ವಿಧಿಕುಮಾರೀ! ಗೋಮತಿಯಲ್ಲಿ ಮಾಘಸ್ನಾನಮಾಡುವುದರಿಂದ ಪುನರ್ಜನ್ಮ ಬರದಂತಾಗುವುದು.

೩೪. ಹೇಮಕೂಟ, ಮಹಾಕಾಲ, ಓಂಕಾರ ಈ ಕ್ಷೇತ್ರಗಳಲ್ಲಿಯೂ ಮಾಘಸ್ನಾನದಿಂದ ಪುನರ್ಜನ್ಮ ಬರದಂತಾಗುವುದು. ನೀಲಕಂಠಾರ್ಬುದದಲ್ಲಿ ಮಾಘಮಾಸವು ರುದ್ರಲೋಕದಾಯಕವು.

೩೫ ದೇವೀ! ಮಕರ ಸಂಕ್ರಮಣಕಾಲದಲ್ಲಿ ಸಕಲನದಿಗಳ ಪ್ರವಾಹ ಗಳಲ್ಲಿ ಸ್ನಾನಮಾಡುವುದರಿಂದ ಎಲ್ಲಾನದಿಗಳೂ ಸಕಲೇಷ್ಟಾರ್ಥ ಸಾಧಕಗಳಾ ಗುವುವೆಂದು ವಿವೇಚನಶೀಲರು ತಿಳಿಯಬೇಕು.

೩೬. ವಿಧಿನಂದನೇ! ಪ್ರಯಾಗಕ್ಷೇತ್ರದಲ್ಲಿ ಮಾಘಸ್ನಾನಾದಿಗಳು ಧನ್ಯ ರಿಗೆ ಲಭಿಸುವುವು. ಅಲ್ಲಿ ಸಿತಾಸಿತಜಲ ಸಂಗಮವಾಗುವುದರಿಂದ ಅದು ಪುನ ರ್ಜನ್ಮಬಾರದಂತೆ ಮಾಡಿ ಮೋಕ್ಷಕೊಡುವುದು.

ಗಾಯಂತಿ ದೇವಾಃ ಸತತಂ ದಿವಿಷ್ಠಾ
ಮಾಘಃ ಪ್ರಯಾಗೇ ಕಿಲ ನೋ ಭವಿಷ್ಯತಿ ।
ಸ್ನಾತಾ ನರಾ ಯತ್ರ ನ ಗರ್ಭವೇದನಾಂ
ಪಶ್ಯಂತಿ ತಿಷ್ಠಂತಿ ಚ ವಿಷ್ಣುಸನ್ನಿಧೌ ॥ ೩೭ ॥

ತೀರ್ಥೈರ್ವ್ರತೈರ್ದಾನತಪೋಭಿರಧ್ವರೈಃ
ಸಾರ್ಧಂ ವಿಧಾತ್ರಾ ತುಲಯಾ ಧೃತಂ ಪುರಾ ।
ಮಾಘಃ ಪ್ರಯಾಗಶ್ಚ ತಯೋರ್ದ್ವಯೋರಭೂ
ನ್ಮಾಘೋ ಗರೀಯಾಂಶ್ಚತುರಾನನಾತ್ಮಜೇ ॥ ೩೮ ॥

ವಾತಾಂಬುಪರ್ಣಾಶನದೇಹಶೋಷಣೈ
ಸ್ತಪೋಭಿರುಗ್ರೈಶ್ಚಿರಕಾಲಸಂಚಿತೈಃ ।
ಯೋಗೈಶ್ಚ ಸಂಯಾಂತಿ ನರಾಸ್ತು ಯಾಂ ಗತಿಂ
ಸ್ನಾನಾತ್ಪ್ರಯಾಗಸ್ಯ ಹಿ ಯಾಂತಿ ತಾಂ ಗತಿಂ ॥ ೩೯ ॥

---

೩೭. ದ್ಯುಲೋಕದಲ್ಲಿರುವ ದೇವತೆಗಳು ಯಾವಾಗಲೂ ಪ್ರಯಾಗದಲ್ಲಿ ಸಂಭವಿಸುವ ಮಾಘಮಾಸವನ್ನು ಸ್ತೋತ್ರಮಾಡುತ್ತಿರುವರು. ಆಗ ಅಲ್ಲಿ ಸ್ನಾನಮಾಡಿದವರು ಗರ್ಭವೇದನೆಯನ್ನು ಕಾಣದೆ ವಿಷ್ಣುಸನ್ನಿಧಿಯಲ್ಲಿಯೇ ಇರುವರು.

೩೮. ಚತುರ್ಮುಖಕುಮಾರಿಯೇ ! ಪೂರ್ವದಲ್ಲಿ ಬ್ರಹ್ಮನು ತಕ್ಕಡಿಯನ್ನು ಹಿಡಿದು ತೀರ್ಥ, ವ್ರತ, ದಾನ, ತಪಸ್ಸು, ಯಜ್ಞ ಇವುಗಳನ್ನು ಒಂದೆಡೆಯಲ್ಲಿಯೂ, ಮತ್ತೊಂದೆಡೆಯಲ್ಲಿ ಮಾಘಪ್ರಯಾಗಗಳನ್ನೂ ಇಟ್ಟು ತೂಕಮಾಡಿದನು. ಅವೆರಡರಲ್ಲಿ ಮಾಘಪ್ರಯಾಗಗಳೇ ಗುರುವಾದವು.

೩೯. ಮನುಷ್ಯರು ಗಾಳಿ, ನೀರು, ಎಲೆಗಳನ್ನು ಸೇವಿಸಿ ಮಾಡುವ ದೇಹಶೋಷಣೆ, ಬಹುಕಾಲಮಾಡಿದ ಕಠಿನ ತಪಸ್ಸು ಮತ್ತು ಯೋಗಗಳಿಂದ ಹೊಂದುವ ಸದ್ಗತಿಯನ್ನು ಪ್ರಯಾಗದಲ್ಲಿ ಮಾಡುವ ಸ್ನಾನಮಾತ್ರದಿಂದ ಪಡೆಯುವರು.

ಸ್ನಾತಾ ಹಿ ಯೇ ಮಾಕರಭಾಸ್ಕರೋದಯೇ
ತೀರ್ಥಂ ಪ್ರಯಾಗೇ ಸುರಸಿಂಧುಸಂಗಮೇ ।
ತೇಷಾಂ ಗೃಹದ್ವಾರಮಲಂ ಕರೋತಿ
ಭೃಂಗಾವಲೀ ಕುಂಜರಕರ್ಣತಾಡಿತಾ ॥ ೪೦ ॥

ಯೋ ರಾಜಸೂಯಾಖ್ಯಸಮಾಧ್ವರಸ್ಯ
ಸ್ನಾನಾತ್ಫಲಂ ಸಂಪ್ರದದಾತಿ ಚಾಖಿಲಂ ।
ಪಾಪಾನಿ ಸರ್ವಾಣಿ ನಿಹತ್ಯ ಲೀಲಯಾ
ನೂನಂ ಪ್ರಯಾಗಃ ಸ ಕಥಂ ನ ವರ್ಣ್ಯತೇ ॥ ೪೧ ॥

ಚತುರ್ವೇದಿಷು ಯತ್ಪುಣ್ಯಂ ಸತ್ಯವಾದಿಷು ಚೈವ ಹಿ ।
ಸ್ನಾತ ಏವ ತದಾಪ್ನೋತಿ ಗಂಗಾಕಾಲಿಂದಿಸಂಗಮೇ ॥ ೪೨ ॥

ತತ್ರಾಭಿಷೇಕಂ ಕುರ್ವೀತ ಸಂಗಮೇ ಶಂಸಿತವ್ರತಃ ।
ತುಲ್ಯಂ ಫಲಮವಾಪ್ನೋತಿ ರಾಜಸೂಯಾಶ್ವಮೇಧಯೋಃ ॥ ೪೩ ॥

---

೪೦. ಮಕರಸಂಕ್ರಮಣ ಕಾಲದಲ್ಲಿ ಪ್ರಯಾಗದಲ್ಲಿನ ತ್ರಿವೇಣೀಸಂಗಮದಲ್ಲಿ ಸ್ನಾನಮಾಡುವವರ ಮನೆಯ ಬಾಗಿಲನ್ನು ಆನೆಗಳ ಕರ್ಣತಾಡಿತವಾದ ಭ್ರಮರಪಂಕ್ತಿಯು ಅಲಂಕರಿಸುತ್ತದೆ.

೪೧. ಸ್ನಾನಮಾತ್ರದಿಂದ ಸಕಲಪಾಪಗಳನ್ನೂ ನಾಶಪಡಿಸಿ ಅನಾಯಾಸವಾಗಿ ರಾಜಸೂಯವೆಂಬ ಮಹಾಯಜ್ಞದ ಫಲವನ್ನು ಸಂಪೂರ್ಣವಾಗಿ ಕೊಡುವಂತಹ ಪ್ರಯಾಗಕ್ಷೇತ್ರವನ್ನು ವರ್ಣಿಸದಿರುವುದು ಹೇಗೆ?

೪೨. ನಾಲ್ಕುವೇದಗಳನ್ನೂ ಅಧ್ಯಯನಮಾಡಿದವನು, ಸತ್ಯವಾದಿಯೂ ಸಹ ಎಷ್ಟುಪುಣ್ಯವನ್ನು ಹೊಂದುವರೋ ಗಂಗಾ ಯಮುನಾಸಂಗಮದಲ್ಲಿ ಸ್ನಾನ ಮಾಡುವುದರಿಂದ ಮನುಷ್ಯರು ಅಷ್ಟುಪುಣ್ಯವನ್ನು ಹೊಂದುವರು.

೪೩. ಆ ಸಂಗಮದಲ್ಲಿ ಪ್ರಶಸ್ತವ್ರತವನ್ನಾಚರಿಸುವವನಾಗಿ ಅಭಿಷೇಕ ಮಾಡುವವನು ರಾಜಸೂಯ ಮತ್ತು ಅಶ್ವಮೇಧಗಳಿಗೆ ಸಮಾನವಾದ ಫಲವನ್ನು ಹೊಂದುವನು.

ಪಂಚಯೋಜನವಿಸ್ತೀರ್ಣಂ ಪ್ರಯಾಗಸ್ಯ ತು ಮಂಡಲಂ ।
ಪ್ರವೇಶಾದಸ್ಯ ಭೂಮೌ ತು ಅಶ್ವಮೇಧಃ ಪದೇ ಪದೇ ॥ ೪೪ ॥

ತ್ರೀಣಿ ಕುಂಡಾನಿ ಸುಭಗೇ ತೇಷಾಂ ಮಧ್ಯೇ ತು ಜಾಹ್ನವೀ ।
ಪ್ರಯಾಗಸ್ಯ ಪ್ರವೇಶೇನ ಪಾಪಂ ನಶ್ಯತಿ ತತ್ಕ್ಷಣಾತ್ ॥ ೪೫ ॥

ಮಾಸಮೇಕಂ ನರಃ ಸ್ನಾತ್ವಾ ಪ್ರಯಾಗೇ ನಿಯತೇಂದ್ರಿಯಃ ।
ಮುಚ್ಯತೇ ಸರ್ವಪಾಪೇಭ್ಯೋ ಯಥಾ ದೃಷ್ಟಂ ಸ್ವಯಂಭುವಾ ॥ ೪೬ ॥

ಶುಚಿಸ್ತು ಪ್ರಯತೋ ಭೂತ್ವಾಹಿಂಸಕಃ ಶ್ರದ್ಧಯಾನ್ವಿತಃ ।
ಸ್ನಾತ್ವಾ ಮುಚ್ಯೇತ ಪಾಪೇಭ್ಯೋ ಗಚ್ಛೇಚ್ಚ ಪರಮಂ ಪದಂ ॥ ೪೭ ॥

ನೈಮಿಷಂ ಪುಷ್ಕರಂ ಚೈವ ಗೋತೀರ್ಥಂ ಸಿಂಧುಸಾಗರಂ ।
ಗಯಾ ಚ ಧೇನುಕಂ ಚೈವ ಗಂಗಾಸಾಗರಸಂಗಮಃ ॥ ೪೮ ॥

---

೪೪. ಪ್ರಯಾಗಕ್ಷೇತ್ರಪ್ರದೇಶವು ಐದು ಗಾವುದ ವಿಸ್ತಾರವುಳ್ಳುದಾಗಿದೆ. ಆ ಭೂಮಿಯಲ್ಲಿ ಪ್ರವೇಶಮಾಡುವ ಹೆಜ್ಜೆಹೆಜ್ಜೆಗೂ ಅಶ್ವಮೇಧಯಜ್ಞಫಲ ಬರುವುದು.

೪೫. ಸುಂದರೀ! ಆ ಕ್ಷೇತ್ರದಲ್ಲಿ ಮೂರು ಕುಂಡಗಳಿವೆ. ಅವುಗಳ ಮಧ್ಯದಲ್ಲಿ ಗಂಗಾನದಿಯಿದೆ. ಪ್ರಯಾಗವನ್ನು ಪ್ರವೇಶಿಸಿದಕೂಡಲೇ ಪಾಪ ಪರಿಹಾರವಾಗುವುದು.

೪೬. ಮನುಷ್ಯನು ಜಿತೇಂದ್ರಿಯನಾಗಿ ಒಂದು ತಿಂಗಳು ಪ್ರಯಾಗ ಕ್ಷೇತ್ರದಲ್ಲಿ ಸ್ನಾನಮಾಡಿದರೆ ಸಕಲಪಾಪಗಳೂ ಹೋಗುವುವು ಇದನ್ನು ಚತುರ್ಮುಖಬ್ರಹ್ಮನು ನೋಡಿರುವನು.

೪೭. ಶುಚಿಯು, ಜಿತೇಂದ್ರಿಯನು. ಅಹಿಂಸಾಪರನು, ಶ್ರದ್ಧೆಯುಳ್ಳವನೂ ಆಗಿ ತ್ರಿವೇಣೀಸಂಗಮದಲ್ಲಿ ಸ್ನಾನಮಾಡಿದರೆ ಸಕಲಪಾಪಗಳೂ ಹೋಗುವುವು. ಅವನು ಪರಮಪದವಿಯನ್ನು ಹೊಂದುವನು.

೪೮-೫೦. ನೈಮಿಷ, ಪುಷ್ಕರ, ಗೋತೀರ್ಥ, ಸಿಂಧುಸಾಗರ, ಗಯಾ, ಧೇನುಕ, ಗಂಗಾಸಾಗರ ಸಂಗಮ ಇವಲ್ಲದೆ ಪುಣ್ಯಕರವಾದ ಬಹು ಬೆಟ್ಟಗಳು,

ಏತೇ ಚಾನ್ಯೇ ಚ ಬಹವೋ ಯೇ ಚ ಪುಣ್ಯಾಃ ಶಿಲೋಚ್ಚಯಾಃ |
ದಶ ತೀರ್ಥಸಹಸ್ರಾಣಿ ತ್ರಿಂಶತ್ಕೋಟ್ಯಸ್ತಥಾ ಪರಾಃ　　|| ೪೯ ||

ಪ್ರಯಾಗೇ ಸಂಸ್ಥಿತಾ ನಿತ್ಯಮೇಥಮಾನಾ ಮನೀಷಿಣಃ |
ತ್ರೀಣಿ ಯಾನ್ಯಗ್ನಿಕುಂಡಾನಿ ತೇಷಾಂ ಮಧ್ಯೇ ತು ಜಾಹ್ನವೀ　　|| ೫೦ ||

ಪ್ರಯಾಗಾದ್ಧಿ ವಿನಿಷ್ಕ್ರಾಂತಾ ಸರ್ವತೀರ್ಥಪುರಸ್ಕೃತಾ |
ತಪನಸ್ಯ ಸುತಾ ದೇವೀ ತ್ರಿಷು ಲೋಕೇಷು ವಿಶ್ರುತಾ　　|| ೫೧ ||

ಯಮುನಾ ಗಂಗಯಾ ಸಾರ್ಧಂ ಸಂಗತಾ ಲೋಕಪಾವನೀ |
ಗಂಗಾಯಮುನಯೋರ್ಮಧ್ಯೇ ಪೃಥಿವ್ಯಾಂ ಯತ್ಪರಂ ಸ್ಮೃತಂ || ೫೨ ||

ಪ್ರಯಾಗಸ್ಯ ತು ತೀರ್ಥಸ್ಯ ಕಲಾಂ ನಾರ್ಹಂತಿ ಷೋಡಶೀಂ |
ತಿಸ್ರಃ ಕೋಟ್ಯೋರ್ಧಕೋಟೀ ಚ ತೀರ್ಥಾನಾಂ ವಾಯುರಬ್ರವೀತ್ ||

---

ಹತ್ತುಸಾವಿರ ತೀರ್ಥಗಳು ಮತ್ತು ಮೂವತ್ತುಕೋಟಿ ದೇವತೆಗಳು ಪೂರ್ಣ ಜ್ಞಾನಿಗಳೂ ಸಹ ಯಾವಾಗಲೂ ಪ್ರಯಾಗದಲ್ಲಿ ಸನ್ನಿಹಿತರಾಗಿರುವರು.

೫೦-೫೧. ಪ್ರಯಾಗದಲ್ಲಿ ಮೂರು ಅಗ್ನಿಕುಂಡಗಳ ಮಧ್ಯದಲ್ಲಿರುವ ಗಂಗಾನದಿಯು ಪ್ರಯಾಗದಿಂದ ಹೊರಟು ಸಕಲತೀರ್ಥಗಳಿಂದಲೂ ಪುರಸ್ಕರಿಸಲ್ಪಡುವುದು. ಸೂರ್ಯಪುತ್ರಿಯಾದ ಯಮುನಾದೇವಿಯು ಮೂರು ಲೋಕಗಳಲ್ಲಿಯೂ ವಿಖ್ಯಾತಳಾಗಿರುವಳು.

೫೨. ಯಮುನೆಯು ಗಂಗೆಯೊಡನೆಕೂಡಿ ಲೋಕವನ್ನೆಲ್ಲ ಪವಿತ್ರಮಾಡುವುದು. ಗಂಗಾ ಯಮುನಾನದಿಗಳ ಮಧ್ಯ ಭೂಭಾಗದಲ್ಲಿ ಅದು ಉತ್ತಮವೆಂದು ಉಕ್ತವಾಗಿದೆ.

೫೩. ಮೂರೂವರೆಕೋಟಿ ತೀರ್ಥಗಳೂ ಸಹ ಪ್ರಯಾಗತೀರ್ಥದ ಹದಿನಾರನೆಯ ಒಂದುಭಾಗದಷ್ಟು ಮಹಿಮೆಯನ್ನೂ ಪಡೆಯಲಾರವು ಎಂದು ವಾಯುದೇವನು ಹೇಳಿರುವನು.

ದಿವಿ ಭುವ್ಯಂತರಿಕ್ಷೇ ಚ ಜಾಹ್ನವ್ಯಾಂ ತಾನಿ ಸಂತಿ ಚ ।
ಪ್ರಯಾಗಂ ಸಮಧಿಷ್ಠಾಯ ಕಂಬಲಾಶ್ವತರಾವುಭೌ ॥ ೫೪ ॥

ಭೋಗವತ್ಯಥವಾ ಚೈಷಾ ದೇವೀ ವೇದ್ಯಾ ಪ್ರಜಾಪತೇಃ ।
ತತ್ರ ವೇದಾಶ್ಚ ಯಜ್ಞಾಶ್ಚ ಮೂರ್ತಿಮಂತಃ ಸಮಾಸ್ಥಿತಾಃ ॥ ೫೫ ॥

ಪ್ರಜಾಪತಿಮುಪಾಸಂತೇ ಋಷಯಶ್ಚ ತಪೋಧನಾಃ ।
ಯಜಂತಿ ಕ್ರತುಭಿರ್ದೇವಾಸ್ತಥಾ ಚಕ್ರಧರಾಃ ಸತಿ ॥ ೫೬ ॥

ತತಃ ಪುಣ್ಯತಮೋ ನಾಸ್ತಿ ತ್ರಿಷು ಲೋಕೇಷು ಸುಂದರಿ ।
ಪ್ರಭಾವಾತ್ಸರ್ವತೀರ್ಥೇಭ್ಯಃ ಪ್ರಭಾವತ್ಯಧಿಕಾ ತಥಾ ॥ ೫೭ ॥

ತತ್ರ ದೃಷ್ಟ್ವಾ ತು ತತ್ತೀರ್ಥಂ ಪ್ರಯಾಗಂ ಪರಮಂ ಪದಂ ।
ಮುಚ್ಯತೇ ಸರ್ವಪಾಪೇಭ್ಯಃ ಶಶಾಂಕ ಇವ ರಾಹುಣಾ ॥ ೫೮ ॥

---

೫೪. ದ್ಯುಲೋಕ, ಭೂಲೋಕ ಮತ್ತು ಅಂತರಿಕ್ಷಗಳಲ್ಲಿರುವ ತೀರ್ಥಗಳೆಲ್ಲವೂ ಗಂಗೆಯಲ್ಲಿ ಸನ್ನಿಹಿತವಾಗಿವೆ. ಕಂಬಲ, ಅಶ್ವತರ ಎಂಬೆರಡು ನಾಗಗಳು ಪ್ರಯಾಗದಲ್ಲಿ ವಾಸಮಾಡಿ ಸದ್ಗತಿಯನ್ನು ಪಡೆದುವು.

೫೫. ಅಥವಾ ಈ ಭೋಗವತೀದೇವಿಯ ಮಹಿಮೆಯು ಪ್ರಜಾಪತಿಗೇ ವೇದ್ಯವು. ಇತರರು ಅದನ್ನು ಅರಿಯಲಾರರು. ಅಲ್ಲಿ ವೇದ, ಯಜ್ಞ ಇವುಗಳು ಮೂರ್ತಿಮತ್ತಾಗಿರುತ್ತವೆ.

೫೬. ಸಾಧ್ವಿಯೇ! ಅಲ್ಲಿ ತಪೋಧನರಾದ ಋಷಿಗಳು ಪ್ರಜಾಪತಿಯನ್ನು ಉಪಾಸನೆಮಾಡುತ್ತಿರುವರು. ಚಕ್ರಪಾಣಿಗಳಾದ ದೇವತೆಗಳು ಯಜ್ಞಮಾಡುತ್ತಿರುವರು.

೫೭. ಸುಂದರೀ! ಅದಕ್ಕಿಂತಲೂ ಹೆಚ್ಚಿನ ಪುಣ್ಯಕರತೀರ್ಥವು ಮೂರು ಲೋಕಗಳಲ್ಲಿಯೂ ಇಲ್ಲ. ಅಂತೆಯೇ ಸಕಲತೀರ್ಥಗಳ ಪ್ರಭಾವಕ್ಕಿಂತಲೂ ಅಧಿಕಪ್ರಭಾವವುಳ್ಳುದು ಪ್ರಭಾವತಿಯು.

೫೮. ಅಲ್ಲಿ ಉತ್ತಮಸ್ಥಾನವಾದ ಪ್ರಯಾಗತೀರ್ಥವನ್ನು ದರ್ಶನಮಾಡಿದರೆ ಚಂದ್ರನು ರಾಹುಮುಕ್ತನಾದಂತೆ ಸಕಲಪಾಪಗಳಿಂದಲೂ ವಿಮೋಚನೆಯನ್ನು ಹೊಂದುವನು.

ತತೋ ಗತ್ವಾ ಪ್ರಯಾಗಂ ತು ಸರ್ವದೇವಾಭಿರಕ್ಷಿತಂ ।
ಬ್ರಹ್ಮಚಾರೀ ವಸನ್ಮಾಸಂ ಪಿತೄನ್ ದೇವಾಂಶ್ಚ ತರ್ಪಯೇತ್ ॥ ೫೯ ॥

ಈಪ್ಸಿತಾಂಲ್ಲಭತೇ ಕಾಮಾನ್ಯತ್ರ ತತ್ರಾಭಿಸಂಗತಃ ।
ಸಿತಾಸಿತೇ ತು ಯೋ ಮಜ್ಜೇದಪಿ ಪಾಪಶತಾವೃತಃ ॥ ೬೦ ॥

ಮಕರಸ್ಥೇ ರವೌ ಮಾಘೇ ನ ಸ ಭೂಪಸ್ತು ಗರ್ಭಗಃ ।
ದುರ್ಜಯಾ ವೈಷ್ಣವೀ ಮಾಯಾ ದೇವೈರಪಿ ಸುದುಸ್ತ್ಯಜಾ ॥ ೬೧ ॥

ಪ್ರಯಾಗೇ ದಹ್ಯತೇ ಸಾ ತು ಮಾಘೇ ಮಾಸಿ ವಿರಂಚಿಜೇ ।
ತೇಷು ತೇಷು ಚ ಲೋಕೇಷು ಭುಕ್ತ್ವಾ ಭೋಗಾನನೇಕಶಃ ॥ ೬೨ ॥

---

೫೯-೬೦. ಅನಂತರ ಸಕಲದೇವತೆಗಳಿಂದಲೂ ಚೆನ್ನಾಗಿ ರಕ್ಷಿಸಲ್ಪಟ್ಟ ಪ್ರಯಾಗಕ್ಕೆ ಹೋಗಿ ಬ್ರಹ್ಮಚಾರಿಯಾಗಿ ಪಿತೃ ಮತ್ತು ದೇವತೆಗಳನ್ನು ತರ್ಪಣಾದಿಗಳಿಂದ ಸಂತೋಷಪಡಿಸುತ್ತಾ ಒಂದು ತಿಂಗಳುಕಾಲ ವಾಸಮಾಡುವವನು ಎಲ್ಲೆಲ್ಲಿಯೂ ಇಷ್ಟಾರ್ಥಗಳನ್ನು ಪಡೆಯುವನು.

೬೦-೬೧. ಸಿತಾಸಿತ ಸಂಗಮದಲ್ಲಿ ಮಾಘಮಾಸದಲ್ಲಿ ಬರುವ ಮಕರ ಸಂಕ್ರಮಣಕಾಲದಲ್ಲಿ ಸ್ನಾನಮಾಡುವವನು ನೂರಾರುಪಾಪಗಳನ್ನು ಮಾಡಿದವನಾದರೂ ಅವನು ಪುನಃ ಗರ್ಭವಾಸಕ್ಕೆ ಗುರಿಯಾಗುವುದಿಲ್ಲ.

೬೧-೬೨. ವಿರಿಂಚಿಜಾತೇ ! ವಿಷ್ಣುಮಾಯೆಯು ಜಯಿಸಲಶಕ್ಯವು. ಅದನ್ನು ದೇವತೆಗಳೂ ಸಹ ಬಿಡಿಸಿಕೊಳ್ಳಲಶಕ್ಯವು. ಅಂತಹ ಮಾಯೆಯನ್ನು ಮಾಘಮಾಸದಲ್ಲಿ ಪ್ರಯಾಗದಲ್ಲಿ ಸ್ನಾನಾದಿಗಳನ್ನು ಮಾಡುವುದರಿಂದ ಕಳೆದುಕೊಳ್ಳಬಹುದು.

೬೨-೬೩. ಪ್ರಯಾಗದಲ್ಲಿ ಮಾಘಸ್ನಾನಮಾಡಿದವರು ಆಯಾಯಾಲೋಕಗಳಲ್ಲಿ ಅನೇಕ ಭೋಗಗಳನ್ನನುಭವಿಸಿ ತರುವಾಯ ಚಕ್ರಪ್ರಾಣಿಯಾದ ಹರಿಯಲ್ಲಿ ಲೀನರಾಗುವರು.

ಪಶ್ಚಾಚ್ಚ ಕ್ರಿಣಿ ಲೀಯಂತೇ ಪ್ರಯಾಗೇ ಮಾಘಮಜ್ಜಿನಃ |
ಉಪಸ್ಪೃಶತಿ ಯೋ ಮಾಘೇ ಮಕರಾರ್ಕೇ ಸಿತಾಸಿತೇ || ೬೩ ||

ತಸ್ಯ ಪುಣ್ಯಸ್ಯ ಸಂಖ್ಯಾಂ ನೋ ಚಿತ್ರಗುಪ್ತೋಽಪಿ ವೇತ್ತ್ಯಲಂ |
ರಾಜಸೂಯಸಹಸ್ರಶ್ಚ ವಾಜಪೇಯಶತಸ್ಯ ಚ |
ಫಲಂ ಸಿತಾಸಿತೇ ಮಾಘೇ ಸ್ನಾತಾನಾಂ ಭವತಿ ಧ್ರುವಂ || ೬೪ ||

ಆಕಲ್ಪಜನ್ಮಭಿಃ ಪಾಪಂ ಸಂಚಿತಂ ಮನುಜೈಸ್ತು ಯತ್ |
ತದ್ಭವೇದ್ಭಸ್ಮಸಾನ್ಮಾಘೇ ಸ್ನಾತಾನಾಂ ತು ಸಿತಾಸಿತೇ || ೬೫ ||

ಗಂಗಾಯಮುನಯೋಶ್ಚೈವ ಸಂಗಮೋ ಲೋಕವಿಶ್ರುತಃ |
ಸ ಏವ ಕಾಮಿಕಂ ತೀರ್ಥಂ ತತ್ರ ಸ್ನಾನೇನ ಭಕ್ತಿತಃ || ೬೬ ||

ಯಸ್ಯ ಯಸ್ಯ ಚ ಯಃ ಕಾಮಸ್ತಸ್ಯ ತಸ್ಯ ಭವೇದ್ಧಿ ಸಃ |
ಭೋಗಕಾಮಸ್ಯ ಭೋಗಾಃ ಸ್ಯುಃ ಸ್ಯಾದ್ರಾಜ್ಯಂ ರಾಜ್ಯಕಾಮಿನಃ || ೬೭ ||

---

೬೩-೬೪. ಮಾಘಮಾಸ ಮಕರಸಂಕ್ರಮಣಕಾಲದಲ್ಲಿ ಸಿತಾಸಿತಸಂಗಮ ತೀರ್ಥದಲ್ಲಿ ಸ್ನಾನಾದಿಗಳನ್ನು ಮಾಡುವವನ ಪುಣ್ಯದ ಪರಿಮಿತಿಯನ್ನು ಚಿತ್ರ ಗುಪ್ತನೂ ಸಹ ಚೆನ್ನಾಗಿ ತಿಳಿಯಲಾರನು.

ಸಿತಾಸಿತದಲ್ಲಿ ಮಾಘಸ್ನಾನಮಾಡಿದವರಿಗೆ ಒಂದುಸಾವಿರ ರಾಜಸೂಯ ಮತ್ತು ನೂರು ವಾಜಪೇಯಯಾಗಗಳ ಫಲವು ಖಂಡಿತವಾಗಿ ಲಭಿಸುವುದು.

೬೫. ಮನುಷ್ಯನು ಕಲ್ಪಾದಿಯಿಂದ ಬಂದ ಜನ್ಮಗಳಲ್ಲೆಲ್ಲಾ ಸಂಪಾ ದಿಸಿದ ಪಾಪವೆಲ್ಲವೂ ಸಿತಾಸಿತಸಂಗಮದಲ್ಲಿ ಮಾಘಸ್ನಾನಮಾಡಿದರೆ ಸುಟ್ಟು ಬೂದಿಯಾಗುವುದು.

೬೬-೬೭. ಗಂಗಾ ಯಮುನಾನದಿಗಳ ಸಂಗಮವು ಲೋಕವಿಖ್ಯಾತ ವಾದುದು. ಅದೇ ಕಾಮಿಕತೀರ್ಥವು. ಅಲ್ಲಿ ಯಾರುಯಾರು ಯಾವಯಾವ ಇಷ್ಟಸಿದ್ಧಿಗಾಗಿ ಭಕ್ತಿಯಿಂದ ಸ್ನಾನಮಾಡುವರೋ ಅವರವರಿಗೆ ಆಯಾಯಾ ಕಾಮವು ಸಿದ್ಧಿಸುವುದು.

ಭೋಗಕಾಮಿಗೆ ಭೋಗಗಳೂ, ರಾಜ್ಯ ಕಾಮಿಗಳಿಗೆ ರಾಜ್ಯವೂ ಲಭಿಸುವುದು.

ಸ್ವರ್ಗಃ ಸ್ಯಾತ್ಸ್ವರ್ಗಕಾಮಸ್ಯ ಮೋಕ್ಷಸ್ಯಾನ್ಮೋಕ್ಷಕಾಮಿನಃ ।
ಕಾಮಪ್ರದಾನಿ ತೀರ್ಥಾನಿ ತ್ರೈಲೋಕ್ಯೇ ಯಾನಿ ಕಾನಿ ಚ ॥ ೬೮ ॥

ತಾನಿ ಸರ್ವಾಣಿ ಸೇವಂತೇ ಪ್ರಯಾಗಂ ಮಕರೇ ರವೌ ।
ಹರಿದ್ವಾರೇ ಪ್ರಯಾಗೇ ಚ ಗಂಗಾಸಾಗರಸಂಗಮೇ ॥ ೬೯ ॥

ಸ್ನಾತ್ವೈವ ಬ್ರಹ್ಮಣೋ ವಿಷ್ಣೋಃ ಶಿವಸ್ಯ ಚ ಪುರಂ ವ್ರಜೇತ್ ।
ಸಿತಾಸಿತೇ ತು ಯತ್ ಸ್ನಾನಂ ಮಾಘಮಾಸೇ ಸುಲೋಚನೇ ॥ ೭೦ ॥

ನಾದತ್ತೇ ಪುನರಾವೃತ್ತಿಂ ಕಲ್ಪಕೋಟಿಶತೈರಪಿ ।
ಸತ್ಯವಾದೀ ಜಿತಕ್ರೋಧೋ ಹ್ಯಹಿಂಸಾಂ ಪರಮಾಂ ಶ್ರಿತಃ ॥ ೭೧ ॥

ಧರ್ಮಾನುಸಾರೀ ತತ್ವಜ್ಞೋ ಗೋಬ್ರಾಹ್ಮಣಹಿತೇ ರತಃ ।
ಗಂಗಾಯಮುನಯೋರ್ಮಧ್ಯೇ ಸ್ನಾತೋ ಮುಚ್ಯೇತ ಕಿಲ್ಬಿಷಾತ್ ॥೭೨॥

---

೬೮-೬೯. ಸ್ವರ್ಗವನ್ನು ಬಯಸಿದವನಿಗೆ ಸ್ವರ್ಗವೂ, ಮೋಕ್ಷಾರ್ಥಿಗೆ ಮೋಕ್ಷವೂ ದೊರೆಯುವುದು ಮೂರುಲೋಕಗಳಲ್ಲಿಯೂ ಇರುವ ಇಷ್ಟಾರ್ಥ ದಾಯಕವಾದ ತೀರ್ಥಗಳೆಲ್ಲವೂ ಮಕರಸಂಕ್ರಮಣ ಕಾಲದಲ್ಲಿ ಪ್ರಯಾಗವನ್ನು ಸೇವಿಸುವುವು.

೬೯-೭೦. ಹರಿದ್ವಾರ, ಪ್ರಯಾಗ, ಗಂಗಾಸಮುದ್ರಗಳ ಸಂಗಮ ಇವುಗಳಲ್ಲಿ ಸ್ನಾನಮಾಡಿಯೇ ಬ್ರಹ್ಮ, ವಿಷ್ಣು, ಶಿವ ಇವರುಗಳ ಲೋಕಕ್ಕೆ ಹೋಗಬೇಕು.

೭೦-೭೧. ಸುಲೋಚನೇ! ಮಾಘಮಾಸದಲ್ಲಿ ಸಿತಾಸಿತ ಸಂಗಮದಲ್ಲಿ ಮಾಡುವ ಸ್ನಾನವು ನೂರಾರು ಕೋಟಿ ಕಲ್ಪಗಳವರೆಗೂ ಪುನರ್ಜನ್ಮವನ್ನು ಹೊಂದದಂತೆ ಮಾಡುವುದು.

೭೧-೭೨. ಸತ್ಯವಾದಿಯು, ಕ್ರೋಧವನ್ನು ಜಯಿಸಿದವನು, ಉತ್ತಮ ಅಹಿಂಸಾವ್ರತವನ್ನಾಶ್ರಯಿಸಿರುವವನು, ಧರ್ಮಾನುಸಾರಿಯು, ತತ್ವಜ್ಞಾನಿಯು, ಗೋಬ್ರಾಹ್ಮಣರಿಗೆ ಉಪಕಾರಮಾಡುವುದರಲ್ಲಾಸಕ್ತನೂ ಆದ ಮನುಷ್ಯನು ಗಂಗಾಯಮುನೆಗಳ ಮಧ್ಯದಲ್ಲಿ ಸ್ನಾನಮಾಡಿದವನಾಗಿ ಪಾಪವಿಮೋಚನೆಯನ್ನು ಹೊಂದುವನು.

ಮನಸಾ ಚಿಂತಿತಾನ್ ಕಾಮಾಂಸ್ತತ್ರ ಪ್ರಾಪ್ನೋತಿ ಪುಷ್ಕಲಾನ್ ।
ಸ್ವರ್ಣಭಾರಸಹಸ್ರೇಣ ಕುರುಕ್ಷೇತ್ರೇ ರವಿಗ್ರಹೇ ॥ ೭೩ ॥

ಯತ್ಫಲಂ ಲಭತೇ ಮಾಘೇ ತ್ರ್ಯಹಸ್ನಾನೇನ ಯತ್ಫಲಂ ।
ನಾಶ್ವಮೇಧಸಹಸ್ರೇಣ ತತ್ಫಲಂ ಲಭತೇ ಸತಿ ॥ ೭೪ ॥

ತ್ರ್ಯಹಸ್ನಾನಫಲಂ ಮಾಘೇ ಪುರಾ ಕಾಂಚನಮಾಲಿನೀ ।
ರಾಕ್ಷಸಾಯ ದದೌ ಪ್ರೀತ್ಯಾ ತೇನ ಮುಕ್ತಃ ಸ ಪಾಪಕೃತ್ ॥ ೭೫ ॥

ತ್ರ್ಯಹಾತ್ಪಾಪಕ್ಷಯೋ ಜಾತಃ ಸಪ್ತವಿಂಶತಿಭಿರ್ದಿನೈಃ ।
ಸ್ನಾತೇನ ಯದಭೂತ್ಪುಣ್ಯಂ ತೇನ ದೇವತ್ವಮಾಗತಾ ॥ ೭೬ ॥

ರಮಮಾಣಾ ತು ಕೈಲಾಸೇ ಗಿರಿಜಾಯಾಃ ಪ್ರಿಯಾ ಸಖೀ ।
ಜಾತಿಸ್ಮರಾ ತಥಾ ಜಾತಾ ಪ್ರಯಾಗಸ್ಯ ಪ್ರಸಾದತಃ ॥ ೭೭ ॥

---

೭೩-೭೪. ಅಲ್ಲಿ ಮನಸ್ಸಿನಲ್ಲಿ ನೆನೆದ ಕಾಮಗಳೆಲ್ಲವನ್ನೂ ಪುಷ್ಕಲವಾಗಿ ಹೊಂದುವನು. ಕುರುಕ್ಷೇತ್ರದಲ್ಲಿ ಸೌರಪರ್ವಕಾಲದಲ್ಲಿ ಸಾವಿರ ಸುವರ್ಣಭಾರಗಳನ್ನು ದಾನಮಾಡುವುದರಿಂದ ಬರುವಫಲ ಮತ್ತು ಮೂರು ದಿವಸಗಳು ಮಾಘಸ್ನಾನಮಾಡುವುದರಿಂದಾಗುವ ಫಲ ಇವು ಸಾವಿರ ಅಶ್ವಮೇಧಯಾಗಮಾಡಿದರೂ ಬರುವುದಿಲ್ಲ.

೭೫. ಪೂರ್ವದಲ್ಲಿ ಕಾಂಚನಮಾಲಿನಿಯು ಮೂರುದಿನ ಮಾಘಸ್ನಾನ ಮಾಡಿದ ಫಲವನ್ನು ವಿಶ್ವಾಸದಿಂದ ರಾಕ್ಷಸನಿಗೆ ಕೊಟ್ಟಳು. ಆದರಿಂದ ಆ ಪಾಪಕಾರಿಯು ಮುಕ್ತನಾದನು.

೭೬. ಮೂರುದಿನಗಳ ಸ್ನಾನದಿಂದ ಪಾಪಪರಿಹಾರವಾಯಿತು. ಇಪ್ಪತ್ತೇಳುದಿನಗಳು ಮಾಡಿದ ಸ್ನಾನದಿಂದುಂಟಾದ ಪುಣ್ಯದಿಂದ ದೇವತ್ವವುಂಟಾಯಿತು.

೭೭. ಹೀಗೆ ದೇವತೆಯಾಗಿ ಕೈಲಾಸದಲ್ಲಿ ಗಿರಿಜಾದೇವಿಯ ಪ್ರಿಯಸಖಿಯಾಗಿ ವಿಹರಿಸುತ್ತಿದ್ದ ಅವಳು ಪ್ರಯಾಗಪ್ರಸಾದದಿಂದ ಜನ್ಮಾಂತರಸ್ಮರಣೆಯುಳ್ಳವಳಾದಳು.

ಅವಂತ್ರೀವಿಷಯೇ ರಾಜಾ ವಾಸರಾಜೋಽಭವತ್ಪುರಾ ।
ನರ್ಮದಾತೀರ್ಥಮಾಸಾದ್ಯ ರಾಜಸೂಯಂ ಚಕಾರ ಸಃ ॥ ೭೮ ॥

ಅಶ್ವೈಃ ಷೋಡಶಭಿಸ್ತತ್ರ ಸ್ವರ್ಣಯೂಪವಿರಾಜಿತೈಃ ।
ಸ್ವರ್ಣಭೂಷಣಭೂಷಾಢ್ಯೈರೇಜೇ ಸೋಽಪಿ ಯಥಾ ವಿಧಿ ॥ ೭೯ ॥

ಪ್ರದದೌ ಧಾನ್ಯರಾಶಿಂ ಚ ದ್ವಿಜೇಭ್ಯಃ ಪರ್ವತೋಪಮಂ ।
ಶ್ರದ್ಧಾವಾನ್ ದೇವತಾಭಕ್ತೋ ಗೋಪ್ರದಶ್ಚ ಸುವರ್ಣದಃ ॥ ೮೦ ॥

ಬ್ರಾಹ್ಮಣೋ ಭದ್ರಕೋ ನಾಮ ಮೂರ್ಖೋ ಹೀನಕುಲಸ್ತಥಾ ।
ಕೃಷೀವಲೋಽಧಮಾಚಾರಃ ಸರ್ವಧರ್ಮಬಹಿಷ್ಕೃತಃ ॥ ೮೧ ॥

ಸೀರಕರ್ಮಸಮುದ್ವಿಗ್ನೋ ಬಂಧುಭಿಶ್ಚ ಸ ವಂಚಿತಃ ।
ಇತಸ್ತತಃ ಪರಿಕ್ರಮ್ಯ ನಿರ್ಗತೋಽದೃಷ್ಟಪೀಡಿತಃ ॥ ೮೨ ॥

---

೭೮. ಅವಂತೀದೇಶದಲ್ಲಿ ಪೂರ್ವದಲ್ಲಿ ವಾಸರಾಜನೆಂಬ ದೊರೆಯಿದ್ದನು. ಅವನು ನರ್ಮದಾನದಿಯ ತೀರಕ್ಕೆ ಬಂದು ರಾಜಸೂಯಯಾಗವನ್ನು ಮಾಡಿದನು.

೭೯. ಅಲ್ಲಿ ಆ ರಾಜನು ವಿಧಿವತ್ತಾಗಿ ಬಂಗಾರದ ಯೂಪಸ್ತಂಭಗಳಿಂದ ವಿರಾಜಮಾನವಾದ, ಬಂಗಾರದ ಆಭರಣಗಳಿಂದ ತುಂಬಿದ, ಹದಿನಾರು ಕುದುರೆಗಳ ಸಹಿತವಾಗಿ ಪ್ರಕಾಶಮಾನನಾಗಿದ್ದನು.

೮೦. ಶ್ರದ್ಧಾವಂತನು, ದೇವತಾಭಕ್ತನು, ಗೋಹಿರಣ್ಯದಾತನೂ ಆದ ಅವನು ಪರ್ವತಗಳಿಗೆ ಸಮಾನವಾದ ಧಾನ್ಯರಾಶಿಯನ್ನು ದ್ವಿಜರಿಗೆ ದಾನ ಮಾಡಿದನು.

೮೧-೮೨. ಮೂರ್ಖನು, ಹೀನಕುಲದಲ್ಲಿ ಹುಟ್ಟಿದವನು, ಒಕ್ಕಲಿಗನ ಧರ್ಮವನ್ನಾಶ್ರಯಿಸಿರುವವನು, ಸಕಲಧರ್ಮಬಹಿಷ್ಕೃತನು, ವ್ಯವಸಾಯದಲ್ಲಿ ಅತಿಶ್ರಮವನ್ನು ಹೊಂದಿರುವವನು, ಬಂಧುಗಳ ವಂಚನೆಗೀಡಾಗಿರುವವನೂ

ದೈವತೋ ಜ್ಞಾನಮಾಶ್ರಿತ್ಯ ಪ್ರಯಾಗಂ ಸಮುಪಾಗತಃ ।
ಮಹಾಮಾಘೀಂ ಪುರಸ್ಕೃತ್ಯ ಸಸ್ನೌ ತತ್ರ ದಿನತ್ರಯಂ ॥ ೮೩ ॥

ಅನಘಃ ಸ್ನಾನಮಾತ್ರೇಣ ಸಮಭೂತ್ಸ ದ್ವಿಜೋತ್ತಮಃ ।
ಪ್ರಯಾಗಾಚ್ಚಲಿತಸ್ತಸ್ಮಾದ್ಧ್ಯಯೌ ಯಸ್ಮಾತ್ಸಮಾಗತಃ ॥ ೮೪ ॥

ಸ ರಾಜಾ ಸೋಽಪಿ ವೈ ವಿಪ್ರೋ ವಿಪನ್ನಾವೇಕದಾ ತದಾ ।
ತಯೋರ್ಗತಿಃ ಸಮಾ ದೃಷ್ಟಾ ದೇವರಾಜಸ್ಯ ಸನ್ನಿಧೌ ॥ ೮೫ ॥

ತೇಜೋ ರೂಪಂ ಬಲಂ ಸ್ತ್ರೈಣಂ ದೇವಯಾನಂ ವಿಭೂಷಣಂ ।
ಮಾಲಾ ಚ ಪಾರಿಜಾತಸ್ಯ ನೃತ್ಯಂ ಗೀತಂ ಸಮಂ ತಯೋಃ ॥ ೮೬ ॥

ಇತಿ ದೃಷ್ಟ್ವಾ ಹಿ ಮಾಹಾತ್ಮ್ಯಂ ಕ್ಷೇತ್ರಸ್ಯ ಕಥಮುಚ್ಯತೇ ।
ಮಾಘಃ ಸಿತಾಸಿತೇ ಭದ್ರೇ ರಾಜಸೂಯಸಮೋ ನ ಚ ॥ ೮೭ ॥

---

ಆದ ಭದ್ರಕನೆಂಬ ಬ್ರಾಹ್ಮಣನು ಅಲ್ಲಲ್ಲಿ ಸಂಚರಿಸುತ್ತ ಪ್ರಾರಬ್ಧಪೀಡೆಗಳನ್ನು ಅನುಭವಿಸಿ ದೈವಯೋಗದಿಂದ ಜ್ಞಾನಬಂದು ಪ್ರಯಾಗಕ್ಕೆ ಬಂದನು. ಅಲ್ಲಿ ಮಹಾಮಾಘೀಪರ್ವಕಾಲವನ್ನು ನಿರೀಕ್ಷಿಸಿ ಆಗ ಮೂರುದಿನಗಳು ಸ್ನಾನ ಮಾಡಿದನು

೮೪. ಆ ದ್ವಿಜೋತ್ತಮನು ಸ್ನಾನಮಾಡಿದ ಮಾತ್ರದಿಂದ ಪಾಪರಹಿತನಾದನು. ಅನಂತರ ಅವನು ಪ್ರಯಾಗವನ್ನು ಬಿಟ್ಟು ಹೊರಟು ಅವನಸ್ಥಳಕ್ಕೆ ಹೋದನು.

೮೫. ಆ ರಾಜನು ಮತ್ತು ಈ ಬ್ರಾಹ್ಮಣ ಇವರಿಬ್ಬರು ಮೃತರಾದ ಮೇಲೆ ಒಂದು ದಿನ ಇಂದ್ರನಸನ್ನಿಧಿಯಲ್ಲಿ ಅವರಗತಿಯು ಸಮನಾಗಿ ಕಂಡು ಬಂದಿತು.

೮೬. ತೇಜಸ್ವಿಯಾದ ರೂಪ, ಬಲ, ದೇವಯಾನ, ಸ್ತ್ರೀ, ಅಲಂಕಾರ, ಪಾರಿಜಾತ ಹೂವಿನಮಾಲಿಕೆ, ನರ್ತನ, ಗಾನ ಇವೆಲ್ಲವೂ ಅವರಿಬ್ಬರಿಗೂ ಸಮಾನವಾಗಿದ್ದಿತು

೮೭. ಈರೀತಿ ಪ್ರಯಾಗಕ್ಷೇತ್ರದ ಮಾಹಾತ್ಮ್ಯೆಯನ್ನು ನೋಡಿದಮೇಲೆ ಭದ್ರೇ! ಗಂಗಾ ಯಮುನಾ ಸಂಗಮದಲ್ಲಿ ಮಾಘಸ್ನಾನವು ರಾಜಸೂಯ ಸಮಾನವಲ್ಲವೆಂದು ಹೇಳುವುದು ಹೇಗೆ?

ಧನುರ್ವಿಂಶತ್ರಿವಿಸ್ತೀರ್ಣೇ ಸಿತನೀಲಾಂಬುಸಂಗಮೇ ।
ಮಾಘಾದಪುನರಾವೃತ್ತೀ ರಾಜಸೂಯಾತ್ಪುನರ್ಭವೇತ್ ॥ ೮೮ ॥

ಕಂಬಲಾಶ್ವತರೌ ನಾಗೌ ವಿಪುಲೇ ಯಮುನಾತಟೇ ।
ತತ್ರ ಸ್ನಾತ್ವಾ ಚ ಪೀತ್ವಾ ಚ ಸರ್ವಪಾಪೈಃ ಪ್ರಮುಚ್ಯತೇ ॥ ೮೯ ॥

ತತ್ರ ಗತ್ವಾ ಚ ಸಂಸ್ಥಾನೇ ಮಹಾದೇವಸ್ಯ ಧೀಮತಃ ।
ನರಸ್ತಾರಯತೇ ಪುಂಸೋ ದಶಪೂರ್ವಾನ್ದಶಾವರಾನ್ ॥ ೯೦ ॥

ಕೂಪಂ ಚೈವ ತು ತತ್ರಾಸ್ತಿ ಪ್ರತಿಷ್ಠಾನೇತಿ ವಿಶ್ರುತಂ ।
ತತ್ರ ಸ್ನಾತ್ವಾ ಪಿತೄನ್ದೇವಾನ್ ಸಂತರ್ಪ್ಯ ಯತಮಾನಸಃ ॥ ೯೧ ॥

ಬ್ರಹ್ಮಚಾರೀ ಜಿತಕ್ರೋಧಸ್ತ್ರಿರಾತ್ರಂ ಯತ್ರ ತಿಷ್ಠತಿ ।
ಸರ್ವಪಾಪವಿಶುದ್ಧಾತ್ಮಾ ಸೋಽಶ್ವಮೇಧಫಲಂ ಲಭೇತ್ ॥ ೯೨ ॥

---

೮೮. ಇಪ್ಪತ್ತು ಧನಸ್ಸುಗಳಷ್ಟು ವಿಶಾಲವಾದ ಗಂಗಾ ಯಮುನಾ ಸಂಗಮಸ್ಥಾನದಲ್ಲಿ ಮಾಡುವ ಮಾಘಸ್ನಾನದಿಂದ ಪುನರ್ಜನ್ಮ ಬರದಂತಾಗುವುದು. ರಾಜಸೂಯದಿಂದಲಾದರೋ ಪುನರ್ಜನ್ಮ ಬರುವುದು.

೮೯. ಕಂಬಲ, ಅಶ್ವತರವೆಂಬ ನಾಗಗಳು ವಿಶಾಲವಾದ ಯಮುನಾ ತೀರದಲ್ಲಿ ಸ್ನಾನಪಾನಾದಿಗಳನ್ನು ಮಾಡಿ ಸಕಲಪಾಪಗಳನ್ನೂ ಹೋಗಲಾಡಿಸಿಕೊಂಡಿರುವುವು.

೯೦. ಜ್ಞಾನಿಯಾದ ಮಹಾದೇವನಿಗೆ ಆವಾಸಸ್ಥಾನವಾದ ಆ ಪ್ರದೇಶಕ್ಕೆ ಹೋಗಿ ಮನುಷ್ಯನು ಹಿಂದುಮುಂದಿನ ಹತ್ತುಕುಲಗಳನ್ನುದ್ಧರಿಸುವನು.

೯೧-೯೨. ಅಲ್ಲಿ ಪ್ರತಿಷ್ಠಾನ ಎಂದು ವಿಖ್ಯಾತವಾದ ಕೂಪವಿದೆ. ಅದರಲ್ಲಿ ಸ್ನಾನಮಾಡಿ ಪಿತೃ ಮತ್ತು ದೇವತೆಗಳಿಗೆ ತರ್ಪಣವಾಡಿ, ಕ್ರೋಧವನ್ನು ಬಿಟ್ಟು, ಅಲ್ಲಿ ಮೂರುದಿನಗಳು ಬ್ರಹ್ಮಚರ್ಯದಿಂದ ವಾಸಮಾಡಿದರೆ ಅವನು ಸಕಲಪಾಪಗಳನ್ನೂ ಕಳೆದುಕೊಂಡು ಪರಿಶುದ್ಧನಾಗಿ ಅಶ್ವಮೇಧಫಲವನ್ನು ಹೊಂದುವನು.

ಉತ್ತರೇಣ ಪ್ರತಿಷ್ಠಾನಾದ್ಭಾಗೀರಥ್ಯಾಶ್ಚ ಪೂರ್ವತಃ ।
ಹಂಸಪ್ರಪತನಂ ನಾಮ ತೀರ್ಥಂ ಲೋಕೇಷು ವಿಶ್ರುತಂ ॥ ೯೩ ॥

ಅಶ್ವಮೇಧಫಲಂ ತತ್ರ ಸ್ನಾನಮಾತ್ರೇಣ ಲಭ್ಯತೇ ।
ಯಾವಚ್ಚಂದ್ರಶ್ಚ ಸೂರ್ಯಶ್ಚ ತಾವತ್ಸ್ವರ್ಗೇ ಮಹೀಯತೇ ॥ ೯೪ ॥

ತತೋ ಭೋಗವತೀಂ ಗತ್ವಾ ವಾಸುಕೇರುತ್ತರೇಣ ಚ ।
ದಶಾಶ್ವಮೇಧಿಕಂ ನಾಮ ತತ್ತೀರ್ಥಂ ಪರಮಂ ಸ್ಮೃತಂ ॥ ೯೫ ॥

ತತ್ರ ಕೃತ್ವಾಭಿಷೇಕಂ ತು ವಾಜಿಮೇಧಫಲಂ ಲಭೇತ್ ।
ಧನಾಢ್ಯೋ ರೂಪವಾನ್ ದಕ್ಷೋ ದಾತಾ ಭವತಿ ಧಾರ್ಮಿಕಃ ॥ ೯೬ ॥

ಚತುರ್ವೇದಿಷು ಯತ್ಪುಣ್ಯಂ ಸತ್ಯವಾದಿಷು ಯತ್ಫಲಂ ।
ಅಹಿಂಸಾಯಾಂ ತು ಯೋ ಧರ್ಮೋ ಗಮನಾತ್ತಸ್ಯ ತತ್ಫಲಂ ॥ ೯೭ ॥

---

೯೩. ಪ್ರತಿಷ್ಠಾನಕ್ಕೆ ಉತ್ತರ, ಭಾಗೀರಥಿಗೆ ಪೂರ್ವದಿಕ್ಕಿನಲ್ಲಿ ಹಂಸಪ್ರಪತನವೆಂಬ ಲೋಕವಿಖ್ಯಾತವಾದ ತೀರ್ಥವಿದೆ.

೯೪. ಅಲ್ಲಿ ಸ್ನಾನಮಾಡುವ ಮಾತ್ರದಿಂದ ಅಶ್ವಮೇಧಯಜ್ಞದ ಫಲವು ಲಭಿಸುತ್ತದೆ. ಅವನು ಚಂದ್ರಸೂರ್ಯರಿರುವವರೆಗೂ ಸ್ವರ್ಗಲೋಕದಲ್ಲಿ ಸತ್ಕರಿಸಲ್ಪಡುವನು.

೯೫. ಅನಂತರ ಭೋಗವತಿಗೆ ಹೋದರೆ ವಾಸುಕಿಯ ಉತ್ತರಭಾಗದಲ್ಲಿ ದಶಾಶ್ವಮೇಧಿಕವೆಂಬ ಉತ್ತಮತೀರ್ಥವು ದೊರೆಯುವುದು.

೯೬. ಅಲ್ಲಿ ಅಭಿಷೇಕ ಮಾಡಿದರೆ ಅಶ್ವಮೇಧಫಲವು ಬರುವುದು. ಅವನು ಐಶ್ವರ್ಯವಂತನು, ಸುಂದರನು, ಸಮರ್ಥನು, ದಾತನು ಧಾರ್ಮಿಕನೂ ಆಗುವನು.

೯೭. ನಾಲ್ಕುವೇದಗಳ ಅಧ್ಯಯನ, ಸತ್ಯವಚನ, ಅಹಿಂಸಾವ್ರತಾನುಷ್ಠಾನ ಇವುಗಳಿಂದ ಉಂಟಾಗುವ ಪುಣ್ಯವೆಲ್ಲವೂ ದಶಾಶ್ವಮೇಧಿಕ ತೀರ್ಥಯಾತ್ರೆಯಿಂದ ಲಭಿಸುವುದು.

ಪಾಯತೇಶ್ಚೋತ್ತರೇ ಕೂಲೇ ಪ್ರಯೊಗಸ್ಯ ತು ದಕ್ಷಿಣೇ ।
ಋಣಮೋಚನಕಂ ನಾಮ ತೀರ್ಥಂ ತು ಪರಮಂ ಸ್ಮೃತಂ ॥ ೯೮ ॥

ಏಕರಾತ್ರೋಷಿತಃ ಸ್ನಾತ್ವಾ ಋಣೈಃ ಸರ್ವೈಃ ಪ್ರಮುಚ್ಯತೇ ।
ಸ್ವರ್ಗಲೋಕಮವಾಪ್ನೋತಿ ಹ್ಯಮರಶ್ಚ ತಥಾ ಭವೇತ್ ॥ ೯೯ ॥

ತ್ರಿಕಾಲಮೇಕಸ್ನಾಯೀ ಚಾಹಾರಮುಕ್ತಿಂ ಯ ಆಚರೇತ್ ।
ವಿಶ್ವಾಸಘಾತಪಾಪಾತ್ತು ತ್ರಿಭಿರ್ಮಾಸೈಃ ಸ ಶುದ್ಧ್ಯತಿ ॥ ೧೦೦ ॥

ಕೀರ್ತನಾಲ್ಲಭತೇ ಪುಣ್ಯಂ ದೃಷ್ಟ್ವಾ ಭದ್ರಾಣಿ ಪಶ್ಯತಿ ।
ಅವಗಾಹ್ಯ ಚ ಪೀತ್ವಾ ಚ ಪುನಾತ್ಯಾಸಪ್ತಮಂ ಕುಲಂ ॥ ೧೦೧ ॥

ಮಕರಸ್ಥೇ ರವೌ ಮಾಘೇ ನ ಸ್ನಾತ್ಯನುದಿನೇ ರವೌ ।
ಕಥಂ ಪಾಪೈಃ ಪ್ರಮುಚ್ಯೇತ ಕಥಂ ವಾ ತ್ರಿದಿವಂ ವ್ರಜೇತ್ ॥ ೧೦೨ ॥

---

೯೮. ಪಾಯತಿಯ ಉತ್ತರತೀರ ಮತ್ತು ಪ್ರಯಾಗಕ್ಕೆ ದಕ್ಷಿಣ ದಿಗ್ಭಾಗದಲ್ಲಿ ಋಣವಿಮೋಚನವೆಂಬ ಉತ್ತಮತೀರ್ಥವಿದೆಯೆಂದು ಉಕ್ತವಾಗಿದೆ.

೯೯. ಅಲ್ಲಿ ಸ್ನಾನಮಾಡಿ ಒಂದುದಿನ ಇರುವವನು ಸಕಲಋಣಗಳಿಂದಲೂ ಬಿಡುಗಡೆಯನ್ನು ಹೊಂದುವನು. ಮತ್ತು ಸ್ವರ್ಗಲೋಕವನ್ನು ಹೊಂದಿ ದೇವತಾಪುರುಷನಾಗುವನು.

೧೦೦. ತ್ರಿಕಾಲಗಳಲ್ಲಿ ಸ್ನಾನಮಾಡುತ್ತಾ ಆಹಾರವನ್ನು ಬಿಟ್ಟು ಮೂರು ತಿಂಗಳು ಅಲಿದ್ದರೆ ವಿಶ್ವಾಸಘಾತಕತನದಿಂದುಂಟಾದ ಪಾಪವನ್ನು ಕಳೆದುಕೊಂಡು ಪರಿಶುದ್ಧನಾಗುವನು.

೧೦೧. ಆ ತೀರ್ಥಕೀರ್ತನೆಯಿಂದ ಪುಣ್ಯಲಾಭವೂ, ದರ್ಶನದಿಂದ ಮಂಗಳಾವಾಪ್ತಿಯೂ, ಸ್ನಾನಪಾನಗಳಿಂದ ಏಳುಕುಲಗಳವರೆಗಿನ ಪಿತೃಗಳ ಉದ್ಧಾರವೂ ಆಗುವುದು.

೧೦೨. ಮಾಘಮಾಸದಲ್ಲಿ ಮಕರಸಂಕ್ರಾಂತಿಯ ದಿವಸ ಸೂರ್ಯೋದಯವಾಗುವುದಕ್ಕಿಂತ ಮುಂಚಿತವಾಗಿ ಸ್ನಾನಮಾಡದಿರುವವನು ಪಾಪಗಳಿಂದ ಹೇಗೆ ಮುಕ್ತನಾದಾನು? ಸ್ವರ್ಗಕ್ಕಾದರೂ ಹೋಗುವಬಗೆ ಎಂತು?

ಪ್ರಯಾಗೇ ವಪನಂ ಕುರ್ಯಾದ್ಗಯಾಯಾಂ ಪಿಂಡಪಾತನಂ ।
ದಾನಂ ದದ್ಯಾತ್ಕುರುಕ್ಷೇತ್ರೇ ವಾರಾಣಸ್ಯಾಂ ತನುಂ ತ್ಯಜೇತ್ ॥ ೧೦೩ ॥

ಕಿಂ ಗಯಾಪಿಂಡದಾನೇನ ಕಾಶ್ಯಾಂ ವಾ ಮರಣೇನ ಕಿಂ ।
ಕಿಂ ಕುರುಕ್ಷೇತ್ರದಾನೇನ ಪ್ರಯಾಗೇ ಮುಂಡನಂ ಯದಿ ॥ ೧೦೪ ॥

ಸಂವತ್ಸರಂ ದ್ವಿಮಾಸೋನಂ ಪುನಸ್ತೀರ್ಥಂ ವ್ರಜೇದ್ಯದಿ ।
ಮುಂಡನಂ ನೋಪವಾಸಂ ಚ ತತೋ ಯತ್ನೇನ ಕಾರಯೇತ್ ॥ ೧೦೫ ॥

ಪ್ರಯಾಗಪ್ರಾಪ್ತನಾರೀಣಾಂ ಮುಂಡನಂ ತ್ವೇವಮೀರಯೇತ್ ।
ಸರ್ವಾನ್ಕೇಶಾನ್ ಸಮುದ್ಧೃತ್ಯ ಛೇದಯೇದಂಗುಲದ್ವಯಂ ॥ ೧೦೬ ॥

---

೧೦೩. ಪ್ರಯಾಗದಲ್ಲಿ ಕ್ಷೌರಮಾಡಿಸಿಕೊಳ್ಳಬೇಕು. ಗಯೆಯಲ್ಲಿ ಪಿಂಡಪ್ರದಾನಮಾಡಬೇಕು. ಕುರುಕ್ಷೇತ್ರದಲ್ಲಿ ದಾನಮಾಡಬೇಕು.. ಕಾಶಿಯಲ್ಲಿ ದೇಹತ್ಯಾಗಮಾಡಬೇಕು

೧೦೪. ಪ್ರಯಾಗದಲ್ಲಿ ಮುಂಡನಮಾಡಿಸಿದಮೇಲೆ ಗಯಾಪಿಂಡದಾನ, ಕಾಶಿಯಲ್ಲಿ ಮರಣ, ಕುರುಕ್ಷೇತ್ರದಲ್ಲಿ ದಾನ ಇವುಗಳು ಮಾಡುವುದರಿಂದೇನು ? ಎಂದರೆ ಇವುಗಳೆಲ್ಲಕ್ಕಿಂತಲೂ ಪ್ರಯಾಗದಲ್ಲಿ ಕ್ಷೌರಕರಣವು ಪ್ರಶಸ್ತವು. ಅದನ್ನಾಚರಿಸದಿದ್ದರೆ ಇವೆಲ್ಲವೂ ನಿಷ್ಫಲವಾಗುವುದು. ಆದಕಾರಣ ಪ್ರಯಾಗ ಮುಂಡನವನ್ನು ಬಿಡದೇ ಮಾಡಿಸಿಕೊಳ್ಳಬೇಕೆಂದು ಭಾವ.

೧೦೫. ಒಂದುಬಾರಿ ಪ್ರಯಾಗಯಾತ್ರೆ ಮಾಡಿದಬಳಿಕ ಹತ್ತುತಿಂಗಳೊಳಗೆ ಪುನಃ ಆ ತೀರ್ಥಕ್ಕೆಹೋದರೆ ಮುಂಡನೋಪವಾಸನಗಳನ್ನು ಮಾಡಬೇಕಾದುದಿಲ್ಲ. ಹತ್ತುತಿಂಗಳು ಕಳೆದತರುವಾಯ ಅಲ್ಲಿಗೆ ಹೋದರೆ ಪ್ರಯತ್ನಪೂರ್ವಕವಾಗಿ ಮುಂಡನಾದಿಗಳನ್ನಾಚರಿಸಬೇಕು

೧೦೬. ಪ್ರಯಾಗಕ್ಕೆಹೋದ ಸ್ತ್ರೀಯರು ಅವರ ಕೂದಲುಗಳನ್ನೆಲ್ಲಾ ಮೇಲಕ್ಕೆತ್ತಿ ಕೊನೆಯಲ್ಲಿ ಎರಡು ಅಂಗುಲದಷ್ಟುಮಾತ್ರ ಕತ್ತರಿಸಬೇಕು. ಇದೇ ಪ್ರಯಾಗದಲ್ಲಿ ಅವರಿಗೆ ವಿಹಿತವಾದ ಮುಂಡನಕ್ರಮವೆಂದು ತಿಳಿಯಬೇಕು.

ಕೇಶಮೂಲಾನ್ಯುಪಾಶ್ರಿತ್ಯ ಸರ್ವಪಾಪಾನಿ ದೇಹಿನಾಂ ।
ತಿಷ್ಠಂತಿ ತೀರ್ಥಸ್ನಾನೇನ ತಸ್ಮಾತ್ತಾನ್ಯತ್ರ ವಾಪಯೇತ್ ॥ ೧೦೭ ॥

ಅಮಾರ್ಕಪಾತಶ್ರವಣೈರ್ಯುಕ್ತಾ ಚೇತ್ಪೌಷಮಾಘಯೋಃ ।
ಅರ್ಧೋದಯಃ ಸ ವಿಜ್ಞೇಯಃ ಸೂರ್ಯಪರ್ವಶತಾಧಿಕಃ ॥ ೧೦೮ ॥

ಕಿಂಚಿನ್ನ್ಯೂನೇ ತು ವಿಧಿಜೇ ಮಹೋದಯ ಇತಿ ಸ್ಮೃತಃ ।
ಅರುಣೋದಯವೇಲಾಯಾಂ ಶುಕ್ಲಾ ಮಾಘಸ್ಯ ಸಪ್ತಮೀ ॥ ೧೦೯ ॥

ಪ್ರಯಾಗೇ ಯದಿ ಲಭ್ಯೇತ ಸಹಸ್ರಾರ್ಕಗ್ರಹೈಃ ಸಮಾ ।
ಅಯನೇ ಕೋಟಿಪುಣ್ಯಂ ಸ್ಯಾಲ್ಲಕ್ಷಂ ತು ವಿಷುವೇ ಫಲಂ ॥ ೧೧೦ ॥

ಷಡಶೀತ್ಯಾಂ ಸಹಸ್ರಂ ತು ತಥಾ ವಿಷ್ಣುಪದೀಷು ಚ ।
ದಾನಂ ಪ್ರಯಾಗೇ ಕರ್ತವ್ಯಂ ಯಥಾವಿಭವವಿಸ್ತರಂ ॥ ೧೧೧ ॥

---

೧೦೭. ಸಕಲಪಾಪಗಳೂ ಪ್ರಾಣಿಗಳ ಕೇಶಮೂಲವನ್ನಾಶ್ರಯಿಸಿರುತ್ತವೆ. ಆದಕಾರಣ ಆ ಕೇಶಗಳನ್ನು ಇಲ್ಲಿ ಕ್ಷೌರಮಾಡಿಸಿ ತೀರ್ಥಸ್ನಾನದಿಂದ ಪಾಪಗಳನ್ನು ಕಳೆದುಕೊಳ್ಳಬೇಕು.

೧೦೮. ಪುಷ್ಯ ಅಥವಾ ಮಾಘಮಾಸಗಳ ಅಮಾವಾಸ್ಯೆಯ ದಿನದಲ್ಲಿ ಸೋಮವಾರ, ವ್ಯತೀಪಾತ, ಶ್ರವಣನಕ್ಷತ್ರ ಇವುಗಳು ಸೇರಿದರೆ ಆ ಕಾಲವನ್ನು ಅರ್ಧೋದಯ ಪರ್ವಕಾಲವೆಂದು ತಿಳಿಯಬೇಕು. ಅದು ಸೂರ್ಯಗ್ರಹಣಕ್ಕಿಂತಲೂ ನೂರುಪಾಲು ಹೆಚ್ಚು ಗುಣವುಳ್ಳದು.

೧೦೯-೧೧೧. ಇಲ್ಲಿಹೇಳಿದ ನಾಲ್ಕರಪೈಕಿ ಯಾವುದಾದರೊಂದು ಇಲ್ಲದೆ ಉಳಿದವುಗಳೊಡನೆ ಸೇರಿದ ಅಂತಹ ಅಮಾಸ್ಯೆಯು ಮಹೋದಯ ಪುಣ್ಯಕಾಲವೆನಿಸುವುದು.

ಪ್ರಯಾಗಕ್ಷೇತ್ರದಲ್ಲಿ ಮಾಘಶುಕ್ಲ ಸಪ್ತಮಿಯು ಅರುಣೋದಯಸಮಯದಲ್ಲಿ ಸಂಘಟಿಸಿದರೆ ಅದು ಸಹಸ್ರಾರ್ಕ ಗ್ರಹಣಗಳಿಗೆ ಸಮಾನವಾಗುವುದು.

ಅಯನಪುಣ್ಯಕಾಲದಲ್ಲಿ ಕೋಟಿಪುಣ್ಯವೂ, ವಿಷುವ ಪುಣ್ಯಕಾಲದಲ್ಲಿ ಲಕ್ಷದಷ್ಟು ಅಧಿಕಫಲವೂ, ಷಡಶೀತಿ ಮತ್ತು ವಿಷ್ಣುಪದಿಪುಣ್ಯಕಾಲಗಳಲ್ಲಿ ಸಾವಿರದಷ್ಟು ಅಧಿಕಫಲವೂ ಬರುವುದು. ಆಗ ತನ್ನ ಐಶ್ವರ್ಯಾನುಗುಣವಾಗಿ ಪ್ರಯಾಗದಲ್ಲಿ ದಾನಮಾಡಬೇಕು.

ತೇನ ತೀರ್ಥಫಲಂ ಚೈವ ವರ್ಧತೇ ವಿಧಿನಂದಿನಿ ।
ಗಂಗಾಯಮುನಯೋರ್ಮಧ್ಯೇ ಯಸ್ತು ಗಾಂ ವೈ ಪ್ರಯಚ್ಛತಿ ॥ ೧೧೨ ॥

ಸುವರ್ಣಂ ಮಣಿಮುಕ್ತಾಂ ವಾ ಯದಿ ವಾನ್ಯಂ ಪ್ರತಿಗ್ರಹಂ ।
ಪಾಟಲಾಂ ಕಪಿಲಾಂ ಭದ್ರೇ ಯಸ್ತು ತತ್ರ ಪ್ರಯಚ್ಛತಿ ॥ ೧೧೩ ॥

ಸ್ವರ್ಣಶೃಂಗೀಂ ರೌಪ್ಯಖುರಾಂ ಚೈಲಕಂಠೀಂ ಪಯಸ್ವಿನೀಂ ।
ಸವತ್ಸಾಂ ಶ್ರೋತ್ರಿಯಂ ಸಾಧುಂ ಗ್ರಾಹಯಿತ್ವಾ ಯಥಾವಿಧಿ ॥ ೧೧೪ ॥

ಶುಕ್ಲಾಂಬರಧರಂ ಶಾಂತಂ ಧರ್ಮಜ್ಞಂ ವೇದಪಾರಗಂ ।
ಸಾ ಚ ಗೌಸ್ತಸ್ಯ ದಾತವ್ಯಾ ಗಂಗಾಯಮುನಸಂಗಮೇ ॥ ೧೧೫ ॥

ವಾಸಾಂಸಿ ಚ ಮಹಾರ್ಹಾಣಿ ರತ್ನಾನಿ ವಿವಿಧಾನಿ ಚ ।
ಯಾವಂತೋ ರೋಮಕೂಪಾಃ ಸ್ಯುಸ್ತಸ್ಯಾ ಗೋರ್ವತ್ಸಕಸ್ಯ ಚ ॥೧೧೬॥

---

೧೧೨. ವಿಧಿನಂದನೇ! ಗಂಗಾ ಯಮುನಾ ನದಿಗಳ ಮಧ್ಯದಲ್ಲಿ ಗೋದಾನಮಾಡುವುದರಿಂದ ಯಾತ್ರಿಕನಿಗೆ ಪ್ರಯಾಗಯಾತ್ರೆಯ ಫಲವು ವೃದ್ಧಿಯಾಗುವುದು.

೧೧೩. ಪ್ರಯಾಗದಲ್ಲಿ ಸುವರ್ಣ, ಮಣಿ, ಮುತ್ತು ಅಥವಾ ಇತರ ದಾನಗಳು, ಪಾಟಲ ಇಲ್ಲವೇ ಕಪಿಲಗೋವು ಇವುಗಳನ್ನು ದಾನಮಾಡುವವನಿಗೂ ಫಲಾಧಿಕ್ಯವುಂಟಾಗುವುದು.

೧೧೪-೧೧೬. ಕೊಂಬುಗಳಲ್ಲಿ ಬಂಗಾರದಾಭರಣ, ಗೊರಸುಗಳಲ್ಲಿ ಬೆಳ್ಳಿಯ ಅಲಂಕಾರ, ಕಂಠದಲ್ಲಿ ಚೈಲಕಂಠೀ ಇವುಗಳಿಂದಲಂಕರಿಸಿದ, ಹಾಲು ಕರೆಯುತ್ತಿರುವ, ಗೋವನ್ನು ಕರುಸಹಿತವಾಗಿ ಶುಕ್ಲವಸ್ತ್ರಧಾರಿಯೂ, ಶಾಂತಿಸಂಪನ್ನನು, ಧರ್ಮಸೂಕ್ಷ್ಮವನ್ನರಿತವನು, ವೇದಪಾರಂಗತನು, ಸಾಧುವೂ ಆಗಿರುವ ಶ್ರೋತ್ರಿಯನಿಗೆ ಗಂಗಾ ಯಮುನಾ ಸಂಗಮದಲ್ಲಿ ವಿಧಿವತ್ತಾಗಿ ದಾನಮಾಡಬೇಕು. ಅದರೊಂದಿಗೆ ಅನರ್ಘ್ಯವಾದ ವಸ್ತ್ರಗಳೂ ಮತ್ತು ನಾನಾವಿಧವಾದ ರತ್ನಗಳನ್ನೂ ಸಹ ದಾನಮಾಡಬೇಕು.

ತಾವದ್ವರ್ಷಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ।
ಯತ್ರಾಸೌ ಲಭತೇ ಜನ್ಮ ಸಾ ಗೌಸ್ತತ್ರಾಭಿಜಾಯತೇ ॥ ೧೧೭ ॥

ನ ಚ ಪಶ್ಯಂತಿ ನರಕಂ ದಾತಾರಸ್ತೇನ ಕರ್ಮಣಾ ।
ಉತ್ತರಾಂಶ್ಚ ಕುರೂನ್ ಪ್ರಾಪ್ಯ ಮೋದಂತೇ ಕಾಲಮಕ್ಷಯಂ ॥ ೧೧೮ ॥

ಗವಾಂ ಶತಸಹಸ್ರೇಭ್ಯೋ ದದ್ಯಾದೇಕಾಂ ಪಯಸ್ವಿನೀಂ ।
ಪುತ್ರಾನ್ದಾರಾಂಸ್ತಥಾ ಭೃತ್ಯಾನ್ ಗೌರೇಕಾ ಪ್ರತಿ ತಾರಯೇತ್ ॥ ೧೧೯ ॥

ತಸ್ಮಾತ್ಸರ್ವೇಷು ದಾನೇಷು ಗೋದಾನಂ ತು ವಿಶಿಷ್ಯತೇ ।
ದುರ್ಗಮೇ ವಿಷಮೇ ಘೋರೇ ಮಹಾಪಾತಕಸಂಕ್ರಮೇ ॥ ೧೨೦ ॥

ಗೌರೇವ ರಕ್ಷಾಂ ಕುರುತೇ ತಸ್ಮಾದ್ದೇಯಾ ದ್ವಿಜೋತ್ತಮೇ ।
ತೀರ್ಥೇ ನ ಪ್ರತಿಗೃಹ್ಣೀಯಾತ್ ಪುಣ್ಯೇಷ್ವಾಯತನೇಷು ಚ ॥ ೧೨೧ ॥

---

೧೧೬-೧೧೭. ಹೀಗೆ ಕೊಟ್ಟ ಗೋವು ಮತ್ತು ಅದರ ಕರುಗಳಲ್ಲಿ ರೋಮಕೂಪಗಳು ಎಷ್ಟಿವೆಯೋ ಅಷ್ಟು ಸಾವಿರ ವರುಷಗಳವರೆಗೆ ದಾತನು ಸ್ವರ್ಗಲೋಕದಲ್ಲಿ ಸತ್ಕರಿಸಲ್ಪಡುವನು. ದಾತನು ಜನ್ಮಹೊಂದಿದ ಉತ್ತಮಸ್ಥಾನದಲ್ಲಿಯೇ ಆ ಗೋವು ಹುಟ್ಟುವುದು.

೧೧೮. ಹೀಗೆ ಗೋದಾನಮಾಡಿದವರು ನರಕವನ್ನು ನೋಡುವುದೇ ಇಲ್ಲ. ಅವರುಮಾಡಿದ ಆ ಕರ್ಮದಿಂದ ಉತ್ತರಕುರುಗಳಿಗೆ ಹೋಗಿ ಅನಂತ ಕಾಲ ಸುಖಪಡುವರು.

೧೧೯. ಲಕ್ಷ ಗೋವುಗಳಿಗೆ ಪ್ರತಿನಿಧಿಯಾಗಿ ಒಂದು ಹಾಲುಕರೆಯುವ, ಉಕ್ತಗುಣಸಂಪನ್ನವಾದ ಗೋವನ್ನು ದಾನಮಾಡಬೇಕು. ಅದು ದಾತನನ್ನು ಪುತ್ರ, ಪತ್ನೀ ಭೃತ್ಯರ ಸಹಿತವಾಗಿ ಉದ್ಧರಿಸುವುದು.

೧೨೦-೧೨೧. ಆದಕಾರಣ ಸಕಲದಾನಗಳಲ್ಲಿಯೂ ಗೋದಾನವು ಉತ್ತಮವು. ಅನುಭವಿಸಲಶಕ್ಯವು, ವಿಷಮವು, ಭಯಂಕರವೂ ಆದ ಮಹಾ

ನಿಮಿತ್ತೇಷು ಚ ಸರ್ವೇಷು ಹ್ಯಪ್ರಮತ್ತೋ ಭವೇದ್ದ್ವಿಜಃ ।
ಸ್ವಕಾರ್ಯೇ ಪಿತೃಕಾರ್ಯೇ ವಾ ದೇವತಾಭ್ಯರ್ಚನೇಪಿ ವಾ ॥ ೧೨೨ ॥

ವಿಫಲಂ ತಸ್ಯ ತತ್ತೀರ್ಥಂ ಯಾವತ್ತದ್ಧನಮಶ್ನುತೇ ।
ಗಂಗಾಯಮುನಯೋರ್ಮಧ್ಯೇ ಯಸ್ತು ಕನ್ಯಾಂ ಪ್ರಯಚ್ಛತಿ ॥ ೧೨೩ ॥

ನ ಸ ಪಶ್ಯತಿ ಘೋರಂ ತು ನರಕಂ ತೇನ ಕರ್ಮಣಾ ।
ಉತ್ತರಾಂಸ್ತು ಕುರೂನ್ ಗತ್ವಾ ಮೋದತೇ ಕಾಲಮಕ್ಷಯಂ ॥ ೧೨೪ ॥

ಪುತ್ರಾನ್ದಾರಾಂಶ್ಚ ಲಭತೇ ಧಾರ್ಮಿಕಾನ್ರೂಪಸಂಯುತಾನ್ ॥ ೧೨೫ ॥

ಶತಂ ವರ್ಷಸಹಸ್ರಾಣಾಂ ಸ್ವರ್ಗಲೋಕೇ ಮಹೀಯತೇ ।
ಪರಿಭ್ರಷ್ಟಸ್ತತಃ ಸ್ವರ್ಗಾದಗ್ನಿಹೋತ್ರೀ ಭವೇನ್ನರಃ ॥ ೧೨೬ ॥

---

ಪಾತಕವು ಸಂಭವಿಸಿದಾಗ ಗೋದಾನವೇ ರಕ್ಷಿಸುವುದು. ಆದುದರಿಂದ ದ್ವಿಜೋತ್ತಮನಿಗೆ ಗೋದಾನಮಾಡಬೇಕು. ತೀರ್ಥ ಮತ್ತು ಪುಣ್ಯದೇವಾಲಯಗಳಲ್ಲಿ ದಾನ ತೆಗೆದುಕೊಳ್ಳಬಾರದು.

೧೨೨-೧೨೩. ದ್ವಿಜನು ಎಂತಹ ಸನ್ನಿವೇಶವು ಒದಗಿದರೂ ಗರ್ವಪಡಬಾರದು. ತೀರ್ಥಗಳಲ್ಲಿ ದಾನತೆಗೆದುಕೊಂಡ ಹಣದಿಂದಮಾಡುವ ಸ್ವಕಾರ್ಯ, ಪಿತೃಕಾರ್ಯ, ದೇವಪೂಜೆ ಇವುಗಳೆಲ್ಲವೂ ನಿಷ್ಫಲವಾಗುವುದು.

೧೨೩-೧೨೪. ಗಂಗಾ ಯಮುನೆಗಳ ಮಧ್ಯದಲ್ಲಿ ಕನ್ಯಾದಾನಮಾಡುವವನು ಆ ದಾನದಿಂದ ಘೋರನರಕವನ್ನು ನೋಡದೆಯೇ ದಾಟುವನು. ಅವನು ಉತ್ತರ ಕುರುಕ್ಷೇತ್ರಕ್ಕೆ ಹೋಗಿ ಅಕ್ಷಯಕಾಲ ಸುಖಪಡುವನು.

೧೨೫. ಮತ್ತು ಅವನು ಧಾರ್ಮಿಕರು, ಸುರೂಪರೂ ಆದ ಮಕ್ಕಳು ಮತ್ತು ಹೆಂಡತಿಯರನ್ನು ಪಡೆಯುವನು.

೧೨೬. ಅಷ್ಟೇ ಅಲ್ಲ; ಸ್ವರ್ಗಲೋಕದಲ್ಲಿ ಒಂದು ಲಕ್ಷ ವರ್ಷಗಳಕಾಲ ಸತ್ಕರಿಸಲ್ಪಡುವನು. ಅನಂತರ ಸ್ವರ್ಗವನ್ನು ಬಿಟ್ಟು ಈ ಲೋಕದಲ್ಲಿ ಹುಟ್ಟಿ ಅಗ್ನಿಹೋತ್ರಿಯಾಗುವನು.

ಭುಕ್ತ್ವಾ ತು ವಿಪುಲಾನ್ ಭೋಗಾಂಸ್ತತ್ತೀರ್ಥಂ ಲಭತೇ ಪುನಃ ।
ಆಪ್ರಯಾಗಾತ್ಪ್ರತಿಷ್ಠಾನಾನ್ಮತ್ಸ್ಯರೋ ವಾಸುಕೇರ್ಹ್ರದಾತ್ ॥ ೧೨೭ ॥

ಕಂಬಲಾಶ್ವತರೌ ನಾಗೌ ನಾಗಾನಬಹುಮೂಲಕಾತ್ ।
ಏತತ್ಪ್ರಜಾಪತೇಃ ಕ್ಷೇತ್ರಂ ತ್ರಿಷು ಲೋಕೇಷು ವಿಶ್ರುತಂ ॥ ೧೨೮ ॥

ತತ್ರ ಸ್ನಾತ್ವಾ ದಿವಂ ಯಾಂತಿ ಯೇ ಮೃತಾಸ್ತೇಽಪುನರ್ಭವಾಃ ।
ನ ವೇದವಚನಾಚ್ಚೈವ ನ ಲೋಕವಚನಾದಪಿ ॥ ೧೨೯ ॥

ಮತಿರುತ್ಕ್ರಮಣೀಯಾ ಹಿ ಪ್ರಯಾಗಮರಣಂ ಪ್ರತಿ ।
ದಶತೀರ್ಥಸಹಸ್ರಾಣಿ ಷಷ್ಟಿಕೋಟ್ಯಸ್ತಥಾ ಪರಾಃ ॥ ೧೩೦ ॥

---

೧೨೭. ಆ ಮನುಷ್ಯನು ಇಲ್ಲಿ ಬಹುಭೋಗಗಳನ್ನನುಭವಿಸಿ ಪುನಃ ಆ ತೀರ್ಥಕ್ಕೇ ಬರುವನು. ಪ್ರಯಾಗ, ಪ್ರತಿಷ್ಠಾನ, ವಾಸುಕಿಹ್ರದ ಇವುಗಳಿರುವ ಪ್ರದೇಶವೆಲ್ಲವೂ ಪ್ರಜಾಪತಿಕ್ಷೇತ್ರವು.

೧೨೮-೧೨೯. ಕಂಬಲ, ಅಶ್ವತರರೆಂಬ ನಾಗಗಳಿರುವ ಯಮುನಾತೀರ ಇವೆಲ್ಲವೂ ಮೂರುಲೋಕಗಳಲ್ಲಿಯೂ ವಿಖ್ಯಾತವಾದ ಪ್ರಜಾಪತಿಕ್ಷೇತ್ರವು. ಅಲ್ಲಿ ಸ್ನಾನಮಾಡಿದವರು ಸ್ವರ್ಗಕ್ಕೆ ಹೋಗುವರು. ಅಲ್ಲಿಯೇ ಮೃತರಾದವರಿಗೆ ಪುನರ್ಜನ್ಮ ಬರುವುದಿಲ್ಲ.

೧೨೯-೧೩೦. ವೇದವಚನದಿಂದ ಅಥವಾ ಯಾವ ಮಹಾಪುರುಷನ ಹೇಳಿಕೆಯಿಂದಲಾದರೂ ಪ್ರಯಾಗ ಮರಣವಿಷಯದಲ್ಲಿ ಮನಸ್ಸನ್ನು ಬದಲಾಯಿಸಬಾರದು.

ಎಂದರೆ ಹೇಗಾದರೂ ಪ್ರಯಾಗಮರಣವನ್ನು ಪಡೆಯಬೇಕು. ಅದು ಬಹು ಪ್ರಶಸ್ತವಾದುದು. ಈ ವಿಷಯದಲ್ಲಿ ಯಾರು ಏನುಹೇಳಿದರೂ ನಂಬಬಾರದು ಎಂದು ಭಾವ.

೧೩೦-೧೩೧. ವಿಧಿನಂದನನೇ! ಹತ್ತುಸಾವಿರ ತೀರ್ಥಗಳು ಮತ್ತು ಅರವತ್ತು ಕೋಟಿ ಉತ್ತಮದೇವತೆಗಳೂ ಸಹ ಆ ಪ್ರಯಾಗದಲ್ಲಿಯೇ ಸನ್ನಿಹಿತರಾಗಿರುವರೆಂದು ಉಕ್ತವಾಗಿದೆ.

ತತ್ರೈವ ತೇಷಾಂ ಸಾನ್ನಿಧ್ಯಂ ಕೀರ್ತಿತಂ ವಿಧಿನಂದಿನಿ ।
ಯಾ ಗತಿರ್ಯೋಗಯುಕ್ತಸ್ಯ ಸತ್ಪಥಸ್ತಸ್ಯ ಧೀಮತಃ ॥ ೧೩೧ ॥

ಸಾ ಗತಿಸ್ತ್ಯಜತಃ ಪ್ರಾಣಾನ್ ಗಂಗಾಯಮುನಸಂಗಮೇ ।
ಋದ್ಧಿತೋ ಯದಿ ವಾ ದೀನಃ ಕ್ರುದ್ಧೋ ವಾಪಿ ಭವೇನ್ನರಃ ॥ ೧೩೨ ॥

ಗಂಗಾಯಮುನಮಾಸಾದ್ಯ ಯಸ್ತು ಪ್ರಾಣಾನ್ ಪರಿತ್ಯಜೇತ್ ।
ದೀಪ್ತಕಾಂಚನವರ್ಣಾಭೈರ್ವಿಮಾನೈಃ ಸೂರ್ಯಕಾಂತಿಭಿಃ ॥ ೧೩೩ ॥

ಗಂಧರ್ವಾಪ್ಸರಸಾಂ ಮಧ್ಯೇ ಸ್ವರ್ಗೇ ಮೋದತಿ ಮಾನವಃ ।
ಈಪ್ಸಿತಾಂಲ್ಲಭತೇ ಕಾಮಾನ್ವದಂತೀತಿ ಮುನೀಶ್ವರಾಃ ॥ ೧೩೪ ॥

ಗೀತವಾದಿತ್ರನಿರ್ಘೋಷೈಃ ಪ್ರಸುಪ್ತಃ ಪ್ರತಿಬುಧ್ಯತೇ ।
ಯಾವನ್ನ ಸ್ಮರತೇ ಜನ್ಮ ತಾವತ್ಸ್ವರ್ಗೇ ಮಹೀಯತೇ ॥ ೧೩೫ ॥

---

೧೩೧–೧೩೨. ಯೋಗಾಭ್ಯಾಸಮಾಡಿದವನು, ಸನ್ಮಾರ್ಗದಲ್ಲಿರುವವನೂ ಆದ ಜ್ಞಾನಿಗೆ ಲಭಿಸುವ ಸದ್ಗತಿಯು ಗಂಗಾ ಯಮುನೆಗಳ ಸಂಗಮದಲ್ಲಿ ಪ್ರಾಣ ಬಿಡುವವರಿಗೆ ಲಭಿಸುವುದು.

೧೩೨-೧೩೪. ಐಶ್ವರ್ಯವಂತ, ಬಡವ, ಕ್ರೋಧವುಳ್ಳವನು ಇವರಲ್ಲಿ ಯಾರೇ ಆಗಲಿ ಗಂಗಾ ಯಮುನೆಗಳ ಸಂಗಮಕ್ಕೆ ಹೋಗಿ ಪ್ರಾಣಬಿಟ್ಟರೆ ಆ ಮನುಷ್ಯನು ದೇದೀಪ್ಯಮಾನವಾದ ಬಂಗಾರದ ಬಣ್ಣದಂತೆ ವಿರಾಜಿಸುವ, ಸೂರ್ಯನಂತೆ ಹೊಳೆಯುತ್ತಿರುವ ವಿಮಾನಗಳಿಂದ ಸ್ವರ್ಗಲೋಕಕ್ಕೆ ಹೋಗಿ ಗಂಧರ್ವ ಮತ್ತು ಅಪ್ಸರಸ್ತ್ರೀಯರ ಮಧ್ಯದಲ್ಲಿ ಸಂತೋಷಿಸುವನು. ಅವನ ಮನೋಭೀಷ್ಟಗಳೆಲ್ಲವೂ ಸಿದ್ಧಿಸುವುವೆಂದು ಮುನೀಶ್ವರರು ಹೇಳುತ್ತಾರೆ.

೧೩೫. ಮಲಗಿದವನು ಗಾನವಾದ್ಯಗಳ ಧ್ವನಿಗಳಿಂದ ಎಚ್ಚರಗೊಳ್ಳುವನು. ಆವನು ಭೂಲೋಕದಲ್ಲಿ ಜನ್ಮವನ್ನು ಕೋರದಿರುವವರೆಗೂ ಸ್ವರ್ಗಲೋಕದಲ್ಲಿ ಸತ್ಕರಿಲಸ್ಪಡುವನು.

ತತಃ ಸ್ವರ್ಗಾತ್ಪರಿಭ್ರಷ್ಟಃ ಕ್ಷೀಣಕರ್ಮಾತ್ರ ಚಾಗತಃ ।
ಹಿರಣ್ಯರತ್ನಸಂಪೂರ್ಣೇ ಸಮೃದ್ಧೇ ಜಾಯತೇ ಕುಲೇ ॥ ೧೩೬ ॥

ತದೇವ ಸ್ಮರತಸ್ತತ್ರ ವಿಷ್ಣುಲೋಕಂ ಸ ಗಚ್ಛತಿ ।
ವಟಮೂಲಂ ಸಮಾಸಾದ್ಯ ಯಸ್ತು ಪ್ರಾಣಾನ್ ಪರಿತ್ಯಜೇತ್ ॥ ೧೩೭ ॥

ಸರ್ವಲೋಕಾನತಿಕ್ರಮ್ಯ ರುದ್ರಲೋಕಂ ಸ ಗಚ್ಛತಿ ।
ತತ್ರ ತೇ ದ್ವಾದಶಾದಿತ್ಯಾಸ್ತಪಂತೇ ರುದ್ರಮಾಶ್ರಿತಾಃ ॥ ೧೩೮ ॥

ನಿರ್ಗಚ್ಛಂತಿ ಜಗತ್ಸರ್ವಂ ವಟಮೂಲೇ ಸ ದಹ್ಯತೇ ।
ಹರಿಶ್ಚ ಭಗವಾಂಸ್ತತ್ರ ಪ್ರಜಾಪತಿಪುರಸ್ಕೃತಃ ॥ ೧೩೯ ॥

ಆಸ್ತೇ ತತ್ರ ವಟೇ ದೇವಿ ಪಾದಾಂಗುಷ್ಠಂ ಧಯಂಚ್ಛಿಶುಃ ।
ಉರ್ವಶೀಪುಲಿನೇ ರಮ್ಯೇ ವಿಪುಲೇ ಹಂಸಪಾಂಡುರೇ ॥ ೧೪೦ ॥

---

೧೩೬. ತನ್ನ ಪುಣ್ಯವು ಸವೆದನಂತರ ಸ್ವರ್ಗದಿಂದ ಹೊರಟು ಇಲ್ಲಿಗೆ ಬಂದು ಸುವರ್ಣರತ್ನಗಳಿಂದ ಪರಿಪೂರ್ಣವಾದ ವಂಶದಲ್ಲಿ ಹುಟ್ಟುವನು.

೧೩೭-೧೩೯. ಅಲ್ಲಿ ಆದನ್ನು ಸ್ಮರಿಸುವವನಾಗಿ ವಿಷ್ಣುಲೋಕಕ್ಕೆ ಹೋಗುವನು. ವಟಮೂಲಕ್ಕೆ ಹೋಗಿ ಪ್ರಾಣಗಳನ್ನು ಬಿಡುವವನು ಸಕಲಲೋಕಗಳನ್ನೂ ದಾಟಿಕೊಂಡು ರುದ್ರಲೋಕಕ್ಕೆ ಹೋಗುವನು. ಅಲ್ಲಿ ರುದ್ರನನ್ನಾಶ್ರಯಿಸಿರುವ ಆ ದ್ವಾದಶಾದಿತ್ಯರು ತಪಿಸುತ್ತಾ ಹೊರಡುತ್ತಿರುವರು. ಸಕಲಜಗತ್ತೂ ವಟಮೂಲದಲ್ಲಿ ದಹಿಸಲ್ಪಡುತ್ತದೆ.

೧೩೯-೧೪೦. ದೇವಿಯೇ! ಅಲ್ಲಿ ಭಗವಂತನಾದ ಹರಿಯು ಪ್ರಜಾಪತಿಪುರಸ್ಕೃತನಾಗಿ ಶಿಶುರೂಪವನ್ನು ಧರಿಸಿ ಕಾಲಿನ ಹೆಬ್ಬೆಟ್ಟನ್ನು ಬಾಯಲ್ಲಿಟ್ಟುಕೊಂಡು ಆ ವಟಪತ್ರದಲ್ಲಿ ಮಲಗಿರುವನು.

೧೪೦-೧೪೧ ಮನೋಹರವು, ವಿಶಾಲವು, ಹಂಸದಂತೆ ಪಾಂಡುರಬಣ್ಣವುಳ್ಳದೂ ಆದ ಊರ್ವಶೀ ಪುಲಿನದಲ್ಲಿ ಪ್ರಾಣಬಿಡುವವನಿಗೆ ಬರುವ ಫಲವನ್ನು ಹೇಳುವೆನು ಕೇಳು.

ಭುಕ್ತ್ವಾ ತು ವಿಪುಲಾನ್ ಭೋಗಾಂಸ್ತತ್ತೀರ್ಥಂ ಲಭತೇ ಪುನಃ ।
ಶುಕ್ಲಾಂಬರಧರೋ ನಿತ್ಯಂ ನಿಯತಃ ಸ ಜಿತೇಂದ್ರಿಯಃ ॥

ಏಕಕಾಲಂ ತು ಭುಂಜಾನೋ ಮಾಸಂ ಭೋಗಪತಿರ್ಭವೇತ್ ।
ಸುವರ್ಣಾಲಂಕೃತಾನಾಂ ತು ನಾರೀಣಾಂ ಲಭತೇ ಶತಂ ॥

ಪೃಥಿವ್ಯಾಮಾಸಮುದ್ರಾಯಾಂ ಮಹಾಭೋಗಪತಿರ್ಭವೇತ್ ।
ಧನಧಾನ್ಯಸಮಾಯುಕ್ತೋ ದಾತಾ ಭವತಿ ನಿತ್ಯಶಃ ॥

ಸ ಭುಕ್ತ್ವಾ ವಿಪುಲಾನ್ ಭೋಗಾಂಸ್ತತ್ತೀರ್ಥಂ ಸ್ಮರತೇ ಪುನಃ ।
ಕೋಟಿತೀರ್ಥಂ ಸಮಾಸಾದ್ಯ ಯಸ್ತು ಪ್ರಾಣಾನ್ ಪರಿತ್ಯಜೇತ್ ॥

ಕೋಟಿವರ್ಷಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ।
ತತಃ ಸ್ವರ್ಗಾದಿಹಾಗತ್ಯ ಕ್ಷೀಣಕರ್ಮಾ ನರೋತ್ತಮಃ ॥ ೧೫೦ ॥

ಸುವರ್ಣಮಣಿಮುಕ್ತಾಢ್ಯೇ ಕುಲೇ ಜಾಯೇತ ರೂಪವಾನ್ ।
ಅಕಾಮೋ ವಾ ಸಕಾಮೋ ವಾ ಗಂಗಾಯಾಂ ಯೋ ವಿಪದ್ಯತೇ ॥೧೫೧॥

---

೧೪೬-೧೪೭. ಅಲ್ಲಿ ಬಹುಭೋಗಗಳನ್ನನುಭವಿಸಿದಮೇಲೆ ಪುನಃ ಆ ತೀರ್ಥಕ್ಕೆ ಬರುವನು. ಅಲ್ಲಿ ಶುಕ್ಲವಸ್ತ್ರಧಾರಿಯು, ನಿಯಮಯುಕ್ತನು, ಜಿತೇಂದ್ರಿಯನೂ ಆಗಿ ಒಂದು ತಿಂಗಳು ಒಪ್ಪತ್ತೂಟಮಾಡುವವನಾಗಿ ಯೋಗ್ಯಪತಿಯಾಗುವನು. ಮುತ್ತು, ಬಂಗಾರದ ಆಭರಣಗಳಿಂದಲಂಕರಿಸಲ್ಪಟ್ಟ ನೂರು ಸ್ತ್ರೀಯರನ್ನು ಹೊಂದುವನು.

೧೪೮. ಸಮುದ್ರಾಂತವಾದ ಪೃಥಿವಿಯಲ್ಲಿ ಮಹಾಭೋಗಪತಿಯಾಗುವನು. ಧನಧಾನ್ಯಗಳಿಂದ ಕೂಡಿ ಯಾವಾಗಲೂ ದಾನಮಾಡುವವನಾಗುವನು.

೧೪೯-೧೫೧. ಆವನು ವಿಪುಲಭೋಗಗಳನ್ನನುಭವಿಸಿ ಪುನಃ ಆ ತೀರ್ಥವನ್ನು ಸ್ಮರಿಸುವನು. ಕೋಟಿತೀರ್ಥಕ್ಕೆ ಹೋಗಿ ಅಲ್ಲಿ ಪ್ರಾಣಬಿಡುವವನು ಕೋಟಿಸಾವಿರ ವರ್ಷಗಳವರೆಗೆ ಸ್ವರ್ಗಲೋಕದಲ್ಲಿ ಭೋಗಿಸುವನು. ಅವನ ಪುಣ್ಯವು ಸವೆದಬಳಿಕ ಆ ನರೋತ್ತಮನು ಸ್ವರ್ಗದಿಂದ ಇಲ್ಲಿಗೆಬಂದು ಸುವರ್ಣ, ಮಣಿ ಮುತ್ತು ಇವುಗಳಿಂದ ಪೂರ್ಣವಾದ ಕುಲದಲ್ಲಿ ಸುಂದರನಾಗಿ ಹುಟ್ಟುವನು.

ಶಕ್ರಸ್ಯ ಲಭತೇ ಸ್ವರ್ಗಂ ನರಕಂ ತು ನ ಪಶ್ಯತಿ ।
ಹಂಸಸಾರಸಯುಕ್ತೇನ ವಿಮಾನೇನ ಸ ಗಚ್ಛತಿ ॥ ೧೫೨ ॥

ಅಪ್ಸರೋಗಣಸಂಕೀರ್ಣೇ ಸುಪ್ತೋಽಸೌ ಪ್ರತಿಬುಧ್ಯತೇ ।
ತತಃ ಸ್ವರ್ಗಾದಿಹಾಯಾತಃ ಕ್ಷೀಣಕರ್ಮಾ ದ್ವಿಜೋತ್ತಮೇ ॥ ೧೫೩ ॥

ಯೋಗಿನಾಂ ಶ್ರೀಮತಾಂ ಚಾಪಿ ಸ್ವೇಚ್ಛಯಾ ಲಭತೇ ಜನಿಂ ।
ಗಂಗಾಯಮುನಯೋರ್ಮಧ್ಯೇ ಕರೀಷಾಗ್ನಿಂ ತು ಧಾರಯೇತ್ ॥ ೧೫೪ ॥

ಅಹೀನಾಂಗೋ ಹ್ಯರೋಗಶ್ಚ ಪಂಚೇಂದ್ರಿಯಸಮನ್ವಿತಃ ।
ಯಾವಂತಿ ಲೋಮಕೂಪಾನಿ ತಸ್ಯ ಗಾತ್ರೇ ತು ಧೀಮತಃ ॥ ೧೫೫ ॥

ತಾವದ್ವರ್ಷಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ।
ತತಃ ಸ್ವರ್ಗಾತ್ಪರಿಭ್ರಷ್ಟೋ ಜಂಬೂದ್ವೀಪಪತಿರ್ಭವೇತ್ ॥ ೧೫೬ ॥

---

೧೫೧-೧೫೨. ನಿಷ್ಕಾಮ ಅಥವಾ ಸಕಾಮನಾದರೂ ಗಂಗಾತೀರದಲ್ಲಿ ಮೃತನಾದವನು ಇಂದ್ರನ ಸ್ವರ್ಗಲೋಕವನ್ನೇ ಹೊಂದುವನು. ನರಕವನ್ನು ನೋಡುವುದೇ ಇಲ್ಲ. ಅವನು ಹಂಸಸಾರಸಗಳಿಂದ ಕೂಡಿದ ವಿಮಾನದಲ್ಲಿ ಪ್ರಯಾಣಮಾಡುವನು.

೧೫೩-೧೫೪. ಅವನು ಸುಪ್ತನಾಗಿ ಅಪ್ಸರಸ್ತ್ರೀಯರ ಸಮೂಹದಿಂದ ತುಂಬಿದೆಡೆಯಲ್ಲಿ ಎಚ್ಚರಗೊಳ್ಳುವನು. ಅವನ ಪುಣ್ಯವು ಕ್ಷಯಿಸಿದನಂತರ ಸ್ವರ್ಗದಿಂದ ಇಲ್ಲಿಗೆ ಬಂದು ತನ್ನ ಇಚ್ಛಾನುಸಾರವಾಗಿ ಶ್ರೀಮಂತರಾದ ಯೋಗಿಗಳ ಕುಲದಲ್ಲಿ ಹುಟ್ಟುವನು.

೧೫೪-೧೫೬. ಗಂಗಾ ಯಮುನೆಗಳ ಮಧ್ಯದಲ್ಲಿ ಬೆರಣಿಯ ಅಗ್ನಿಯನ್ನು ಧರಿಸಬೇಕು. ಅವನು ಅಂಗಹೀನನಾಗದೆಯೂ, ರೋಗವಿಲ್ಲದೆಯೂ, ಪಂಚೇಂದ್ರಿಯಗಳಿಂದ ಯುಕ್ತನೂ ಆಗಿ ತನ್ನ ಶರೀರದಲ್ಲಿರುವ ರೋಮಕೂಪಗಳಷ್ಟು ಸಾವಿರ ವರ್ಷಗಳು ಸ್ವರ್ಗಲೋಕದಲ್ಲಿ ಸತ್ಕರಿಸಲ್ಪಡುವನು.

ಅನಂತರ ಸ್ವರ್ಗವನ್ನು ಬಿಟ್ಟು ಭೂಲೋಕದಲ್ಲಿ ಹುಟ್ಟಿ ಜಂಬೂದ್ವೀಪಾಧಿಪತಿಯಾಗುವನು. ಆಗ ವಿಪುಲಭೋಗಗಳನ್ನು ಅನುಭವಿಸಿ ಪುನಃ ಆ ತೀರ್ಥವನ್ನು ಹೊಂದುವನು.

ಭುಕ್ತ್ವಾ ತು ವಿಪುಲಾನ್ ಭೋಗಾಂಸ್ತತ್ತೀರ್ಥಂ ಲಭತೇ ಪುನಃ ।
ಯಸ್ತು ದೇಹಂ ನಿಕೃತ್ಯ ಸ್ವಂ ಶಕುನಿಭ್ಯಃ ಪ್ರಯಚ್ಛತಿ ॥ ೧೫೭ ॥

ಸ ವರ್ಷಶತಸಾಹಸ್ರಂ ಸೋಮಲೋಕೇ ಮಹೀಯತೇ ।
ತತಸ್ತಸ್ಮಾದಿಹಾಗತ್ಯ ರಾಜಾ ಭವತಿ ಧಾರ್ಮಿಕಃ ॥ ೧೫೮ ॥

ಗುಣವಾನ್ರೂಪಸಂಪನ್ನೋ ವಿದ್ಯಾವಾನ್ ಪ್ರಿಯವಾಕ್ಛುಚಿಃ ।
ಭುಕ್ತ್ವಾ ತು ವಿಪುಲಾನ್ ಭೋಗಾಂಸ್ತತ್ತೀರ್ಥಂ ಪುನರಾವ್ರಜೇತ್ ॥೧೫೯॥

ಪಂಚಯೋಜನವಿಸ್ತೀರ್ಣೇ ಪ್ರಯಾಗಸ್ಯ ತು ಮಂಡಲೇ ।
ವಿಪನ್ನೋ ಯತ್ರ ಕುತ್ರಾಪ್ಯನಾಶಕಂ ವ್ರತಮಾಸ್ಥಿತಃ ॥ ೧೬೦ ॥

ವ್ಯತೀತಾನ್ ಪುರುಷಾನ್ ಸಪ್ತ ಭಾವಿನಸ್ತು ಚತುರ್ದಶ ।
ನರಸ್ತಾರಯತೇ ಸರ್ವಾನಾತ್ಮಾನಂ ಚ ಸಮುದ್ಧರೇತ್ ॥ ೧೬೧ ॥

---

೧೫೭-೧೫೯. ತನ್ನ ದೇಹವನ್ನು ಕತ್ತರಿಸಿ ಪಕ್ಷಿಗಳಿಗೆ ಕೊಡುವವನು ಒಂದು ಲಕ್ಷವರ್ಷಕಾಲ ಚಂದ್ರಲೋಕದಲ್ಲಿ ಭೋಗಿಸುವನು.

ಬಳಿಕ ಅಲ್ಲಿಂದ ಪುನಃ ಇಲ್ಲಿಗೆ ಬಂದು, ಧಾರ್ಮಿಕನು, ಗುಣವಂತನು, ರೂಪಸಂಪನ್ನನು ವಿದ್ಯಾವಂತನು, ಹಿತವಾದ ಮಾತನಾಡುವವನು, ಪರಿಶುದ್ಧನೂ ಆದ ರಾಜನಾಗುವನು. ಆಗಲೂ ವಿಪುಲಭೋಗಗಳನ್ನನುಭವಿಸಿ ಆ ತೀರ್ಥಕ್ಕೆ ಪುನಃ ಬರುವನು.

೧೬೦-೧೬೧. ಐದುಗಾವುದ ವಿಶಾಲವಾದ ಪ್ರಯಾಗಮಂಡಲದ ಸರಹದ್ದಿನಲ್ಲಿ ಅನಶನವ್ರತವನ್ನು ಕೈಗೊಂಡು ಎಲ್ಲಿ ಮೃತನಾದರೂ ಅವನು ತನ್ನ ವಂಶದಲ್ಲಿ ಹಿಂದಿನ ಏಳು ತಲೆಗಳನ್ನೂ, ಮುಂದಿನ ಹದಿನಾಲ್ಕು ತಲೆಗಳನ್ನೂ ಉದ್ಧರಿಸಿ ತನ್ನನ್ನೂ ಉದ್ಧರಿಸಿಕೊಳ್ಳುವನು.

ಅಗ್ನಿತೀರ್ಥಮಿತಿ ಖ್ಯಾತಂ ದಕ್ಷಿಣೇ ಯಮುನಾತಟೇ ।
ಪಶ್ಚಿಮೇ ಧರ್ಮರಾಜಸ್ಯ ತೀರ್ಥಂ ತು ನರಕಂ ಸ್ಮೃತಂ ॥ ೧೬೨ ॥

ತತ್ರ ಸ್ನಾತ್ವಾ ದಿವಂ ಯಾಂತಿ ಯೇ ಮೃತಾಸ್ತೇಽಪುನರ್ಭವಾಃ ।
ಯಮುನೋತ್ತರಕೂಲೇ ತು ಪಾಪಘ್ನಾನಿ ಬಹೂನ್ಯಪಿ ॥ ೧೬೩ ॥

ತೀರ್ಥಾನಿ ಸಂತಿ ವಿಧಿಜೇ ಸೇವಿತಾನಿ ಮುನೀಶ್ವರೈಃ ।
ತೇಷು ಸ್ನಾತ್ವಾ ದಿವಂ ಯಾಂತಿ ಯೇ ಮೃತಾಸ್ತೇಽಪುನರ್ಭವಾಃ ॥ ೧೬೪ ॥

ಗಂಗಾ ಚ ಯಮುನಾ ಚೈವ ಉಭೇ ತುಲ್ಯಫಲೇ ಸ್ಮೃತೇ ।
ಕೇವಲಂ ಜ್ಯೇಷ್ಠಭಾವೇನ ಗಂಗಾ ಸರ್ವತ್ರ ಪೂಜ್ಯತೇ ॥ ೧೬೫ ॥

ಯಸ್ತು ಸರ್ವಾಣಿ ರತ್ನಾನಿ ಬ್ರಾಹ್ಮಣೇಭ್ಯಃ ಪ್ರಯಚ್ಛತಿ ।
ತೇನ ದತ್ತೇನ ದೇವೇಶಿ ಯೋಗೋ ಲಭ್ಯೇತ ವಾ ನ ವಾ ॥ ೧೬೬ ॥

---

೧೬೨. ಯಮುನಾನದಿಯ ದಕ್ಷಿಣತೀರದಲ್ಲಿ ಅಗ್ನಿತೀರ್ಥವೆಂದು ವಿಖ್ಯಾತವಾದ ತೀರ್ಥವೂ, ಪಶ್ಚಿಮತೀರದಲ್ಲಿ ಧರ್ಮರಾಜತೀರ್ಥವೆಂದು ಪ್ರಸಿದ್ಧವಾದ ತೀರ್ಥವೂ ಇವೆ.

೧೬೩-೧೬೪. ಬ್ರಹ್ಮಜಾತೇ! ಅಲ್ಲಿ ಸ್ನಾನಮಾಡಿದ ಮನುಷ್ಯರು ಸ್ವರ್ಗಕ್ಕೆ ಹೋಗುವರು. ಅವರಿಗೆ ಪುನರ್ಜನ್ಮವಿಲ್ಲ. ಯಮುನಾನದಿಯ ಉತ್ತರತೀರದಲ್ಲಿ ಪಾಪನಾಶಕವು, ಮುನೀಶ್ವರರಿಂದ ಸೇವಿಸಲ್ಪಟ್ಟಿರುವುದೂ ಆದ ಬಹುತೀರ್ಥಗಳಿವೆ. ಅಲ್ಲಿ ಸ್ನಾನಮಾಡಿದವರು ದೇವಲೋಕಕ್ಕೆ ಹೋಗುವರು. ಅಲ್ಲಿಯೇ ಸತ್ತವರು ಪುನರ್ಜನ್ಮ ಹೊಂದುವುದಿಲ್ಲ.

೧೬೫. ಗಂಗೆ ಯಮುನೆ ಇವೆರಡೂ ಸಮಾನವಾದ ಫಲ ಕೊಡತಕ್ಕವುಗಳೆಂದು ಉಕ್ತವಾಗಿವೆ. ಆದರೆ ಗಂಗೆಯು ಯಮುನೆಗಿಂತಲೂ ಹಿರಿಯಳಾದ ಕಾರಣ ಎಲ್ಲಾ ಕಡೆಯಲ್ಲಿಯೂ ಅಧಿಕಪೂಜೆಗೆ ಪಾತ್ರಳಾಗಿರುವಳು.

೧೬೬. 'ದೇವೇಶೀ! ಬ್ರಾಹ್ಮಣರಿಗೆ ಸಕಲರತ್ನಗಳನ್ನು ದಾನಮಾಡು

ಪ್ರಯಾಗೇ ತು । ಮೃತಸ್ಯೇದಂ ಸರ್ವಂ ಭವತಿ ನಾನ್ಯಥಾ [illegible]
ದೇಶಸ್ಥೋ ಯದಿ ವಾರಣ್ಯೇ ವಿದೇಶೇ ಯದಿ ವಾ ಗೃಹೇ [illegible] ॥ ೧೬೭ ॥

ಪ್ರಯಾಗಂ ಸ್ಮರಮಾಣೋಽಪಿ ಯಸ್ತು ಪ್ರಾಣಾನ್ ಪರಿತ್ಯಜೇತ್ [illegible]
ಬ್ರಹ್ಮಲೋಕಮವಾಪ್ನೋತಿ [illegible] ॥ ೧೬೮ ॥

ಸರ್ವಕಾಮಫಲಾ ವೃಕ್ಷಾಸ್ತಿಷ್ಠಂತಿ ಋಷಯೋ ಗತಾಃ ।
ಸ್ತ್ರೀಸಹಸ್ರಾಕುಲೇ ರಮ್ಯೇ ಮಂದಾಕಿನ್ಯಾಸ್ತಟೇ ಶುಭೇ ॥ ೧೬೯ ॥

ಕ್ರೀಡ್ಯತೇ ಸಿದ್ಧಗಂಧರ್ವೈಃ ಪೂಜ್ಯತೇ ತ್ರಿದಶೈಸ್ತಥಾ
ತತಃ ಪುನರಿಹಾಯಾತೋ ಜಂಬೂದ್ವೀಪಪತಿರ್ಭವೇತ್ ॥ ೧೭೦ ॥

---

ವನಿಗಳು [illegible] ದಾನದಿಂದ [illegible] ಯಾಗುವುದೋ [illegible] ಇಲ್ಲವೋ ?
ತಿಳಿಯದು.

೧೬೭-೧೬೮. ಪ್ರಯಾಗದಲ್ಲಿ ಮೃತನಾದವನಿಗಾದರೋ ಇವೆಲ್ಲವೂ ಸಿದ್ಧಿಸುವುದು. ಇಷ್ಟು ಫಲವು ಇನ್ನಾವುದರಿಂದಲೂ ಬರುವುದಿಲ್ಲ. ದೇಶ, ಅರಣ್ಯ ವಿದೇಶ, ಸ್ವಗೃಹ ಇವುಗಳಲ್ಲಿ ಎಲ್ಲಿಯಾದರೂ ಪ್ರಯಾಗವನ್ನು ಸ್ಮರಿಸುತ್ತಾ ಪ್ರಾಣವನ್ನು ಬಿಡುವವನು ಸುವರ್ಣಮಯವಾದ ಭೂಮಿ, ಸಕಲೇಷ್ಟಪ್ರದ ವೃಕ್ಷಗಳು, ಋಷಿಗಳು ಇವರುಗಳಿರುವ ಬ್ರಹ್ಮಲೋಕವನ್ನು ಹೊಂದುವನು.

೧೬೯-೧೭೦. ಅವನು ಸಾವಿರಾರು ಸ್ತ್ರೀಯರಿಂದ ಕೂಡಿ ಶುಭವಾದ, ಮನೋಹರ ಮಂದಾಕಿನಿಯ ತೀರದಲ್ಲಿ ಸಿದ್ಧರು, ಗಂಧರ್ವರು, ದೇವತೆಗಳು ಇವರಿಂದ ಪೂಜಿಸಲ್ಪಡುವನು.

೧೭೦-೧೭೧. ತರುವಾಯ ಪುನಃ ಇಲ್ಲಿಗೆ ಬಂದು ಜಂಬೂದ್ವೀಪಪತಿಯಾಗುವನು. ಅವನು ಧರ್ಮಿಷ್ಠನೂ, ಗುಣಶಾಲಿಯೂ ಆಗಿ ಪುನಃ ಆ ತೀರ್ಥವನ್ನು ಹೊಂದುವನು.

ಧರ್ಮಾತ್ಮಾ ಗುಣಸಂಪನ್ನಸ್ತತ್ತೀರ್ಥಂ ಲಭತೇ ಪುನಃ ।
ಏತತ್ತೇ ಸರ್ವಮಾಖ್ಯಾತಂ ಮಾಹಾತ್ಮ್ಯಂ ಚ ಪ್ರಯಾಗಜಂ ॥ ೧೭೧ ॥

ಸುಖದಂ ಮೋಕ್ಷದಂ ಸಾರಂ ಕಿಮನ್ಯಚ್ಛ್ರೋತುಮಿಚ್ಛಸಿ ॥ ೧೭೨ ॥

ಇತಿ ಶ್ರೀನಾರದೀಯಮಹಾಪುರಾಣೋತ್ತರಭಾಗೇ ವಸುಮೋಹಿನೀ
ಸಂವಾದೇ ಪ್ರಯಾಗಮಾಹಾತ್ಮ್ಯೇ ತ್ರಿಷಷ್ಟಿತಮೋಽಧ್ಯಾಯಃ
ಇತಿ ಪ್ರಯಾಗಮಾಹಾತ್ಮ್ಯಂ ಸಮಾಪ್ತಂ

---

೧೭೧-೧೭೨. ಮೋಹಿನೀ! ಸುಖಪ್ರದವು, ಮೋಕ್ಷದಾಯಕವು, ಉತ್ತಮವೂ ಆಗಿರುವ ಪ್ರಯಾಗ, ಅದರಲ್ಲಿ ಅಡಗಿರುವ ತೀರ್ಥಾದಿಗಳು ಇವುಗಳ ಮಾಹಾತ್ಮ್ಯೆಯನ್ನೆಲ್ಲಾ ನಿನಗೆ ಹೇಳಿರುವೆನು. ಇನ್ನೇನನ್ನು ಕೇಳಲು ಬಯಸುವೆ?

ಇಂತು ಶ್ರೀನಾರದೀಯ ಪುರಾಣೋತ್ತರಭಾಗದಲ್ಲಿ ವಸು ಮೋಹಿನೀ
ಸಂವಾದದಲ್ಲಿ ಪ್ರಯಾಗಮಾಹಾತ್ಮ್ಯೆಯಲ್ಲಿ
ಅರವತ್ತುಮೂರನೆಯ ಅಧ್ಯಾಯವು
ಮುಗಿದುದು.

# ಚತುಷ್ಷಷ್ಟಿತಮೋಽಧ್ಯಾಯಃ

---

## ಕುರುಕ್ಷೇತ್ರಮಾಹಾತ್ಮ್ಯಂ ಪ್ರಾರಭ್ಯತೇ

### ಮೋಹಿನ್ಯುವಾಚ

ವಸೋ ಕೃಪಾಲೋ ಧರ್ಮಜ್ಞ ತ್ವಯಾ ಬಹುವಿದಾ ಮಮ ।
ತೀರ್ಥರಾಜಸ್ಯ ಮಾಹಾತ್ಮ್ಯಂ ಪ್ರಯಾಗಸ್ಯ ನಿರೂಪಿತಂ ॥ ೧ ॥

ಯತ್ಸರ್ವತೀರ್ಥಮುಖ್ಯೇಷು ಕುರುಕ್ಷೇತ್ರಂ ಶುಭಾವಹಂ ।
ಪಾವನಂ ಸರ್ವಲೋಕಾನಾಂ ತನ್ಮಮಾಚಕ್ಷ್ವ ಸಾಂಪ್ರತಂ ॥ ೨ ॥

### ವಸುರುವಾಚ

ಶೃಣು ಮೋಹಿನಿ ವಕ್ಷ್ಯಾಮಿ ಕುರುಕ್ಷೇತ್ರಂ ಸುಪುಣ್ಯದಂ ।
ಯತ್ರ ಗತ್ವಾ ನರಃ ಸ್ನಾತ್ವಾ ಸರ್ವಪಾಪೈಃ ಪ್ರಮುಚ್ಯತೇ ॥ ೩ ॥

---

## ಅರವತ್ತುನಾಲ್ಕನೆಯ ಅಧ್ಯಾಯ

೧. ಮೋಹಿನಿಯು ಹೇಳಿದಳು :—ಧರ್ಮಜ್ಞನು, ಕೃಪಾಳುವೂ ಆದ ವಸುವೇ ! ಬಹುಜ್ಞನಾದ ನೀನು ನನಗೆ ತೀರ್ಥೋತ್ತಮವಾದ ಪ್ರಯಾಗದ ಮಾಹಾತ್ಮ್ಯೆಯನ್ನು ನಿರೂಪಿಸಿರುವೆ.

೨. ಈಗ ಮುಖ್ಯವಾದ ಸಕಲತೀರ್ಥಗಳಲ್ಲಿಯೂ ಮಂಗಳಕರವು ಸಮಸ್ತಲೋಕಗಳನ್ನೂ ಪವಿತ್ರಮಾಡುವುದೂ ಆಗಿರುವ ಕುರುಕ್ಷೇತ್ರಮಾಹಾತ್ಮ್ಯೆಯನ್ನು ನನಗೆ ಹೇಳು.

೩. ವಸುವು ಹೇಳಿದನು :—ಮೋಹಿನೀ ! ಸ್ನಾನಮಾಡುವುದರಿಂದಲೇ ಮನುಷ್ಯನು ಸಕಲಪಾಪಗಳನ್ನೂ ಪರಿಹರಿಸುವಂತಹ, ಬಹುಪುಣ್ಯದಾಯಕವಾದ ಕುರುಕ್ಷೇತ್ರದ ಮಹಿಮೆಯನ್ನು ನಿನಗೆ ಹೇಳುವೆನು ಕೇಳು.

ತತ್ರ ತೀರ್ಥಾನ್ಯನೇಕಾನಿ ಸೇವಿತಾನಿ ಮುನೀಶ್ವರೈಃ ।
ತಾನ್ಯಹಂ ತೇಭಿಧಾಸ್ಯಾಮಿ ಶೃಣ್ವತ್ಯಾಂ ಮುಕ್ತಿದಾನಿ ಚ ॥ ೪ ॥

ಬ್ರಹ್ಮಜ್ಞಾನಂ ಗಯಾಶ್ರಾದ್ಧಂ ಗೋಗ್ರಹೇ ಮರಣಂ ತಥಾ ।
ವಾಸಃ ಪುಂಸಾಂ ಕುರುಕ್ಷೇತ್ರೇ ಮುಕ್ತಿರುಕ್ತಾ ಚತುರ್ವಿಧಾ ॥ ೫ ॥

ಸರಸ್ವತೀದೃಷದ್ವತ್ಯೋರ್ದೇವನದ್ಯೋರ್ಯದಂತರಂ ।
ತಂ ದೇವಸೇವಿತಂ ದೇಶಂ ಬ್ರಹ್ಮಾವರ್ತಂ ಪ್ರಚಕ್ಷತೇ ॥ ೬ ॥

ದೂರಸ್ಥೋಽಪಿ ಕುರುಕ್ಷೇತ್ರೇ ಗಚ್ಛಾಮಿ ಚ ವಸಾಮ್ಯಹಂ ।
ಏವಂ ಯಃ ಸತತಂ ಬ್ರೂಯಾತ್ ಸೋಽಪಿ ಪಾಪೈಃ ಪ್ರಮುಚ್ಯತೇ ॥ ೭ ॥

೪. ಆ ಕುರುಕ್ಷೇತ್ರದಲ್ಲಿ ಮುನೀಶ್ವರರು ಸೇವಿಸಿದ ಅನೇಕತೀರ್ಥಗಳಿವೆ. ಮೋಹಿನೀ! ಅವುಗಳನ್ನೆಲ್ಲ ನಿನಗೆ ತಿಳಿಸುತ್ತೇನೆ. ಅವುಗಳನ್ನು ಶ್ರವಣ ಮಾಡಿದವರಿಗೂ ಈ ತೀರ್ಥಗಳು ಮುಕ್ತಿದಾಯಕಗಳಾಗುವುವು.

೫. ಪುರುಷರ ಮುಕ್ತಿಯು ಬ್ರಹ್ಮಜ್ಞಾನ, ಗಯಾಶ್ರಾದ್ಧ, ಗೋಗ್ರಹದಲ್ಲಿ ಮರಣ, ಕುರುಕ್ಷೇತ್ರದಲ್ಲಿ ವಾಸ ಎಂಬುದಾಗಿ ನಾಲ್ಕುವಿಧವಾಗಿದೆಯೆಂದುಕ್ತವಾಗಿದೆ. ಎಂದರೆ ಈ ನಾಲ್ಕೂ ಮುಕ್ತಿಸಾಧನವು. ಅದರಲ್ಲಿ ಮೊದಲನೆಯದು ಸಾಕ್ಷಾತ್ತಾಗಿಯೂ ಉಳಿದುವು ಪರಂಪರೆಯಾಗಿಯೂ ಸಾಧನಗಳೆಂದು ಭಾವ.

೬. ಸರಸ್ವತೀ, ದೃಷದ್ವತೀ ಎಂಬ ದೇವನದಿಗಳ ಮಧ್ಯಭಾಗದಲ್ಲಿರುವ, ದೇವತೆಗಳಿಂದ ಸೇವಿಸಲ್ಪಟ್ಟ ದೇಶವನ್ನು ಬ್ರಹ್ಮಾವರ್ತವೆನ್ನುವರು.

೭. ದೂರದಲ್ಲಿದ್ದರೂ ಸಹ ಕುರುಕ್ಷೇತ್ರಕ್ಕೆ ಹೋಗುವೆನು ಅಲ್ಲಿಯೇ ವಾಸಿಸುವೆನು ಎಂಬುದಾಗಿ ಯಾವಾಗಲೂ ನೆನೆಸುತ್ತಿರುವವನೂ ಮಹಾಪಾಪಗಳಿಂದ ಮುಕ್ತನಾಗುವನು.

ತತ್ರ ವ್ಯೆಯೋ ವಸೇದ್ಧೀರಃ ಸರಸ್ವತ್ಯಾಸ್ತಟೇ ಸ್ಥಿರಃ ।
ತಸ್ಯ ಜ್ಞಾನಂ ಬ್ರಹ್ಮಮಯಂ ಭವಿಷ್ಯತಿ ನ ಸಂಶಯಃ ॥

ದೇವತಾ ಋಷಯಃ ಸಿದ್ಧಾಃ ಸೇವಂತೇ ಕುರುಜಾಂಗಲಂ ।
ತಸ್ಯ ಸಂಸೇವನಾದ್ದೇವಿ ಬ್ರಹ್ಮ ಚಾತ್ಮನಿ ಪಶ್ಯತಿ ॥

ಮೋಹಿನ್ಯುವಾಚ

ಕುರುಕ್ಷೇತ್ರಂ ದ್ವಿಜಶ್ರೇಷ್ಠ ಸರ್ವತೀರ್ಥಾಧಿಕಂ ಕಥಂ ।
ತನ್ಮೇ ವಿಸ್ತರತೋ ಬ್ರೂಹಿ ತ್ವಾಮಹಂ ಶರಣಂ ಗತಾ ॥ ೧೦ ॥

ವಸುರುವಾಚ

ಶೃಣು ಭದ್ರೇ ಪ್ರವಕ್ಷ್ಯಾಮಿ ಕುರುಕ್ಷೇತ್ರಂ ಮಹಾಫಲಂ ।
ಯಥಾ ಜಾತಂ ನೃಣಾಂ ಪಾಪದಹನಂ ಬ್ರಹ್ಮಣಃ ಪ್ರಿಯಂ ॥ ೧೧ ॥

---

೮. ಆ ಸರಸ್ವತೀನದಿಯ ತೀರದಲ್ಲಿ ಸ್ಥಿರವಾಗಿ ವಾಸಮಾಡುವ ಧೀರರಿಗೆ ಬ್ರಹ್ಮಜ್ಞಾನವಾಗುವುದು, ಸಂದೇಹವಿಲ್ಲ.

೯. ದೇವೀ! ದೇವತೆಗಳು, ಋಷಿಗಳು, ಸಿದ್ಧರೂ ಸಹಾ ಕುರುಜಾಂಗಲವನ್ನು ಸೇವಿಸುವರು. ಅದರ ಸೇವನೆಯಿಂದ ತನ್ನ ಹೃದಯದಲ್ಲಿ ಬ್ರಹ್ಮನನ್ನು ಸಾಕ್ಷಾತ್ಕರಿಸಿಕೊಳ್ಳುವರು.

೧೦. ಮೋಹಿನಿಯು ಹೇಳಿದಳು:—ದ್ವಿಜಶ್ರೇಷ್ಠ! ನಾನು ನಿನಗೆ ಶರಣಾಗತಳಾಗಿರುವೆನು. ಕುರುಕ್ಷೇತ್ರವು ಸಕಲತೀರ್ಥಕ್ಕಿಂತಲೂ ಅಧಿಕವಾದ ಬಗೆ ಹೇಗೆ? ಅದನ್ನು ನನಗೆ ವಿಸ್ತಾರವಾಗಿ ಹೇಳು.

೧೧. ವಸುವು ಹೇಳಿದನು:—ಭದ್ರೇ! ಕುರುಕ್ಷೇತ್ರವು ಮನುಷ್ಯರ ಪಾಪಗಳನ್ನು ಸುಡುವುದು ಮತ್ತು ಬ್ರಹ್ಮಗೆ ಪ್ರಿಯವಾದುದು. ಅಂಥ ಮಹಾಫಲಪ್ರದವಾದುದು ಬಗೆಯನ್ನು ಹೇಳುವೆನು ಕೇಳು.

ಆದ್ಯಂ ಬ್ರಹ್ಮಸರಃ ಪುಣ್ಯಂ ತತ್ರ ಸ್ಥಾನೇ ಸಮುದ್ಗತಂ ।
ತತೋ ರಾಮಹ್ರದೋ ಜಾತಃ ಕುರುಕ್ಷೇತ್ರಂ ತತಃ ಪರಂ ॥ ೧೨ ॥

ಸರಃ ಸಂನಿಹಿತಂ ತಚ್ಚ ಬ್ರಹ್ಮಣಾ ನಿರ್ಮಿತಂ ಪುರಾ ।
ಅರ್ಧ್ಯೈಷಾ ಬ್ರಹ್ಮಣೋ ವೇದೀ ದಿಶಮಂತರತಃ ಸ್ಥಿತಾ ॥ ೧೩ ॥

ಬ್ರಹ್ಮಣಾತ್ರ ತಪಸ್ತಪ್ತಂ ಸೃಷ್ಟಿಕಾಮೇನ ಮೋಹಿನಿ ।
ಸ್ಥಿತಿಕಾಮೇನ ಹರಿಣಾ ತಪಸ್ತಪ್ತಂ ಚ ಚಕ್ರಿಣಾ ॥ ೧೪ ॥

ಸರಃ ಪ್ರವೇಶಾತ್ಸಂಪ್ರಾಪ್ತಂ ಸ್ಥಾಣುತ್ವಂ ಶಂಭುನಾಪಿ ಚ ।
ಪಿತುರ್ವಧಾಚ್ಚ ತಪ್ತೇನ ಪರಶುರಾಮೇಣ ಭಾಮಿನಿ ॥ ೧೫ ॥

---

೧೨. ಆ ಸ್ಥಳದಲ್ಲಿ ಪುಣ್ಯಕರವಾದ ಬ್ರಹ್ಮಸರೋವರವು ಮೊದಲನೆಯುದಾಗಿ ವ್ಯಕ್ತವಾಯಿತು. ಆನಂತರ ರಾಮಹ್ರದವು ಹುಟ್ಟಿತು. ಅದಾದ ತರುವಾಯ ಉತ್ತಮವಾದ ಕುರುಕ್ಷೇತ್ರವೂ ಹುಟ್ಟಿತು.

೧೩. ಪೂರ್ವದಲ್ಲಿ ಬ್ರಹ್ಮನಿಂದ ನಿರ್ಮಿತವಾದ ಸರಸ್ಸು ಅಲ್ಲಿ ಸನ್ನಿಹಿತವಾಗಿದೆ. ಅದರ ಮಧ್ಯದೇಶವು ಬ್ರಹ್ಮನ ವೇದಿಕೆಯು.

೧೪. ಮೋಹಿನೀ! ಬ್ರಹ್ಮನು ಸೃಷ್ಟಿಯನ್ನು ಮಾಡಬೇಕೆಂಬ ಬಯಕೆಯಿಂದ ಅಲ್ಲಿ ತಪಸ್ಸು ಮಾಡಿರುವನು. ಜಗತ್ತನ್ನು ರಕ್ಷಿಸುವ ಅಪೇಕ್ಷೆಯಿಂದ ಹರಿಯೂ ತಪಸ್ಸು ಮಾಡಿರುವನು.

೧೫-೧೬. ಆ ಸರೋವರದಲ್ಲಿ ಪ್ರವೇಶಮಾಡಿದ ಮಾತ್ರದಿಂದ ಶಂಭುವು ಸ್ಥಾಣುಭಾವವನ್ನು ಹೊಂದಿದನು. ಎಂದರೆ ಸಂಹಾರಶಕ್ತಿಯನ್ನು ಹೊಂದಿದನೆಂದು ಭಾವ. ಭಾಮಿನೀ! ತನ್ನ ತಂದೆಯಾದ ಜಮದಗ್ನಿಮುನಿಯನ್ನು ಕ್ಷತ್ರಿಯರು ಸಂಹಾರಮಾಡಿದ್ದರಿಂದ ದುಃಖಿತನಾದ ಪರಶುರಾಮನು ಬ್ರಾಹ್ಮಣದ್ವೇಷಿಗಳಾದ ಆ ಕ್ಷತ್ರಿಯರನ್ನು ಸಂಹರಿಸಿ ಆ ರಕ್ತದಿಂದ ಹ್ರದ(ಮಡುವು) ಗಳನ್ನು

ಅಬ್ರಹ್ಮಣ್ಯಕ್ಷತ್ರವಧಾದ್ಯೇ ಚ ರಕ್ತಹ್ರದಾಃ ಕೃತಾಃ ।
ತದ್ರಕ್ತೇನ ತು ಸಂತರ್ಪ್ಯ ಕೃತವಾಂಸ್ತತ್ರ ವೈ ತಪಃ ॥ ೧೬ ॥

ರಾಮತೀರ್ಥಂ ತತಃ ಖ್ಯಾತಂ ಸಂಜಾತಂ ಪಾಪನಾಶನಂ ।
ಮಾರ್ಕಂಡೇಯೇನ ಮುನಿನಾ ಸಂತಪ್ತಂ ಪರಮಂ ತಪಃ ॥ ೧೭ ॥

ಯತ್ರ ತತ್ರ ಸಮಾಯಾತಾ ಪ್ಲಕ್ಷಜಾತಾ ಸರಸ್ವತೀ ।
ಸಾ ಸಭಾಜ್ಯ ಸ್ತುತಾ ತೇನ ಮುನಿನಾ ಧಾರ್ಮಿಕೇಣ ಹ ॥ ೧೮ ॥

ಸರಃ ಸಂನಿಹಿತಂ ಪ್ಲಾವ್ಯಂ ಪಶ್ಚಿಮಾಂ ಪ್ರಸ್ಥಿತೋ ದಿಶಂ ।
ಕುರುಣಾ ತು ತತಃ ಕೃಷ್ಟಂ ಯಾವತ್ ಕ್ಷೇತ್ರಂ ಸಮಂತತಃ ॥ ೧೯ ॥

ಪಂಚಯೋಜನವಿಸ್ತಾರಂ ದಯಾಸತ್ಯಕ್ಷಮೋದ್ಗಮಂ ।
ಸ್ಯಮಂತಪಂಚಕಂ ತಾವತ್ಕುರುಕ್ಷೇತ್ರಮುದಾಹೃತಂ ॥ ೨೦ ॥

---

ಮಾಡಿದನು. ಆ ರಕ್ತದಿಂದಲೇ ತರ್ಪಣಮಾಡಿ ಅಲ್ಲಿಯೇ ತಪಸ್ಸನ್ನು ಮಾಡಿದನು.

೧೭. ಆದಕಾರಣ ಅದು ಪಾಪನಾಶಕವಾದ ರಾಮತೀರ್ಥ ಎಂದು ಪ್ರಸಿದ್ಧವಾಯಿತು. ಮಾರ್ಕಂಡೇಯ ಮುನಿಯು ಅಲ್ಲಿ ಉತ್ತಮ ತಪಸ್ಸನ್ನು ಮಾಡಿದನು.

೧೮. ಪ್ಲಕ್ಷದ್ವೀಪದಲ್ಲಿ ಹುಟ್ಟಿದ ಸರಸ್ವತೀನದಿಯು ಹರಿಯುತ್ತಿರುವೆಡೆಯಲ್ಲೆಲ್ಲಾ ಅದನ್ನು ಧಾರ್ಮಿಕನಾದ ಮಾರ್ಕಂಡೇಯಮುನಿಯು ಪೂಜಿಸಿ ಸ್ತೋತ್ರಮಾಡಿರುವನು.

೧೯-೨೦. ಅವನು ಸಮೀಪದಲ್ಲಿದ್ದ ಸರೋವರದಲ್ಲಿ ಮುಳುಗಿ ಪಶ್ಚಿಮ ದಿಕ್ಕಿಗೆ ಹೊರಟನು. ಅನಂತರ ಕುರುರಾಜನು ಆ ಕ್ಷೇತ್ರದ ಸುತ್ತಲೂ ದಯೆ, ಸತ್ಯ, ಕ್ಷಮೆ ಇವುಗಳಿಂದ ತುಂಬಿದ ಐದುಗಾವುದ ವಿಸ್ತಾರವುಳ್ಳ ಭೂಮಿಯನ್ನು ಉತ್ತನು. ಹೀಗೆ ಉತ್ತ ಐದುಗಾವುದಪ್ರದೇಶವೂ ಕುರುಕ್ಷೇತ್ರವೆಂದು ಉಕ್ತವಾಗಿದೆ.

ಅತ್ರ ಸ್ನಾತಾ ನರಾ ದೇವಿ ಲಭಂತೇ ಪುಣ್ಯಮಕ್ಷಯಮ್ ।
ಮೃತಾ ವಿಮಾನಮಾರುಹ್ಯ ಬ್ರಹ್ಮಲೋಕಂ ವ್ರಜಂತಿ ಚ ॥ ೨೧ ॥

ಉಪವಾಸಶ್ಚ ದಾನಂ ಚ ಹೋಮೋ ಜಪ್ಯಂ ಸುರಾರ್ಚನಮ್ ।
ಅಕ್ಷಯ್ಯಂ ಸ್ಯಾತ್ಪ್ರಯಾತ್ಯೇವ ನಾತ್ರ ಕಾರ್ಯಾ ವಿಚಾರಣಾ ॥ ೨೨ ॥

ಬ್ರಹ್ಮವೇದ್ಯಾಂ ಕುರುಕ್ಷೇತ್ರೇ ಯೇ ಮೃತಾಸ್ತೇ ಪುನರ್ಭವಾಃ ।
ಗ್ರಹನಕ್ಷತ್ರತಾರಾಣಾಂ ಕಾಲೇನ ಪತನಾದ್ಭಯಮ್ ॥ ೨೩ ॥

ಕುರುಕ್ಷೇತ್ರೇ ಮೃತಾನಾಂ ಚ ಭೂಮೌ ಪತನಂ ಭವೇತ್ ।
ದೇವರ್ಷಿಸಿದ್ಧಗಂಧರ್ವಾಸ್ತ್ವಕ್ಷರಂ ಸೇವಿತುಂ ಕಾಂಕ್ಷಿಣಃ ॥ ೨೪ ॥

ಯತ್ರ ನಿತ್ಯಂ ಸ್ಥಿತಾ ದೇವಿ ಸರಸ್ವತ್ಯಾಖ್ಯಾ ಸಾ ಮತಾ ।
ತಸ್ಯ ಕ್ಷೇತ್ರಸ್ಯ ರಕ್ಷಾರ್ಥಂ ವಿಷ್ಣುನಾ ಸ್ಥಾಪಿತಾಃ ಪುರಾ ॥ ೨೫ ॥

---

೨೧. ದೇವಿ! ಇಲ್ಲಿ ಸ್ನಾನಮಾಡಿದ ಜನರು ಅಕ್ಷಯಪುಣ್ಯವನ್ನು ಹೊಂದುವರು. ಮೃತರಾದವರು ಬ್ರಹ್ಮಲೋಕಕ್ಕೆ ಹೋಗುವರು.

೨೨. ಇಲ್ಲಿ ಮಾಡಿದ ಉಪವಾಸ, ದಾನ, ಹೋಮ, ಜಪ, ದೇವರ ಪೂಜೆ ಇವೆಲ್ಲವೂ ಅಕ್ಷಯವಾಗುವುವು. ಈ ವಿಷಯದಲ್ಲಿ ಸಂದೇಹಪಡಬಾರದು.

೨೩. ಬ್ರಹ್ಮವೇದಿಕೆಯಲ್ಲಿ ಮತ್ತು ಕುರುಕ್ಷೇತ್ರದಲ್ಲಿಯೂ ಮೃತರಾದವರು ಪುನರ್ಜನ್ಮವನ್ನು ಹೊಂದುವುದಿಲ್ಲ. ಗ್ರಹ, ನಕ್ಷತ್ರ, ತಾರೆ ಇವುಗಳಿಗೂ ಸಹ ಕಾಲಕಾಲವಾದಮೇಲೆ ಆಕಾಶ ಸ್ಥಾನದಿಂದ ಬೀಳುವ ಭಯವುಂಟು.

೨೪. ಕುರುಕ್ಷೇತ್ರದಲ್ಲಿ ಮೃತರಾದವರಿಗಾದರೋ ಸ್ವಸ್ಥಾನಭ್ರಂಶವಾಗುವುದೆಂಬ ಭಯವೇ ಇಲ್ಲ. ದೇವತೆಗಳು, ಋಷಿಗಳು, ಸಿದ್ಧರು, ಗಂಧರ್ವರು ಇವರೆಲ್ಲರೂ ಅಕ್ಷರೇಶ್ವರನನ್ನು ಸೇವಿಸಬೇಕೆಂದು ಹಾತೊರೆಯುತ್ತಿರುವರು.

೨೫. ದೇವಿ! ಯಾವಾಗಲೂ ಸರಸ್ವತಿಯು ಸನ್ನಿಹಿತವಾಗಿರುವ ರಂತುಕನಾಮಕವಾದ ಆ ಕ್ಷೇತ್ರವನ್ನು ಪಾಲಿಸುವುದಕ್ಕಾಗಿ ಪೂರ್ವದಲ್ಲಿ ವಿಷ್ಣುವು ಇವರನ್ನು ಸ್ಥಾಪಿಸಿರುವನು.

ಯಕ್ಷಃ ಸುಚಂದ್ರಃ ಸೂರ್ಯಶ್ಚ ವಾಸುಕಿಃ ಶಂಬುಕರ್ಣಕಃ ।
ವಿದ್ಯಾಧರಃ ಸುಕೇಶೀ ಚ ರಾಕ್ಷಸಾಧಿಪತಿಸ್ತಥಾ ॥ ೨೬ ॥

ಏತೈರ್ಭೃತ್ಯೈಸ್ತ್ವಷ್ಟಸಾಹಸ್ರೈರ್ಧನುರ್ಬಾಣಧರೈಃ ಸದಾ ।
ರಕ್ಷ್ಯತೇ ಚ ಕುರುಕ್ಷೇತ್ರಂ ವಾರಯಂತಿ ಚ ಪಾಪಿನಃ ॥ ೨೭ ॥

ರಂತುಕಂ ತು ಸಮಾಸಾದ್ಯ ಕ್ಷಾಮಯಿತ್ವಾ ಪುನಃ ಪುನಃ ।
ತತಃ ಸ್ನಾತ್ವಾ ಸರಸ್ವತ್ಯಾಂ ಯಕ್ಷಂ ದೃಷ್ಟ್ವಾ ಪ್ರಣಮ್ಯ ಚ ॥ ೨೮ ॥

ಪುಷ್ಪಂ ಧೂಪಂ ಚ ನೈವೇದ್ಯಂ ಕೃತ್ವೈತದ್ವಾಕ್ಯಮುಚ್ಚರೇತ್ ।
ತವ ಪ್ರಸಾದಾದ್ಯಕ್ಷೇಂದ್ರ ವನಾನಿ ಸರಿತಸ್ತಥಾ ॥ ೨೯ ॥

ಭ್ರಮತೋ ಮಮ ತೀರ್ಥಾನಿ ಮಾ ವಿಘ್ನಂ ಜಾಯತಾಂ ನಮಃ ।
ಇತಿ ಪ್ರಸಾದ್ಯ ಯಕ್ಷೇಶಂ ಯಾತ್ರಾಂ ಸಮ್ಯಕ್ಸಮಾಚರೇತ್ ॥ ೩೦ ॥

---

೨೬. ಶೋಭನೇ! ಅಲ್ಲಿ ಯಕ್ಷ, ಸುಚಂದ್ರ, ಸೂರ್ಯ, ವಾಸುಕಿ, ಶಂಬುಕರ್ಣ, ವಿದ್ಯಾಧರ, ಸುಕೇಶಿ ಮತ್ತು ರಾಕ್ಷಸ ಇವರು ರಕ್ಷಾರ್ಥವಾಗಿ ನಿಯಮಿಸಲ್ಪಟ್ಟಿರುವರು.

೨೭. ಅವರು ಧನುರ್ಬಾಣಧಾರಿಗಳಾದ ತಮ್ಮ ಎಂಟು ಸಾವಿರ ಭೃತ್ಯರೊಡನೆ ಯಾವಾಗಲೂ ಕುರುಕ್ಷೇತ್ರವನ್ನು ರಕ್ಷಿಸುತ್ತಿರುವರು. ಮತ್ತು ಅಲ್ಲಿಗೆ ಪಾಪಿಗಳನ್ನು ಬಿಡದಂತೆ ತಡೆಯುತ್ತಿರುವರು.

೨೮-೩೦. ರಂತುಕಪ್ರದೇಶಕ್ಕೆ ಹೋಗಿ ಪುನಃಪುನಃ ಕ್ಷಮಾಪಣೆಯನ್ನು ಬೇಡಿ ಬಳಿಕ ಸರಸ್ವತೀನದಿಯಲ್ಲಿ ಸ್ನಾನಮಾಡಿ ಯಕ್ಷನನ್ನು ಸಂದರ್ಶಿಸಿ, ನಮಸ್ಕಾರಮಾಡಿ, ಪುಷ್ಪ, ಧೂಪ, ನೈವೇದ್ಯಗಳನ್ನರ್ಪಿಸಿ ಈ ಮಾತನ್ನು ಹೇಳಬೇಕು.

" ಯಕ್ಷೇಂದ್ರ ! ನಿನ್ನ ಅನುಗ್ರಹದಿಂದ ನದೀ, ವನ, ತೀರ್ಥ, ಇವುಗಳ ಯಾತ್ರೆಯನ್ನು ಮಾಡುವ ನನಗೆ ವಿಘ್ನಬಾರದಂತೆ ಅನುಗ್ರಹಿಸು, ನಿನಗೆ ನಮಸ್ಕಾರಮಾಡುವೆನು " ಎಂದು ಪ್ರಾರ್ಥಿಸಿ ಯಕ್ಷೇಶನನ್ನು ಪ್ರಸನ್ನೀಕರಿಸಿಕೊಂಡು ಚೆನ್ನಾಗಿ ಯಾತ್ರಾವಿಧಾನವನ್ನಾಚರಿಸಬೇಕು.

ವನಾನಾಂ ಚಾಪಿ ತೀರ್ಥಾನಾಂ ಸರಿತಾಮಪಿ ಮೋಹಿನಿ ।
ಯೋ ನರಃ ಕುರುತೇ ಯಾತ್ರಾಂ ಕುರುಕ್ಷೇತ್ರಸ್ಯ ಪುಣ್ಯದಾಂ ॥ ೩೧ ॥
ನ ತಸ್ಯ ನ್ಯೂನತಾ ಕಾಚಿದಿಹ ಲೋಕೇ ಪರತ್ರ ಚ ॥ ೩೨ ॥

ಇತಿ ಶ್ರೀನಾರದೀಯಪುರಾಣೋತ್ತರಭಾಗೇ ವಸುಮೋಹಿನೀಸಂವಾದೇ
ಕುರುಕ್ಷೇತ್ರಮಾಹಾತ್ಮ್ಯೇ ಕ್ಷೇತ್ರಪ್ರಮಾಣಾದಿನಿರೂಪಣಂ
ನಾಮ ಚತುಃಷಷ್ಟಿತಮೋಽಧ್ಯಾಯಃ

---

೩೧-೩೨ ಮೋಹಿನೀ ! ಕುರುಕ್ಷೇತ್ರದಲ್ಲಿರುವ ವನ, ತೀರ್ಥ, ನದಿ ಇವುಗಳ ಪುಣ್ಯಕರಯಾತ್ರೆಯನ್ನು ಮಾಡುವ ಮನುಷ್ಯನಿಗೆ ಈ ಲೋಕಪರಲೋಕಗಳಲ್ಲಿ ಯಾವ ಕುಂದೂ ಇರುವುದಿಲ್ಲ.

ಇಂತು ಶ್ರೀನಾರದೀಯಪುರಾಣೋತ್ತರಭಾಗದಲ್ಲಿ ವಸು ಮೋಹಿನೀ
ಸಂವಾದದೊಳು ಕುರುಕ್ಷೇತ್ರ ಮಾಹಾತ್ಮ್ಯೆಯಲ್ಲಿ ಕ್ಷೇತ್ರ
ಪ್ರಮಾಣಾದಿಗಳ ನಿರೂಪಣೆಯೆಂಬ ಅರವತ್ತು
ನಾಲ್ಕನೆಯ ಅಧ್ಯಾಯವು
ಮುಗಿದುದು.



# ಪಂಚಷಷ್ಟಿತಮೋಽಧ್ಯಾಯಃ

—

ಮೋಹಿನ್ಯುವಾಚ

ವನಾನಿ ಕಾನಿ ವಿಪ್ರೇಂದ್ರ ತತ್ರ ಸಂತಿ ಶುಭಾವಹಾಃ ।
ಸರಿತಶ್ಚ ಕ್ರಮಾದ್ಯಾತ್ರಾಂ ವದ ಮೇ ಸರ್ವಸಿದ್ಧಿದಾಂ ॥ ೧ ॥

ಯಾನಿ ತೀರ್ಥಾನಿ ಸಂತ್ಯತ್ರ ಕುರುಕ್ಷೇತ್ರೇ ಸುಪುಣ್ಯದೇ ।
ತಾನಿ ಸರ್ವಾಣಿ ಮೇ ಬ್ರೂಹಿ ಗತಿದಸ್ತ್ವಂ ಗುರುರ್ಯತಃ ॥ ೨ ॥

ವಸುರುವಾಚ

ಶೃಣು ಮೋಹಿನಿ ವಕ್ಷ್ಯಾಮಿ ಕುರುಕ್ಷೇತ್ರಸ್ಯ ಪುಣ್ಯದಂ ।
ಯಾತ್ರಾವಿಧಾನಂ ಯತ್ಕೃತ್ವಾ ಲಭತೇ ಗತಿಮುತ್ತಮಾಂ ॥ ೩ ॥

---

## ಅರವತ್ತೈದನೆಯ ಅಧ್ಯಾಯ

೧. ಮೋಹಿನಿಯು ಹೇಳಿದಳು :—ವಿಪ್ರೇಂದ್ರ! ಆ ಕುರುಕ್ಷೇತ್ರದಲ್ಲಿ ಯಾವಯಾವ ವನಗಳು ಮತ್ತು ಮಂಗಳಕರ ನದಿಗಳೂ ಇವೆ? ಸಕಲ ಸಿದ್ಧಿದಾಯಕವಾದ ಅವುಗಳ ಯಾತ್ರೆಯ ರೀತಿಯನ್ನು ಕ್ರಮವಾಗಿ ನನಗೆ ಹೇಳಬೇಕು.

೨. ವಸುವೇ! ನೀನೇ ನನಗೆ ಗತಿಪ್ರದನಾದ ಗುರುವಾಗಿರುವೆ ಯಾದಕಾರಣ ಅತ್ಯಂತ ಪುಣ್ಯದಾಯಕವಾದ ಕುರುಕ್ಷೇತ್ರದಲ್ಲಿರುವ ಸಕಲತೀರ್ಥಗಳನ್ನೂ ನನಗೆ ವಿವರಿಸಿ ಹೇಳು ಎಂದು ಕೇಳಿದಳು.

೩. ವಸುವು ಹೇಳುತ್ತಾನೆ:—ಮೋಹಿನೀ! ಯಾವ ವಿಧಾನದಿಂದ ಯಾತ್ರೆಮಾಡಿದರೆ ಉತ್ತಮಗತಿಯು ಲಭಿಸುವುದೋ, ಅಂತಹ ಪುಣ್ಯಕರವಾದ ಕುರುಕ್ಷೇತ್ರ ಯಾತ್ರಾವಿಧಾನವನ್ನು ಹೇಳುವೆನು ಕೇಳು.

ವನಾನಿ ಸಪ್ತ ಸಂತೀಹ ಕುರುಕ್ಷೇತ್ರಸ್ಯ ಮಧ್ಯತಃ ।
ತೇಷಾಂ ನಾಮಾನಿ ವಕ್ಷ್ಯಾಮಿ ಪುಣ್ಯದಾನಾಂ ನೃಣಾಮಿಹ ॥ ೪ ॥

ಕಾಮ್ಯಕಂ ಚ ವನಂ ಪುಣ್ಯಂ ತಥಾದಿತಿವನಂ ಮಹತ್ ।
ವ್ಯಾಸಸ್ಯ ಚ ವನಂ ಪುಣ್ಯಂ ಫಲಕೀವನಮೇವ ಚ ॥ ೫ ॥

ತಥಾ ಸೂರ್ಯವನಂ ಚಾತ್ರ ಪುಣ್ಯಂ ಮಧುವನಂ ಚ ವೈ ।
ಸೀತಾವನಂ ತಥಾಖ್ಯಾತಂ ನೃಣಾಂ ಕಲ್ಮಷನಾಶನಂ ॥ ೬ ॥

ವನಾನ್ಯೇತಾನಿ ಸಪ್ತಾತ್ರ ತೇಷು ತೀರ್ಥಾನ್ಯನೇಕಶಃ ।
ಸರಸ್ವತೀ ನದೀ ಪುಣ್ಯಾ ತಥಾ ವೈತರಣೀ ನದೀ ॥ ೭ ॥

ಗಂಗಾ ಮಂದಾಕಿನೀ ಪುಣ್ಯಾ ತಥೈವಾನ್ಯಾ ಮಧುಸ್ರವಾ ।
ದೃಷದ್ವತೀ ಕೌಶಿಕೀ ಚ ಪುಣ್ಯಾ ಹೈರಣ್ವತೀ ನದೀ ॥ ೮ ॥

ವರ್ಷಕಾಲವಹಾಶ್ಚೈತಾ ವರ್ಜಯಿತ್ವಾ ಸರಸ್ವತೀಂ ।
ಏತಾಸಾಮುದಕಂ ಪುಣ್ಯಂ ಸ್ಪರ್ಶೇ ಪಾನೇ ಸಮಾಪ್ಲುತೌ ॥ ೯ ॥

---

೪. ಈ ಕುರುಕ್ಷೇತ್ರ ಮಧ್ಯದಲ್ಲಿ ಏಳು ವನಗಳಿವೆ. ಮನುಷ್ಯರಿಗೆ ಪುಣ್ಯದಾಯಕಗಳಾದ ಆ ವನಗಳ ಹೆಸರುಗಳನ್ನು ಹೇಳುವೆನು.

೫-೬. ಕಾಮ್ಯಕವನ, ಅದಿತಿವನ, ವ್ಯಾಸವನ, ಫಲಕೀವನ, ಸೂರ್ಯವನ, ಸೀತಾವನ ಮತ್ತು ಮಧುವನ ಎಂಬ ಹೆಸರಿನಿಂದ ಏಳುವನಗಳು ಪ್ರಸಿದ್ಧವಾಗಿವೆ. ಅವೆಲ್ಲವೂ ಮನುಷ್ಯನ ಪಾಪಪರಿಹಾರಕವು ಮತ್ತು ಪುಣ್ಯಕರವೂ ಆಗಿವೆ.

೭-೮. ಈ ಏಳು ವನಗಳಲ್ಲಿ ಸರಸ್ವತೀ, ವೈತರಣೀ, ಗಂಗಾ, ಮಂದಾಕಿನೀ, ಮಧುಸ್ರವಾ, ದೃಷದ್ವತೀ, ಕೌಶಿಕೀ. ಹೈರಣ್ವತೀ ನಾಮಕಗಳಾದ ಪುಣ್ಯನದಿಗಳೆಂಬ ಅನೇಕ ತೀರ್ಥಗಳಿವೆ.

೯. ಇವುಗಳಲ್ಲಿ ಸರಸ್ವತೀನದಿಯು ಹೊರತು ಉಳಿದ ನದಿಗಳೆಲ್ಲವೂ ವರ್ಷರ್ತುವಿನಲ್ಲಿ ಮಾತ್ರ ಹರಿಯುವುವು. ಇವುಗಳ ನೀರನ್ನುಮುಟ್ಟುವುದರಿಂದಲೂ,

ರಜಸ್ವಲಾತ್ವಂ ನೈತಾಸಾಂ ಪುಣ್ಯಕ್ಷೇತ್ರಪ್ರಭಾವತಃ ।
ರಂತುಕಂ ಪುರಮಾಸಾದ್ಯ ದ್ವಾರಪಾಲಂ ಮಹಾಬಲಂ ॥ ೧೦ ॥

ಯಕ್ಷಂ ಸಮಭಿವಾದ್ಯಾಥ ತತ್ರ ಯಾತ್ರಾಂ ಸಮಾರಭೇತ್ ।
ತತೋ ಗಚ್ಛೇನ್ನರಃ ಪುಣ್ಯಂ ಭದ್ರೇದಿತಿವನಂ ಮಹತ್ ॥ ೧೧ ॥

ಅದಿತ್ಯಾ ಯತ್ರ ಪುತ್ರಾರ್ಥಂ ಸಮ್ಯಕ್ಚೀರ್ಣಂ ಮಹತ್ತಪಃ ।
ತತ್ರ ಸ್ನಾತ್ವಾ ಸಮಭ್ಯರ್ಚ್ಯ ದೇವಮಾತರಮಂಗನಾ ॥ ೧೨ ॥

ಸೂತೇ ಪುತ್ರಂ ಮಹಾಶೂರಂ ಸರ್ವಲಕ್ಷಣಸಂಯುತಂ ।
ತತೋ ಗಚ್ಛೇದ್ವರಾರೋಹೇ ವಿಷ್ಣೋಃ ಸ್ಥಾನಮನುತ್ತಮಂ ॥ ೧೩ ॥

---

ಕುಡಿಯುವುದರಿಂದಲೂ ಮತ್ತು ಇವುಗಳಲ್ಲಿ ಸ್ನಾನಮಾಡುವುದರಿಂದಲೂ ಸಹ ಪುಣ್ಯಬರುತ್ತದೆ

೧೦-೧೨. ಪುಣ್ಯಕ್ಷೇತ್ರಪ್ರಭಾವದಿಂದ ಈ ನದಿಗಳಿಗೆ ಇತರ ನದಿಗಳಂತೆ ರಜಸ್ವಲಾದೋಷವಿಲ್ಲ. ಯಾತ್ರಿಕನು ಮೊದಲು ರಂತುಕಪಟ್ಟಣಕ್ಕೆ ಹೋಗಿ ಮಹಾಬಲಿಷ್ಠನು, ದ್ವಾರಪಾಲಕನೂ ಆದ ಯಕ್ಷನನ್ನು ನಮಸ್ಕರಿಸಿ ಅನಂತರ ಯಾತ್ರೆಗೆ ಪ್ರಾರಂಭಿಸಬೇಕು. ತರುವಾಯ ಆ ಮನುಷ್ಯನು, ಅದಿತಿಯು ಮಕ್ಕಳಾಗುವುದಕ್ಕಾಗಿ ಮಹಾತಪಸ್ಸನ್ನು ಚೆನ್ನಾಗಿ ಮಾಡಿದ ಕ್ಷೇತ್ರವಾದ ದೊಡ್ಡ ಅದಿತಿವನಕ್ಕೆ ಹೋಗಬೇಕು.

೧೨-೧೩. ಸ್ತ್ರೀಯು ಆ ತೀರ್ಥದಲ್ಲಿ ಸ್ನಾನಮಾಡಿ ದೇವಮಾತೆಯಾದ ಅದಿತಿಯನ್ನು ಪೂಜಿಸಿದರೆ ಸಕಲ ಲಕ್ಷಣಸಂಪನ್ನನು, ಮಹಾಶೂರನೂ ಆದ ಮಗನನ್ನು ಪಡೆಯುವಳು

೧೩-೧೪. ವರಾರೋಹೇ ! ತರುವಾಯ ಹರಿಯು ಸನ್ನಿಹಿತನಾಗಿರುವ ವಿಮಲ ಎಂದು ವಿಖ್ಯಾತವಾದ, ಸರ್ವೋತ್ತಮವಾದ ವಿಷ್ಣುಸ್ಥಾನಕ್ಕೆ ಹೋಗಬೇಕು.

ವಿಮಲಂ ನಾಮ ವಿಖ್ಯಾತಂ ಯತ್ರ ಸನ್ನಿಹಿತೋ ಹರಿಃ |
ವಿಮಲೇ ತು ನರಃ ಸ್ನಾತ್ವಾ ದೃಷ್ಟ್ವಾ ಚ ವಿಮಲೇಶ್ವರಂ ॥ ೧೪ ॥

ವಿಮಲಃ ಸ ಲಭೇಲ್ಲೋಕಂ ದೇವದೇವಸ್ಯ ಚಕ್ರಿಣಃ |
ಹರಿಂ ಚ ಬಲದೇವಂ ಚ ದೃಷ್ಟ್ವೈಕಾಸನಮಾಸ್ಥಿತೌ ॥ ೧೫ ॥

ಮುಚ್ಯತೇ ಕಿಲ್ಬಿಷಾತ್ಸದ್ಯೋ ಮೋಹಿನ್ಯತ್ರ ನ ಸಂಶಯಃ |
ತತಃ ಪಾರಿಪ್ಲವಂ ಗಚ್ಛೇತ್ತ್ರಿಷು ಲೋಕೇಷು ವಿಶ್ರುತಂ ॥ ೧೬ ॥

ತತ್ರ ಸ್ನಾತ್ವಾ ಚ ಪೀತ್ವಾ ಯೋ ಬ್ರಾಹ್ಮಣಂ ವೇದಪಾರಗಂ |
ಸಂತೋಷ್ಯ ದಕ್ಷಿಣಾದ್ಯೇನ ಬ್ರಹ್ಮಯಜ್ಞಫಲಂ ಲಭೇತ್ ॥ ೧೭ ॥

ತತ್ರಾಸ್ತಿ ಸಂಗಮೋ ಭದ್ರೇ ಕೌಶಿಕ್ಯಾಃ ಪಾಪನಾಶನಃ |
ತತ್ರ ಸ್ನಾತ್ವಾ ನರೋ ಭಕ್ತ್ಯಾ ಪ್ರಾಪ್ನೋತಿ ಪ್ರಿಯಸಂಗಮಂ ॥ ೧೮ ॥

---

೧೪-೧೫. ವಿಮಲತೀರ್ಥದಲ್ಲಿ ಮನುಷ್ಯನು ಸ್ನಾನಮಾಡಿ, ವಿಮಲೇಶ್ವರನನ್ನು ಸಂದರ್ಶಿಸಿದರೆ ಪರಿಶುದ್ಧನಾಗಿ ಚಕ್ರಪಾಣಿಯಾದ ದೇವದೇವನ ಲೋಕವನ್ನು ಹೊಂದುವನು

೧೫-೧೬. ಮೋಹಿನೀ! ಒಂದೇ ಆಸನದಲ್ಲಿ ಕುಳಿತಿರುವ ಹರಿ ಮತ್ತು ಬಲದೇವಸ್ವಾಮಿಯವರನ್ನು ದರ್ಶನಮಾಡಿದರೆ ತಕ್ಷಣದಲ್ಲಿಯೇ ಪಾಪವೆಲ್ಲವೂ ಹೋಗುವುದು. ಈ ವಿಷಯದಲ್ಲಿ ಸಂದೇಹವಿಲ್ಲ. ತರುವಾಯ ಲೋಕವಿಖ್ಯಾತವಾದ ಪಾರಿಪ್ಲವತೀರ್ಥಕ್ಕೆ ಹೋಗಬೇಕು.

೧೭. ಆ ತೀರ್ಥದಲ್ಲಿ ಸ್ನಾನಮಾಡಿ, ಆಚಮನಾದಿಗಳಿಂದ ಪರಿಶುದ್ಧನಾಗಿ, ವೇದಪಾರಂಗತನಾದ ಬ್ರಾಹ್ಮಣನಿಗೆ ದಕ್ಷಿಣಾದಿಗಳನ್ನುಕೊಟ್ಟು ಸಂತೋಷಪಡಿಸಿದರೆ ಬ್ರಹ್ಮಯಜ್ಞಫಲವು ಬರುವುದು.

೧೮. ಭದ್ರೇ! ಅಲ್ಲಿ ಪಾಪನಾಶಕವಾದ ಕೌಶಿಕೀನದಿಯ ಸಂಗಮವಿದೆ. ಅಲ್ಲಿ ಭಕ್ತಿಯಿಂದ ಸ್ನಾನಮಾಡಿದರೆ ಮನುಷ್ಯನು ಇಷ್ಟಾರ್ಥವನ್ನು ಹೊಂದುವನು.

ತತಸ್ತು ಪೃಥಿವೀತೀರ್ಥಮಾಸಾದ್ಯ ಕ್ಷಾಂತಿಮಾನ್ನರಃ ।
ಸ್ನಾತೋ ಭಕ್ತ್ಯಾ ಮಹಾಭಾಗೇ ಪ್ರಾಪ್ನೋತಿ ಗತಿಮುತ್ತಮಾಂ ॥ ೧೯ ॥

ಧರಣ್ಯಾಮಪರಾಧಾ ಯೇ ಕೃತಾಃ ಸ್ಯುಃ ಪುರುಷೇಣ ವೈ ।
ತಾನ್ ಸರ್ವಾನ್ ಕ್ಷಮತೇ ದೇವೀ ತತ್ರ ಸ್ನಾತಸ್ಯ ದೇಹಿನಃ ॥ ೨೦ ॥

ತತೋ ದಕ್ಷಾಶ್ರಮೇ ಪುಣ್ಯೇ ದೃಷ್ಟ್ವಾ ದಕ್ಷೇಶ್ವರಂ ಶಿವಂ ।
ಅಶ್ವಮೇಧಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಮಾನವಃ ॥ ೨೧ ॥

ತತಃ ಶಾಲಕಿನೀಂ ಗಚ್ಛೇತ್ತತ್ರ ಸ್ನಾತ್ವಾ ಸಮರ್ಚಯೇತ್ ।
ಹರಿಂ ಹರೇಣ ಸಂಯುಕ್ತಂ ವಾಂಛಿತಾರ್ಥಸ್ಯ ಲಬ್ಧಯೇ ॥ ೨೨ ॥

ನಾಗತೀರ್ಥಂ ತತಃ ಪ್ರಾಪ್ಯ ಸ್ನಾತ್ವಾ ತತ್ರ ವಿಧಾನವಿತ್ ।
ಸರ್ಪಿಶ್ಚಾಸ್ಯ ದಧಿ ಪ್ರಾಶ್ಯ ನಾಗೇಭ್ಯೋ ಹ್ಯಭಯಂ ಲಭೇತ್ ॥ ೨೩ ॥

---

೧೯. ಧನ್ಯೇ! ಅನಂತರ ಮನುಷ್ಯನು ತಾಳ್ಮೆಯಿಂದ ಪೃಥಿವೀ ತೀರ್ಥಕ್ಕೆ ಹೋಗಿ ಅಲ್ಲಿ ಭಕ್ತಿಯಿಂದ ಸ್ನಾನಮಾಡಿದರೆ ಉತ್ತಮಗತಿಯನ್ನು ಹೊಂದುವನು.

೨೦. ಮನುಷ್ಯನು ಈ ಲೋಕದಲ್ಲಿಮಾಡಿದ ಅಪರಾಧವನ್ನೆಲ್ಲಾ ಅಲ್ಲಿ ಸ್ನಾನ ಮಾಡುವ ಮಾತ್ರದಿಂದ ದೇವಿಯು ಕ್ಷಮಿಸಿ ಅವನನ್ನು ಉದ್ಧಾರಮಾಡುವಳು.

೨೧. ಬಳಿಕ ಮಾನವನು ಪುಣ್ಯಕರವಾದ ದಕ್ಷಾಶ್ರಮಕ್ಕೆ ಹೋಗಿ ದಕ್ಷೇಶ್ವರನಾಮಕನಾದ ಶಿವನನ್ನು ದರ್ಶನಮಾಡಿದರೆ ಅಶ್ವಮೇಧಯಜ್ಞದ ಫಲ ವನ್ನು ಪಡೆಯುವನು.

೨೨. ಆಮೇಲೆ ಶಾಲಕಿನೀತೀರ್ಥಕ್ಕೆ ಹೋಗಿ ಅಲ್ಲಿ ಸ್ನಾನಮಾಡಿ ಈಶ್ವರ ಸಹಿತನಾದ ಹರಿಯನ್ನು ಪೂಜಿಸಿದರೆ ಇಷ್ಟಾರ್ಥ ಸಿದ್ಧಿಯಾಗುವುದು.

೨೩. ಅನಂತರ ನಾಗತೀರ್ಥಕ್ಕೆ ಹೋಗಿ ಅಲ್ಲಿ ವಿಧಾನೋಕ್ತಪ್ರಕಾರ ವಾಗಿ ಸ್ನಾನಮಾಡಿ ಘೃತ ದಧಿಪ್ರಾಶನಮಾಡಿದರೆ ನಾಗಗಳಿಂದ ಅಭಯವು ಲಭಿಸುವುದು.

ತತಃ ಸಾಯಮುಪಾವೃತ್ಯ ರಂತುಕಂ ದ್ವಾರಪಾಲಕಂ ।
ಏಕರಾತ್ರೋಷಿತಸ್ತತ್ರ ಪೂಜಯೇತ್ತಂ ಪರೇಹನಿ ॥ ೨೪ ॥

ಗಂಧಾದ್ಯೈರುಪಚಾರೈಸ್ತು ಬ್ರಾಹ್ಮಣಂ ಪ್ರಾರ್ಚ್ಯ ಭೋಜಯೇತ್ ।
ತತಃ ಪಂಚನದಂ ಗಚ್ಛೇತ್ತೀರ್ಥಂ ತ್ರೈಲೋಕ್ಯವಿಶ್ರುತಂ ॥ ೨೫ ॥

ಪಂಚನಾದಾಃ ಕೃತಾ ಯತ್ರ ಹರೇಣಾಸುರಭೀಷಣಾಃ ।
ತೇನ ಪಂಚನದಂ ನಾಮ ಸರ್ವಪಾತಕನಾಶನಂ ॥ ೨೬ ॥

ತತ್ರ ಸ್ನಾನೇನ ದಾನೇನ ನಿರ್ಭಯೋ ಜಾಯತೇ ನರಃ ।
ಕೋಟಿತೀರ್ಥಂ ತತೋ ಗಚ್ಛೇದ್ಯತ್ರ ರುದ್ರೇಣ ಮೋಹಿನೀ ॥ ೨೭ ॥

ಕೋಟಿತೀರ್ಥಾನ್ಯುಪಾಹೃತ್ಯ ಸ್ಥಾಪಿತಾನಿ ಮಹಾತ್ಮನಾ ।
ತತ್ರ ತೀರ್ಥೇ ನರಃ ಸ್ನಾತ್ವಾ ದೃಷ್ಟ್ವಾ ಕೋಟೀಶ್ವರಂ ಹರಂ ॥ ೨೮ ॥

---

೨೪. ಅಲ್ಲಿಂದ ಸಾಯಂಕಾಲದಲ್ಲಿ ರಂತುಕಪಟ್ಟಣಕ್ಕೆ ಹಿಂತಿರುಗಿ ಬಂದು ಒಂದುರಾತ್ರಿ ಅಲ್ಲಿದ್ದು ಮಾರನೆಯದಿನ ಅಲ್ಲಿರುವ ದ್ವಾರಪಾಲಕನನ್ನು ಪೂಜಿಸಬೇಕು.

೨೫. ಪೂಜೆಯಾದಬಳಿಕ ಗಂಧ ಮುಂತಾದ ಉಪಚಾರಗಳಿಂದ ಬ್ರಾಹಣನನ್ನು ಸತ್ಕರಿಸಿ ಭೋಜನಮಾಡಿಸಬೇಕು. ಅನಂತರ ಮೂರುಲೋಕ ಗಳಲ್ಲಿಯೂ ಪ್ರಸಿದ್ಧವಾಗಿರುವ ಪಂಚನದವೆಂಬ ತೀರ್ಥಕ್ಕೆ ಹೋಗಬೇಕು.

೨೬. ಈಶ್ವರನು ದೈತ್ಯರಿಗೆ ಭಯಂಕರವಾದ ಐದು ನಾದಗಳನ್ನು ಈ ಸ್ಥಳದಲ್ಲಿ ಮಾಡಿರುವುದರಿಂದ ಈ ಕ್ಷೇತ್ರವು ಪಂಚನದ ಎಂಬುದಾಗಿ ಪ್ರಸಿದ್ಧವಾ ಗಿದೆ. ಇದು ಸಕಲಪಾಪಗಳನ್ನೂ ಪರಿಹರಿಸುತ್ತದೆ.

೨೭-೨೮. ಅಲ್ಲಿ ಸ್ನಾನದಾನಗಳನ್ನು ಮಾಡುವುದರಿಂದ ಮನುಷ್ಯನಿಗೆ ಭಯಪರಿಹಾರವಾಗುವುದು. ಮೋಹಿನೀ! ಅಲ್ಲಿಂದ ಕೋಟಿತೀರ್ಥಕ್ಕೆ ಹೋಗ ಬೇಕು. ಅಲ್ಲಿ ಮಹಾತ್ಮನಾದ ರುದ್ರನು ಕೋಟಿತೀರ್ಥಗಳನ್ನು ತಂದು ಸ್ಥಾಪಿಸಿರುವನು.

ಪಂಚಯಜ್ಞಭವಂ ಪುಣ್ಯಂ ತತ್ಪ್ರಭೃತ್ಯಾಪ್ನುಯಾತ್ ಸದಾ ।
ತತ್ರೈವ ವಾಮನೋ ದೇವೈಃ ಸರ್ವೈರ್ದೇವಃ ಪ್ರತಿಷ್ಠಿತಃ ॥ ೨೯ ॥

ತಂ ಸ್ನಾತ್ವಾ ತತ್ರ ಸಂಪೂಜ್ಯ ಅಗ್ನಿಷ್ಟೋಮಫಲಂ ಲಭೇತ್ ।
ತತೋಽಶ್ವಿತೀರ್ಥಮಾಸಾದ್ಯ ಶ್ರದ್ಧಾವಾನ್ ವಿಜಿತೇಂದ್ರಿಯಃ ॥ ೩೦ ॥

ಸ್ನಾತ್ವಾ ತತ್ರ ಯಶಸ್ವೀ ಚ ರೂಪವಾಂಶ್ಚ ನರೋ ಭವೇತ್ ।
ತತೋ ವಾರಾಹತೀರ್ಥಂ ಚ ಪ್ರಾಪ್ಯ ವಿಷ್ಣುಪ್ರಕಲ್ಪಿತಂ ॥ ೩೧ ॥

ಆಪ್ಲುತ್ಯ ಶ್ರದ್ಧಯಾ ತತ್ರ ನರಃ ಸದ್ಗತಿಮಾಪ್ನುಯಾತ್ ।
ತತೋ ವ್ರಜೇತ್ಸೋಮತೀರ್ಥಂ ಯತ್ರ ಸೋಮೋ ವರಾನನೇ ॥ ೩೨ ॥

ತಪಸ್ತಪ್ತ್ವಾ ಹ್ಯರೋಗೋಽಭೂತ್ತತ್ರ ಸ್ನಾನಂ ಸಮಾಚರೇತ್ ।
ದತ್ವಾ ಚ ತತ್ರ ಗಾಮೇಕಾಂ ರಾಜಸೂಯಫಲಂ ಲಭೇತ್ ॥ ೩೩ ॥

---

೨೮-೨೯. ಆ ತೀರ್ಥದಲ್ಲಿ ಸ್ನಾನಮಾಡಿ ಮನುಷ್ಯನು ಕೋಟೇಶ್ವರ ದೇವನನ್ನು ದರ್ಶನಮಾಡಿದರೆ ಆಗಿನಿಂದ ಯಾವಾಗಲೂ ಪಂಚಯಜ್ಞಗಳನ್ನು ಮಾಡುವುದರಿಂದ ಬರುವ ಪುಣ್ಯವನ್ನು ಹೊಂದುವನು.

೨೯-೩೦. ಅಲ್ಲಿಯೇ ಸಕಲದೇವತೆಗಳೂ ವಾಮನದೇವನನ್ನು ಪ್ರತಿಷ್ಠೆ ಮಾಡಿರುವರು. ಅಲ್ಲಿರುವ ಆ ವಾಮನದೇವನನ್ನು ಸ್ನಾನಮಾಡಿ ಪೂಜೆಮಾಡಿದರೆ ಅಗ್ನಿಷ್ಟೋಮಫಲವು ಲಭಿಸುವುದು.

೩೦-೩೧. ಅಲ್ಲಿ ಅಶ್ವತೀರ್ಥಕ್ಕೆ ಹೋಗಿ ಶ್ರದ್ಧೆಯಿಂದ ಜಿತೇಂದ್ರಿಯನಾಗಿ ಅಲ್ಲಿ ಸ್ನಾನಮಾಡಿದರೆ ಮನುಷ್ಯನು ಯಶಸ್ವಿಯು, ರೂಪವಂತನೂ ಆಗುವನು.

೩೧-೩೨. ಬಳಿಕ ವಿಷ್ಣುನಿರ್ಮಿತವಾದ ವಾರಾಹತೀರ್ಥಕ್ಕೆ ಹೋಗಿ ಶ್ರದ್ಧೆಯಿಂದ ಅಲ್ಲಿ ಸ್ನಾನಮಾಡಿದರೆ ಮನುಷ್ಯನಿಗೆ ಸದ್ಗತಿಯಾಗುವುದು.

೩೨-೩೩. ವರಾನನೇ! ಅಲ್ಲಿಂದ ಸೋಮನು ತಪಸ್ಸುಮಾಡಿ ರೋಗವನ್ನು ನಿರ್ಮೂಲಮಾಡಿಕೊಂಡ ಸ್ಥಳವಾದ ಸೋಮತೀರ್ಥಕ್ಕೆ ಹೋಗಿ ಅಲ್ಲಿ ಸ್ನಾನಮಾಡಿ ಬ್ರಾಹ್ಮಣನಿಗೆ ಒಂದು ಗೋದಾನಮಾಡಿದರೆ ರಾಜಸೂಯಯಾಗದ ಫಲವು ಬರುವುದು,

ಭೂತೇಶ್ವರಂ ಚ ತತ್ರೈವ ಜ್ವಾಲಾಮಾಲೇಶ್ವರಂ ತಥಾ |
ತಾಂಡಲಿಂಗಂ ಸಮಭ್ಯರ್ಚ್ಯ ನ ಭೂಯೋ ಭವಮಾಪ್ನುಯಾತ್ || ೩೪ ||

ಏಕಹಂಸೇ ನರಃ ಸ್ನಾತ್ವಾ ಗೋಸಹಸ್ರಫಲಂ ಲಭೇತ್ |
ಕೃತಶೌಚೇ ನರಃ ಸ್ನಾತ್ವಾ ಪುಂಡರೀಕಫಲಂ ಲಭೇತ್ || ೩೫ ||

ತತೋ ಮುಂಜವಟಂ ನಾಮ ಪ್ರಾಪ್ಯ ದೇವಸ್ಯ ಶೂಲಿನಃ |
ಸಮುಷ್ಯ ಚ ನಿಶಾಮೇಕಾಂ ಪ್ರಾರ್ಚ್ಯೇಶಂ ಗಣಪೋ ಭವೇತ್ || ೩೬ ||

ಪ್ರಸಾದ್ಯ ಯಕ್ಷಿಣೀಂ ತತ್ರ ದ್ವಾರಸ್ಥಾಮುಪವಾಸಕೃತ್ |
ಸ್ನಾತ್ವಾಭ್ಯರ್ಚ್ಯಾಶಯೇದ್ವಿಪ್ರಾನ್ಮಹಾಪಾತಕಶಾಂತಯೇ || ೩೭ ||

---

೩೪. ಅಲ್ಲಿಯೇ ಸನ್ನಿಹಿತವಾಗಿರುವ ಭೂತೇಶ್ವರ, ಜ್ವಾಲಾಮಾಲೇಶ್ವರ, ತಾಂಡವಲಿಂಗ ಇವುಗಳನ್ನು ಭಕ್ತಿಯಿಂದ ಪೂಜಿಸಿದರೆ ಪುನರ್ಜನ್ಮವನ್ನು ಹೊಂದುವುದಿಲ್ಲ. ಆ ಜನ್ಮದಿಂದಲೇ ಮುಕ್ತನಾಗುವನೆಂದು ಭಾವ.

೩೫. ಏಕಹಂಸತೀರ್ಥದಲ್ಲಿ ಸ್ನಾನಮಾಡಿದ ಮನುಷ್ಯನು ಒಂದು ಸಾವಿರ ಗೋದಾನಮಾಡಿದ ಫಲವನ್ನು ಹೊಂದುವನು. ಕೃತಶೌಚತೀರ್ಥದಲ್ಲಿ ಸ್ನಾನಮಾಡಿದ ಮನುಷ್ಯನು ಪುಂಡರೀಕಯಾಗದ ಫಲವನ್ನು ಪಡೆಯುವನು.

೩೬. ಅಲ್ಲಿಂದ ಮುಂದೆ ಶೂಲಪಾಣಿಯಾದ ಈಶ್ವರದೇವನ ಮುಂಜವಟವೆಂಬ ವೃಕ್ಷಸನ್ನಿಧಿಗೆ ಹೋಗಿ ಅಲ್ಲಿ ಒಂದುರಾತ್ರಿ ವಾಸವಾಗಿದ್ದು ಈಶ್ವರನನ್ನು ಪೂಜಿಸಿದರೆ ಗಣಾಧಿಪತಿಯಾಗುವನು.

೩೭. ಅಲ್ಲಿ ಬಾಗಿಲಿನಲ್ಲಿರುವ ಯಕ್ಷಿಣಿಯನ್ನು ಪೂಜಾದಿಗಳಿಂದ ಪ್ರಸನ್ನೀಕರಿಸಿಕೊಂಡು ಸ್ನಾನಮಾಡಿ ಉಪವಾಸದಿಂದ ಬ್ರಾಹ್ಮಣರನ್ನು ಸತ್ಕರಿಸಿ ಭೋಜನಮಾಡಿಸಬೇಕು. ಅದರಿಂದ ಮಹಾಪಾಪಗಳೆಲ್ಲವೂ ಪರಿಹಾರವಾಗುವುದು.

ಪ್ರದಕ್ಷಿಣಮುಪಾವೃತ್ಯ ಪುಷ್ಕರಂ ಚ ತತೋ ವ್ರಜೇತ್ ।
ತತ್ರ ಸ್ನಾತ್ವಾ ಪಿತೄನ್ ಪ್ರಾರ್ಚ್ಯ ಕೃತಕೃತ್ಯೋ ನರೋ ಭವೇತ್ ॥ ೩೮ ॥

ಕನ್ಯಾದಾನಂ ಚ ಯಸ್ತತ್ರ ಕಾರ್ತಿಕ್ಯಾಂ ವೈ ಸಮಾಚರೇತ್ ।
ಪ್ರಸನ್ನಾ ದೇವತಾಸ್ತಸ್ಯ ಯಚ್ಛಂತ್ಯಭಿಮತಂ ಫಲಂ ॥ ೩೯ ॥

ಕಪಿಲಶ್ಚ ಮಹಾಯಕ್ಷೋ ದ್ವಾರಪಾಲೋತ್ರ ಸಂಸ್ಥಿತಃ ।
ಕರೋತಿ ಪಾಪಿನಾಂ ವಿಘ್ನಂ ದುರ್ಗತಿಂ ಚ ಪ್ರಯಚ್ಛತಿ ॥ ೪೦ ॥

ಪತ್ನೀ ತಸ್ಯ ಮಹಾಭಾಗಾ ನಾಮ್ನೋಲೂಖಲಮೇಖಲಾ ।
ಆಹತ್ಯ ದುಂದುಭಿಂ ಸಾ ತು ಭ್ರಮತೇ ನಿತ್ಯಮೇವ ಹಿ ॥ ೪೧ ॥

ವಾರಯೇತ್ಪಾಪಿನಃ ಸ್ನಾನಾತ್ತಥಾ ಸುಕೃತಿನೋ ನಯೇತ್ ।
ತತೋ ರಾಮಹ್ರದಂ ಗಚ್ಛೇತ್ ಸ್ನಾತ್ವಾ ತತ್ರ ವಿಧಾನತಃ ॥ ೪೨ ॥

---

೩೮. ಅಲ್ಲಿಂದ ಪ್ರದಕ್ಷಿಣೆಯಾಗಿ ಬಂದು ಪುಷ್ಕರಕ್ಕೆ ಹೋಗಬೇಕು. ಅಲ್ಲಿ ಸ್ನಾನಮಾಡಿ ಪಿತೃಗಳನ್ನರ್ಚಿಸಿದರೆ ಮನುಷ್ಯನು ಕೃತಕೃತ್ಯನಾಗುವನು.

೩೯. ಆ ಕ್ಷೇತ್ರದಲ್ಲಿ ಕಾರ್ತಿಕಮಾಸದ ಪೂರ್ಣಿಮೆಯ ದಿನದಲ್ಲಿ ಕನ್ಯಾದಾನವನ್ನು ಮಾಡುವವನಿಗೆ ದೇವತೆಗಳೆಲ್ಲರೂ ಪ್ರಸನ್ನರಾಗಿ ಇಷ್ಟಫಲವನ್ನು ಕೊಡುವರು.

೪೦. ಅಲ್ಲಿ ಕಪಿಲನೆಂಬ ಮಹಾಯಕ್ಷನು ದ್ವಾರಪಾಲಕನಾಗಿ ನಿಂತಿರುವನು. ಅವನು ಪಾಪಿಗಳಿಗೆ ವಿಘ್ನತಂದೊಡ್ಡಿ ದುರ್ಗತಿಯನ್ನು ಕೊಡುವನು.

೪೧. ಧನ್ಯಳಾದ ಉಲೂಖಲಮೇಖಲೆಯೆಂಬ ಅವನ ಪತ್ನಿಯು ನಗಾರಿಯನ್ನು ಹೊಡೆಯುತ್ತಾ ಯಾವಾಗಲೂ ತಿರುಗುತ್ತಿರುವಳು.

೪೨-೪೩. ಅವಳು ಪಾಪಿಗಳನ್ನು ಸ್ನಾನಮಾಡದಂತೆ ತಡೆಯುವಳು. ಹಾಗೆಯೇ ಪುಣ್ಯವಂತರಿಗೆ ಸ್ನಾನಕ್ಕೆ ಅನುಕೂಲಪಡಿಸುವಳು. ತರುವಾಯ ರಾಮಹ್ರದಕ್ಕೆ ಹೋಗಿ ಅಲ್ಲಿ ವಿಧಾನೋಕ್ತಪ್ರಕಾರವಾಗಿ ಸ್ನಾನಮಾಡಿ, ದೇವತೆ

ದೇವಾನ್ಪಿತೄನೃಷೀನಿಷ್ಟ್ವಾ ಭುಕ್ತಿಂ ಮುಕ್ತಿಂ ಚ ವಿಂದತಿ ।
ರಾಮಮಭ್ಯರ್ಚ್ಯ ಸಚ್ಛ್ರದ್ಧಃ ಸ್ವರ್ಣಂ ದತ್ವಾ ಧನೀ ಭವೇತ್ ॥ ೪೩ ॥

ವಂಶಮೂಲಂ ಸಮಾಸಾದ್ಯ ಸ್ನಾತ್ವಾ ಸ್ವಂ ವಂಶಮುದ್ಧರೇತ್ ।
ಕಾಯಶೋಧನಕೇ ಸ್ನಾತ್ವಾ ಶುದ್ಧದೇಹೋ ಹರಿಂ ವ್ರಜೇತ್ ॥ ೪೪ ॥

ಲೋಕೋದ್ಧಾರಂ ತತಃ ಪ್ರಾಪ್ಯ ಸ್ನಾತ್ವಾಭ್ಯರ್ಚ್ಯ ಜನಾರ್ದನಂ ।
ಪ್ರಾಪ್ನೋತಿ ಶಾಶ್ವತಂ ಲೋಕಂ ಯತ್ರ ವಿಷ್ಣುಃ ಸನಾತನಃ ॥ ೪೫ ॥

ಶ್ರೀತೀರ್ಥಂ ಚ ತತಃ ಪ್ರಾಪ್ಯ ಶಾಲಗ್ರಾಮಮನುತ್ತಮಂ ।
ಸ್ನಾತ್ವಾಭ್ಯರ್ಚ್ಯ ಹರಿಂ ನಿತ್ಯಂ ಪಶ್ಯತಿ ಸ್ವಾಂತಿಕೇ ಸ್ಥಿತಂ ॥ ೪೬ ॥

---

ಗಳು, ಪಿತೃಗಳು, ಋಷಿಗಳು ಇವರನ್ನು ಪೂಜಿಸಿದರೆ ಭೋಗಮೋಕ್ಷಗಳನ್ನು ಪಡೆಯುವನು. ಅಲ್ಲಿರುವ ರಾಮದೇವನನ್ನು ಸಮೀಚೀನಭಕ್ತಿಯಿಂದ ಪೂಜಿಸಿ ಸುವರ್ಣದಾನಮಾಡಿದರೆ ಧನಿಕನಾಗುವನು.

೪೪. ಅಲ್ಲೀದ ವಂಶಮೂಲತೀರ್ಥಕ್ಕೆ ಹೋಗಿ ಅಲ್ಲಿ ಸ್ನಾನಮಾಡಿದರೆ ತನ್ನ ವಂಶೋದ್ಧಾರವಾಗುವುದು. ಕಾಯಶೋಧನಕ ತೀರ್ಥದಲ್ಲಿ ಸ್ನಾನಮಾಡಿ ಪರಿಶುದ್ಧನಾದವನು ಹರಿಯನ್ನು ಹೊಂದುವನು.

೪೫. ಅಲ್ಲಿಂದ ಮುಂದೆ ಸನಾತನನಾದ ವಿಷ್ಣುವು ಸನ್ನಿಹಿತನಾಗಿರುವ ಲೋಕೋದ್ಧಾರ ತೀರ್ಥವನ್ನು ಹೊಂದಿ ಅಲ್ಲಿ ಸ್ನಾನಮಾಡಿ ಜನಾರ್ದನನನ್ನು ಪೂಜಿಸಿದರೆ ಶಾಶ್ವತಲೋಕವನ್ನು ಪಡೆಯುವನು.

೪೬. ಅಲ್ಲಿಂದ ಶ್ರೀತೀರ್ಥಕ್ಕೆ ಹೋಗಿ ಸ್ನಾನಮಾಡಿ ಸರ್ವೋತ್ತಮವಾದ ಸಾಲಗ್ರಾಮವನ್ನು ಪೂಜಿಸಿದರೆ ಯಾವಾಗಲೂ ತನ್ನ ಸಮೀಪದಲ್ಲಿಯೇ ಇರುವ ಹರಿಯನ್ನು ಸಾಕ್ಷಾತ್ಕರಿಸುವನು.

ಕಪಿಲಾಹ್ರದಮಾಸಾದ್ಯ ಸ್ನಾತ್ವಾಭ್ಯರ್ಚ್ಯ ಸುರಾನ್ಪಿತೄನ್ |
ಸಹಸ್ರಕಪಿಲಾಪುಣ್ಯಂ ಲಭತೇ ನಾತ್ರ ಸಂಶಯಃ || ೪೭ ||

ಕಪಿಲಂ ತತ್ರ ವಿಶ್ವೇಶಂ ಸಮಭ್ಯರ್ಚ್ಯ ವಿಧಾನತಃ |
ದೇವೈಶ್ಚ ಸತ್ಕೃತೋ ಭದ್ರೇ ಸಾಕ್ಷಾಚ್ಛಿವಪದಂ ಲಭೇತ್ || ೪೮ ||

ಸೂರ್ಯತೀರ್ಥೇ ತತೋ ಭಾನುಂ ಸೋಪವಾಸಃ ಸಮರ್ಚಯೇತ್ |
ಅಗ್ನಿಷ್ಟೋಮಸ್ಯ ಯಜ್ಞಸ್ಯ ಫಲಂ ಲಬ್ಧ್ವಾ ವ್ರಜೇದ್ದಿವಂ || ೪೯ ||

ಪೃಥಿವೀವಿವರದ್ವಾರಿ ಸ್ಥಿತೋ ಗಣಪತಿಃ ಸ್ವಯಂ |
ತಂ ದೃಷ್ಟ್ವಾಥ ಸಮಭ್ಯರ್ಚ್ಯ ಯಜ್ಞಸ್ಯ ಫಲಮಾಪ್ನುಯಾತ್ || ೫೦ ||

---

೪೭. ಕಪಿಲಾಹ್ರದಕ್ಕೆ ಹೋಗಿ ಸ್ನಾನಮಾಡಿ ದೇವಪಿತೃಗಳ ಪೂಜೆ ಮಾಡಿದರೆ ಸಾವಿರ ಕಪಿಲಗೋದಾನಮಾಡಿದ ಪುಣ್ಯವು ಬರುವುದು. ಈ ವಿಷಯದಲ್ಲಿ ಸಂದೇಹವಿಲ್ಲ.

೪೮. ಭದ್ರೇ ! ಅಲ್ಲಿರುವ ಕಪಿಲನಾಮಕನಾದ ವಿಶ್ವೇಶ್ವರನನ್ನು ವಿಧಾನೋಕ್ತಪ್ರಕಾರವಾಗಿ ಭಕ್ತಿಯಿಂದ ಪೂಜಿಸಿದರೆ ಅವನು ದೇವತೆಗಳಿಂದ ಸತ್ಕರಿಸಲ್ಪಟ್ಟು ಸಾಕ್ಷಾಚ್ಛಿವಸ್ಥಾನವನ್ನು ಹೊಂದುವನು.

೪೯. ಅಲ್ಲಿಂದ ಹೊರಟು ಸೂರ್ಯತೀರ್ಥದಲ್ಲಿ ಸ್ನಾನಮಾಡಿ ಉಪವಾಸದಿಂದ ಅಲ್ಲಿರುವ ಸೂರ್ಯನನ್ನು ಪೂಜಿಸಿದರೆ ಅಗ್ನಿಷ್ಟೋಮ ಫಲವನ್ನು ಹೊಂದಿ ದೇವಲೋಕಕ್ಕೆ ಹೋಗುವನು.

೫೦. ಚತುರ್ಮುಖನು ಯಜ್ಞಮಾಡುವಾಗ ದಾನಕ್ಕಾಗಿ ಪಾತಾಲಲೋಕದಿಂದ ಗೋವುಗಳನ್ನು ಪೃಥಿವಿಗೆ ತಂದ ಪೃಥಿವೀವಿವರದ ದ್ವಾರದಲ್ಲಿ ಗಣಪತಿಯು ಸಾಕ್ಷಾತ್ತಾಗಿ ನೆಲಸಿರುವನು. ಆ ಗಣಪತಿಯನ್ನು ದರ್ಶನಮಾಡಿ ಪೂಜಿಸಿದರೆ ಅವನು ಯಜ್ಞಫಲವನ್ನು ಹೊಂದುವನು.

ಕಾಮೇಶ್ವರಸ್ಯ ತೀರ್ಥೇ ತು ಸ್ನಾತ್ವಾ ಶ್ರದ್ಧಾ ಸಮನ್ವಿತಃ ।
ಸರ್ವವ್ಯಾಧಿವಿನಿರ್ಮುಕ್ತೋ ಬ್ರಹ್ಮ ಸಂಪ್ರಾಪ್ನೋತಿ ಶಾಶ್ವತಂ ॥ ೫೧ ॥

ಸ್ನಾತಸ್ಯ ಮಾತೃತೀರ್ಥೇ ತು ಶ್ರದ್ಧಯಾಭ್ಯರ್ಚ್ಯ ತಸ್ಯ ತು ।
ಆಸಪ್ತಮಂ ಕುಲಂ ದೇವಿ ವರ್ಧತೇ ಶ್ರೀರನುತ್ತಮಾ ॥ ೫೨ ॥

ತತಃ ಸೀತಾವನಂ ಗಚ್ಛೇತ್ತತ್ರ ತೀರ್ಥಂ ಮಹಚ್ಛುಭೇ ।
ಪುನಾತಿ ದರ್ಶನಾದೇವ ಪುರುಷಾನೇಕವಿಂಶತಿಂ ॥ ೫೩ ॥

ಕೇಶಾನಭ್ಯುಕ್ಷ್ಯ ವೈ ತತ್ರ ಪೂತೋ ಭವತಿ ಪಾಪತಃ ।
ದಶಾಶ್ವಮೇಧಿಕಂ ತತ್ರ ತೀರ್ಥಂ ತ್ರೈಲೋಕ್ಯವಿಶ್ರುತಂ ॥ ೫೪ ॥

---

೫೧. ಕಾಮೇಶ್ವರತೀರ್ಥದಲ್ಲಿ ಭಕ್ತಿಯಿಂದ ಸ್ನಾನಮಾಡಿದರೆ ಸಕಲ ವ್ಯಾಧಿಗಳನ್ನೂ ನಾಶಮಾಡಿಕೊಂಡು ಶಾಶ್ವತನಾದ ಬ್ರಹ್ಮನನ್ನು ಹೊಂದುವನು.

೫೨. ದೇವೀ! ಅಲ್ಲಿರುವ ಮಾತೃತೀರ್ಥದಲ್ಲಿ ಸ್ನಾನಮಾಡಿ ಶ್ರದ್ಧೆಯಿಂದ ಪೂಜಿಸಿದರೆ ಆವನ ಏಳು ಕುಲಗಳು ಉದ್ಧಾರವಾಗುವುದು ಮಾತ್ರವೇ ಅಲ್ಲದೆ ಅವನಿಗೆ ಉತ್ತಮಸಂಪತ್ತೂ ದೊರೆಯುವುದು.

೫೩. ಶೋಭನೇ! ಅಲ್ಲಿಂದ ಸೀತಾವನಕ್ಕೆ ಹೋಗಬೇಕು. ಅಲ್ಲಿರುವ ಮಹಾತೀರ್ಥವನ್ನು ದರ್ಶನಮಾಡುವ ಮಾತ್ರದಿಂದ ಅದು ಅವನವಂಶದಲ್ಲಿ ಇಪ್ಪತ್ತೊಂದು ತಲೆಗಳನ್ನು ಪರಿಶುದ್ಧಮಾಡುವುದು.

೫೩-೫೪. ಆ ತೀರ್ಥೋದಕದಿಂದ ತಲೆಯಕೂದಲನ್ನು ಪ್ರೋಕ್ಷಿಸಿಕೊಂಡದ್ದೇ ಆದರೆ ಅವನು ಪಾಪಗಳನ್ನು ಪರಿಹರಿಸಿಕೊಂಡು ಪರಿಶುದ್ಧನಾಗುವನು. ಅಲ್ಲಿಯೇ ದಶಾಶ್ವಮೇಧಿಕವೆಂಬ ಮೂರುಲೋಕಗಳಲ್ಲಿಯೂ ವಿಖ್ಯಾತವಾದ ತೀರ್ಥವಿದೆ.

೫೪-೫೫. ಆ ತೀರ್ಥವನ್ನು ದರ್ಶನಮಾಡುವ ಮಾತ್ರದಿಂದ ಅವನಿಗೆ ಪಾಪವಿಮೋಚನೆಯಾಗುವುದು. ಬ್ರಹ್ಮಕುಮಾರೀ! ಪುನಃ ಮನುಷ್ಯನಾಗಿ

ದರ್ಶನಾತ್ತಸ್ಯ ತೀರ್ಥಸ್ಯ ಮುಕ್ತೋ ಭವತಿ ಕಿಲ್ಬಿಷೈಃ ।
ಮಾನುಷಾಖ್ಯಂ ತತಸ್ತೀರ್ಥಂ ಪ್ರಾಪ್ಯ ಸ್ನಾನಂ ಸಮಾಚರೇತ್ ॥ ೫೫ ॥

ಯದೀಚ್ಛೇನ್ಮಾನುಷಂ ಜನ್ಮ ಪುನಶ್ಚ ವಿಧಿನಂದಿನಿ ।
ಮಾನುಷಾಚ್ಚ ತತಸ್ತೀರ್ಥಾತ್ಕ್ರೋಶಮಾತ್ರೇ ಮಹಾನದೀ ॥ ೫೬ ॥

ಆಪಗಾ ನಾಮ ವಿಖ್ಯಾತಾ ತತ್ರ ಸ್ನಾತ್ವಾ ವಿಧಾನತಃ ।
ಶ್ಯಾಮಾಕಂ ಪಯಸಾ ಸಿದ್ಧಂ ಭೋಜಯೇದ್ದ್ವಿಜಸತ್ತಮಾನ್ ॥ ೫೭ ॥

ತಸ್ಯ ಪಾಪಂ ಕ್ಷಯಂ ಯಾತಿ ಪಿತೄಣಾಂ ಶ್ರಾದ್ಧತೋ ಗತಿಃ ।
ನಭಸ್ಯೇ ಮಾಸಿ ಕೃಷ್ಣೇ ತು ಪಿತೃಪಕ್ಷೇ ಮಹಾಲಯೇ ॥ ೫೮ ॥

ಚತುರ್ದಶ್ಯಾಂ ತು ಮಧ್ಯಾಹ್ನೇ ಪಿಂಡದೋ ಮುಕ್ತಿಮಾಪ್ನುಯಾತ್ ।
ಬ್ರಾಹ್ಮೋದುಂಬರಕಂ ಗಚ್ಛೇದ್ಬ್ರಹ್ಮಣಃ ಸ್ಥಾನಕಂ ತತಃ ॥ ೫೯ ॥

---

ಹುಟ್ಟಬೇಕೆಂದು ಬಯಸುವವನು ಅಲ್ಲಿಂದ ಮಾನುಷವೆಂಬ ತೀರ್ಥಕ್ಕೆ ಹೋಗಿ ಸ್ನಾನಮಾಡಬೇಕು.

೫೫-೫೮. ಆ ಮಾನುಷತೀರ್ಥಕ್ಕೆ ಒಂದು ಹರಿದಾರಿದೂರದಲ್ಲಿ ಆಪಗಾ ಎಂದು ವಿಖ್ಯಾತವಾದ ನದಿಯಿದೆ. ಅಲ್ಲಿ ವಿಧಿವತ್ತಾಗಿ ಸ್ನಾನಮಾಡಿ ಹಾಲಿನಿಂದ ಸಾಮೆಯ ಪಾಯಸವನ್ನು ಸಿದ್ಧಪಡಿಸಿ ಬ್ರಾಹ್ಮಣಶ್ರೇಷ್ಠರಿಗೆ ಭೋಜನ ಮಾಡಿಸುವವನ ಪಾಪವೆಲ್ಲವೂ ಹೋಗುವುದು. ಅಲ್ಲಿ ಪಿತೃಶ್ರಾದ್ಧಮಾಡಿದರೆ ಅವರಿಗೆ ಸದ್ಗತಿಯಾಗುವುದು.

೫೮-೫೯. ಭಾದ್ರಪದ ಕೃಷ್ಣಪಕ್ಷವಾದ ಪಿತೃಪಕ್ಷದಲ್ಲಿ ಚತುರ್ದಶಿಯ ದಿವಸ ಮಧ್ಯಾಹ್ನಕಾಲದಲ್ಲಿ ಮಹಾಲಯಶ್ರಾದ್ಧಮಾಡಿ ಪಿಂಡಪ್ರದಾನಮಾಡಿದರೆ ಅವನು ಮೋಕ್ಷವನ್ನು ಹೊಂದುವನು.

ತತ್ರ ಬ್ರಹ್ಮರ್ಷಿಕುಂಡೇಷು ಸ್ನಾತಃ ಸೋಮಫಲಂ ಲಭೇತ್ ।
ವೃದ್ಧಕೇದಾರಕೇ ತೀರ್ಥೇ ಸ್ಥಾಣುಂ ದಂಡಿಸಮನ್ವಿತಂ ॥ ೬೦ ॥

ಸಮರ್ಚ್ಯ ಯತ್ರ ಚಾಪ್ನೋತಿ ನರೋಽಂತರ್ಧಾನಮಿಚ್ಛಯಾ ।
ಕಲಶ್ಯಾಂ ಚ ತತೋ ಗಚ್ಛೇದ್ಯತ್ರ ದೇವೀ ಸ್ವಯಂ ಸ್ಥಿತಾ ॥ ೬೧ ॥

ಸ್ನಾತ್ವಾಸ್ಯಾಮಂಬಿಕಾಂ ಪ್ರಾರ್ಚ್ಯ ತರೇತ್ಸಂಸಾರಸಾಗರಂ ।
ಸರಕೇ ಕೃಷ್ಣಭೂತಾಯಾಂ ದೃಷ್ಟ್ವಾ ದೇವಂ ಮಹೇಶ್ವರಂ ॥ ೬೨ ॥

ಶೈವಂ ಪದಮವಾಪ್ನೋತಿ ನರಃ ಶ್ರದ್ಧಾಸಮನ್ವಿತಃ ।
ತಿಸ್ರಃ ಕೋಟ್ಯಸ್ತು ತೀರ್ಥಾನಾಂ ಸರಕೇ ಸಂತಿ ಭಾಮಿನಿ ॥ ೬೩ ॥

---

೫೯-೬೦. ಅನಂತರ ಬ್ರಹ್ಮನ ನೆಲೆಯಾದ ಬ್ರಹ್ಮೋದುಂಬರವೆಂಬ ಕ್ಷೇತ್ರಕ್ಕೆ ಹೋಗಬೇಕು. ಅಲ್ಲಿರುವ ಬ್ರಹ್ಮರ್ಷಿಕುಂಡಗಳಲ್ಲಿ ಸ್ನಾನಮಾಡಿದವನು ಸೋಮಯಾಗದ ಫಲವನ್ನು ಹೊಂದುವನು.

೬೦-೬೧. ಅಲ್ಲಿಂದ ವೃದ್ಧಕೇದಾರವೆಂಬ ತೀರ್ಥಕ್ಕೆ ಹೋಗಿ ಮನುಷ್ಯನು ಸ್ನಾನಮಾಡಿ ದಂಡಿಯಿಂದಕೂಡಿರುವ ರುದ್ರದೇವನನ್ನು ಪೂಜಿಸಿದರೆ ಅವನು ತನ್ನ ಇಚ್ಛಾನುಸಾರವಾಗಿ ಅಂತರ್ಧಾನಶಕ್ತಿಯನ್ನು ಹೊಂದುವನು.

೬೧-೬೨. ಅನಂತರ ದೇವಿಯು ಸ್ವತಃ ಸನ್ನಿಹಿತಳಾಗಿರುವ ಕಲಶೀ ಎಂಬ ಕ್ಷೇತ್ರಕ್ಕೆಹೋಗಿ ಆ ತೀರ್ಥದಲ್ಲಿ ಸ್ನಾನಮಾಡಿ ದುರ್ಗಾಂಬಿಕೆಯನ್ನು ಪೂಜಿಸಿದರೆ ಅವನು ಸಂಸಾರವೆಂಬ ಸಮುದ್ರವನ್ನು ದಾಟುವನು.

೬೨-೬೩. ಅಲ್ಲಿಂದ ಸರಕವೆಂಬ ಕ್ಷೇತ್ರಕ್ಕೆಹೋಗಿ ಕೃಷ್ಣಪಕ್ಷ ಚತುರ್ದಶಿಯ ದಿವಸ ಶ್ರದ್ಧಾಯುಕ್ತನಾಗಿ ಮಹೇಶ್ವರದೇವನ ದರ್ಶನಮಾಡಿದ ಮನುಷ್ಯನು ಶಿವಲೋಕವನ್ನು ಹೊಂದುವನು. ಸುಂದರಿಯೇ! ಆ ಸರಕಕ್ಷೇತ್ರದಲಿ ಮೂರುಕೋಟಿ ತೀರ್ಥಗಳಿವೆ.

ರುದ್ರಕೋಟಿಸ್ತಥಾ ಕೂಪೇ ಸರೋಮಧ್ಯೇ ವ್ಯವಸ್ಥಿತಾ ।
ತಸ್ಮಿನ್ ಸರಸಿ ಯಃ ಸ್ನಾತ್ವಾ ರುದ್ರಕೋಟಿಂ ಸ್ಮರೇನ್ನರಃ ॥ ೬೪ ॥

ಪೂಜಿತಾ ರುದ್ರಕೋಟಿಸ್ತು ತೇನ ಸ್ಯಾನ್ನಾತ್ರ ಸಂಶಯಃ ।
ಇಡಾಸ್ಪದಂ ಚ ತತ್ರೈವ ತೀರ್ಥಂ ಪಾಪಪ್ರಣಾಶನಂ ॥ ೬೫ ॥

ಯಸ್ಮಿನ್ಮುಕ್ತಿಮವಾಪ್ನೋತಿ ದರ್ಶನಾದೇವ ಮಾನವಃ ।
ತತ್ರಸ್ಥಾನರ್ಚಯಿತ್ವಾ ಚ ದೇವಾನ್ಪಿತೃಗಣಾನಪಿ ॥ ೬೬ ॥

ನ ದುರ್ಗತಿಮವಾಪ್ನೋತಿ ಮನಸಾ ಚಿಂತಿತಂ ಲಭೇತ್ ।
ಕೇದಾರಂ ಚ ಮಹಾತೀರ್ಥಂ ಸರ್ವಕಲ್ಮಷನಾಶನಂ ॥ ೬೭ ॥

ತತ್ರ ಸ್ನಾತ್ವಾ ಚ ಪುರುಷಃ ಸರ್ವದಾನಫಲಂ ಲಭೇತ್ ।
ಅನ್ಯ ಜನ್ಮೇತಿ ವಿಖ್ಯಾತಂ ಸರಕಸ್ಯ ತು ಪೂರ್ವತಃ ॥ ೬೮ ॥

---

೬೪-೬೫. ಆ ಸರೋವರಮಧ್ಯದಲ್ಲಿರುವ ಬಾವಿಯಲ್ಲಿ ರುದ್ರಕೋಟಿಯು ಸನ್ನಿಹಿತವಾಗಿದೆ. ಆ ಸರೋವರ ಮಧ್ಯದಲ್ಲಿ ಸ್ನಾನಮಾಡಿ ರುದ್ರಕೋಟಿಯನ್ನು ಸ್ಮರಿಸುವ ಮನುಷ್ಯನು ಕೋಟಿರುದ್ರರನ್ನು ಪೂಜಿಸಿದ ಫಲಕ್ಕೆ ಭಾಗಿಯಾಗುವನು. ಈ ವಿಷಯದಲ್ಲಿ ಸಂದೇಹವಿಲ್ಲ.

೬೫-೬೬. ಅಲ್ಲಿಯೇ ಪಾಪವನ್ನು ನಾಶಪಡಿಸುವಂತಹ ಇಡಾಸ್ಪದವೆಂಬ ತೀರ್ಥವಿದೆ. ಆ ತೀರ್ಥವನ್ನು ದರ್ಶನಮಾಡುವ ಮಾತ್ರದಿಂದಲೇ ಮಾನವನು ಮುಕ್ತಿಯನ್ನು ಪಡೆಯುವನು.

೬೬-೬೭. ಆ ತೀರ್ಥದಲ್ಲಿರುವ ದೇವತೆಗಳನ್ನು ಮತ್ತು ಪಿತೃಗಳನ್ನೂ ಸಹ ಪೂಜಿಸುವುದರಿಂದ ದುರ್ಗತಿಗೀಡಾಗುವುದಿಲ್ಲ. ಅವನ ಮನೋಭೀಷ್ಟವೆಲ್ಲವೂ ಸಿದ್ಧಿಸುವುದು.

೬೭-೬೮. ಅಲ್ಲಿ ಸಕಲದೋಷಗಳನ್ನೂ ನಾಶಪಡಿಸುವಂತಹ ಕೇದಾರವೆಂಬ ಮಹಾತೀರ್ಥವಿದೆ. ಮನುಷ್ಯನು ಅಲ್ಲಿ ಸ್ನಾನಮಾಡಿದ್ದೇ ಆದರೆ ಸಕಲ ದಾನಗಳ ಫಲವೂ ಲಭಿಸುವುದು.

ಸರೋ ಮಹತ್ಸ್ವಚ್ಛಜಲಂ ದೇವೌ ಹರಿಹರೌ ಯತಃ ।
ವಿಷ್ಣುಶ್ಚತುರ್ಭುಜಸ್ತತ್ರ ಲಿಂಗಾಕಾರಃ ಶಿವಃ ಸ್ಥಿತಃ ॥ ೬೯ ॥

ತತ್ರ ಸ್ನಾತ್ವಾ ಚ ತೌ ದೃಷ್ಟ್ವಾ ಸ್ತುತ್ವಾ ಮೋಕ್ಷಂ ಲಭೇನ್ನರಃ ।
ನಾಗಹ್ರದೇ ತತೋ ಗತ್ವಾ ಸ್ನಾತ್ವಾ ಚೈತ್ರೇ ಸಿತಾಂತಕೇ ॥ ೭೦ ॥

ಶ್ರಾದ್ಧದೋ ಮುಕ್ತಿಮಾಪ್ನೋತಿ ಯಮಲೋಕಂ ನ ಪಶ್ಯತಿ ।
ತತಸ್ತ್ರಿವಿಷ್ಟಪಂ ಗಚ್ಛೇತ್ತೀರ್ಥಂ ದೇವನಿಷೇವಿತಂ ॥ ೭೧ ॥

ಯತ್ರ ವೈತರಣೀ ಪುಣ್ಯಾ ನದೀ ಪಾಪಪ್ರಮೋಚನೀ ।
ತತ್ರ ಸ್ನಾತ್ವಾರ್ಚಯಿತ್ವಾ ಚ ಶೂಲಪಾಣಿಂ ವೃಷಧ್ವಜಂ ॥ ೭೨ ॥

ಸರ್ವಪಾಪವಿಶುದ್ಧಾತ್ಮಾ ಗಚ್ಛತ್ಯೇವ ಪರಾಂ ಗತಿಂ ।
ರಸಾವರ್ತೇ ನರಃ ಸ್ನಾತ್ವಾ ಸಿದ್ಧಿಮಾಪ್ನೋತ್ಯನುತ್ತಮಾಂ ॥ ೭೩ ॥

---

೬೯-೭೦. ಸರಕತೀರ್ಥಕ್ಕೆ ಪೂರ್ವಭಾಗದಲ್ಲಿ ನಿರ್ಮಲೋದಕದಿಂದ ತುಂಬಿರುವ ಅನ್ಯಜನ್ಮವೆಂದು ವಿಖ್ಯಾತವಾದ ದೊಡ್ಡ ಸರೋವರವಿದೆ. ಅಲ್ಲಿ ಚತುರ್ಭುಜನಾದ ವಿಷ್ಣುವೂ, ಲಿಂಗರೂಪಿಯಾದ ಶಿವನೂ ಇರುವರು. ಆ ಸರೋವರದಲ್ಲಿ ಸ್ನಾನಮಾಡಿ ಆ ದೇವರಿಬ್ಬರನ್ನೂ ಸಂದರ್ಶಿಸಿ ಸ್ತೋತ್ರಮಾಡಿದರೆ ಮನುಷ್ಯನು ಮೋಕ್ಷವನ್ನು ಹೊಂದುವನು.

೭೦-೭೧. ಅಲ್ಲಿಂದ ಹೊರಟು ನಾಗಹ್ರದದಲ್ಲಿ ಸ್ನಾನಮಾಡಿ ಚೈತ್ರಶುಕ್ಲಪಕ್ಷದಕೊನೆಯಲ್ಲಿ ಶ್ರಾದ್ಧಮಾಡುವವನು ಯಮಲೋಕದ ದರ್ಶನವನ್ನೂ ಸಹ ಮಾಡದೆ ಮುಕ್ತಿಯನ್ನು ಹೊಂದುವನು. ತರುವಾಯ ದೇವತೆಗಳಿಂದಲೂ ಸೇವಿಸಲ್ಪಟ್ಟ ತ್ರಿವಿಷ್ಟಪವೆಂಬ ತೀರ್ಥಕ್ಕೆ ಹೋಗಬೇಕು.

೭೨-೭೩. ಆ ತೀರ್ಥದಲ್ಲಿ ಪಾಪಗಳನ್ನು ಹೋಗಲಾಡಿಸಿ ಪುಣ್ಯವನ್ನು ಕೊಡುವ ವೈತರಣೀ ಎಂಬ ನದಿಯಿದೆ. ಅಲ್ಲಿ ಸ್ನಾನಮಾಡಿ ವೃಷಧ್ವಜನಾದ ಶೂಲಪಾಣಿಯನ್ನು ಪೂಜಿಸಿದಲ್ಲಿ ಸಕಲಪಾಪಗಳನ್ನೂ ಕಳೆದುಕೊಂಡು ಪರಿಶುದ್ಧನಾಗಿ ಉತ್ತಮಗತಿಯನ್ನು ಹೊಂದುವನು. ಅನಂತರ ಮನುಷ್ಯನು ರಸಾವರ್ತವೆಂಬ ತೀರ್ಥದಲ್ಲಿ ಸ್ನಾನಮಾಡಿದರೆ ಉತ್ತಮಸಿದ್ಧಿಯನ್ನು ಹೊಂದುವನು.

ಚೈತ್ರಸ್ಯ ಸಿತಭೂತಾಯಾಂ ಸ್ನಾನಂ ಕೃತ್ವಾ ವಿಲೇಪಕೇ ।
ಪೂಜಯಿತ್ವಾ ಶಿವಂ ಭಕ್ತ್ಯಾ ಸರ್ವಪಾಪೈಃ ಪ್ರಮುಚ್ಯತೇ ॥ ೭೪ ॥

ತತೋ ಗಚ್ಛೇನ್ನರೋ ದೇವಿ ಫಲಕೀವನಮುತ್ತಮಂ ।
ಯತ್ರ ದೇವಾಃ ಸಗಂಧರ್ವಾಸ್ತಪ್ಯಂತೇ ಪರಮಂ ತಪಃ ॥ ೭೫ ॥

ತತ್ರ ನದ್ಯಾಂ ದೃಷದ್ವತ್ಯಾಂ ನರಃ ಸ್ನಾತ್ವಾ ವಿಧಾನತಃ ।
ದೇವಾನ್ ಪಿತೄಂಸ್ತರ್ಪಯಿತ್ವಾ ಹ್ಯಗ್ನಿಷ್ಟೋಮಾತಿರಾತ್ರಭಾಕ್ ॥ ೭೬ ॥

ದರ್ಶೇ ತಥಾ ವಿಧುದಿನೇ ತತ್ರ ಶ್ರಾದ್ಧಂ ಕರೋತಿ ಯಃ ।
ಗಯಾಶ್ರಾದ್ಧಸಮಂ ತತ್ರ ಲಭತೇ ಫಲಮುತ್ತಮಂ ॥ ೭೭ ॥

ಶ್ರಾದ್ಧೇ ಫಲಮರಣ್ಯಸ್ಯ ಸ್ಮರಣಂ ಪಿತೃತೃಪ್ತಿದಂ ।
ಪಾಣಿಖಾತೇ ತತಸ್ತೀರ್ಥೇ ಪಿತೄನ್ ಸಂತರ್ಪ್ಯ ಮಾನವಃ ॥ ೭೮ ॥

---

೭೪. ಚೈತ್ರಮಾಸದ ಶುಕ್ಲಪಕ್ಷ ಚತುರ್ದಶಿಯ ದಿನ ವಿಲೇಪಕತೀರ್ಥದಲ್ಲಿ ಸ್ನಾನಮಾಡಿ ಭಕ್ತಿಯಿಂದ ಶಿವನನ್ನು ಪೂಜಿಸುವ ಮನುಷ್ಯನು ಸಕಲಪಾಪಗಳಿಂದಲೂ ಮುಕ್ತನಾಗುವನು.

೭೫. ದೇವೀ ! ಅನಂತರ ದೇವತೆಗಳು ಗಂಧರ್ವರು ಉತ್ತಮತಪಸ್ಸನ್ನು ಮಾಡುತ್ತಿರುವ, ಶ್ರೇಷ್ಠವಾದ ಫಲಕೀವನಕ್ಕೆ ಹೋಗಬೇಕು.

೭೬. ಯಾತ್ರಿಕನು ಅಲ್ಲಿ ಹರಿಯುತ್ತಿರುವ ದೃಷದ್ವತೀ ನದಿಯಲ್ಲಿ ವಿಹಿತ ರೀತಿಯಿಂದ ಸ್ನಾನಮಾಡಿ ದೇವಪಿತೃಗಳಿಗೆ ತರ್ಪಣಕೊಟ್ಟರೆ ಅವನು ಅಗ್ನಿಷ್ಟೋಮ ಮತ್ತು ಅತಿರಾತ್ರಯಾಗಗಳ ಫಲವನ್ನು ಹೊಂದುವನು.

೭೭. ಅಲ್ಲಿ ಅಮಾವಾಸ್ಯೆ ಮತ್ತು ಪೂರ್ಣಿಮಾದಿನಗಳಲ್ಲಿ ಶ್ರಾದ್ಧಮಾಡುವವನು ಗಯಾಶ್ರಾದ್ಧಕ್ಕೆ ಸಮಾನವಾದ ಉತ್ತಮಫಲವನ್ನು ಹೊಂದುವನು.

೭೮-೭೯. ಶ್ರಾದ್ಧಕಾಲದಲ್ಲಿ ಈ ಫಲಕೀವನವನ್ನು ಸ್ಮರಿಸುವಮಾತದಿಂದಲೂ ಪಿತೃಗಳು ತೃಪ್ತಿಹೊಂದುವರು. ತರುವಾಯ ಪಾಣಿಖಾತವೆಂಬ ತೀ

**ರಾಜಸೂಯಫಲಂ ಪ್ರಾಪ್ಯ ಸಾಂಖ್ಯಂ ಯೋಗಂ ಚ ವಿಂದತಿ ।**
**ತತಸ್ತು ಮಿಶ್ರಕೇ ತೀರ್ಥೇ ಸ್ನಾತ್ವಾ ಮರ್ತ್ಯೋ ವಿಧಾನತಃ ॥ ೭೯ ॥**

**ಸರ್ವತೀರ್ಥಫಲಂ ಪ್ರಾಪ್ಯ ಲಭತೇ ಗತಿಮುತ್ತಮಾಂ ।**
**ತತೋ ವ್ಯಾಸವನೇ ಗತ್ವಾ ಸ್ನಾತ್ವಾ ತೀರ್ಥೇ ಮನೋಜವೇ ॥ ೮೦ ॥**

**ಮನೀಷಿಣಂ ವಿಭುಂ ದೃಷ್ಟ್ವಾ ಮನಸಾ ಚಿಂತಿತಂ ಲಭೇತ್ ।**
**ಗತ್ವಾ ಮಧುವನಂ ಚೈವ ದೇವ್ಯಾಸ್ತೀರ್ಥೇ ನರಃ ಶುಚಿಃ ॥ ೮೧ ॥**

**ಸ್ನಾತ್ವಾ ದೇವಾನೃಷೀನಿಷ್ಟ್ವಾ ಲಭತೇ ಸಿದ್ಧಿಮುತ್ತಮಾಂ ।**
**ಕೌಶಿಕೀಸಂಗಮೇ ತೀರ್ಥೇ ದೃಷದ್ವತ್ಯಾಂ ನರಃ ಪ್ಲುತಃ ॥ ೮೨ ॥**

**ನಿಯತೋ ನಿಯತಾಹಾರಃ ಸರ್ವಪಾಪೈಃ ಪ್ರಮುಚ್ಯತೇ ।**
**ತತೋ ವ್ಯಾಸಸ್ಥಲೀಂ ಗಚ್ಛೇದ್ಯತ್ರ ವ್ಯಾಸೇನ ಧೀಮತಾ ॥ ೮೩ ॥**

---

ತೀರ್ಥಕ್ಕೆ ಹೋಗಿ ಪಿತೃತರ್ಪಣಮಾಡಿದ ಮನುಷ್ಯನು ರಾಜಸೂಯಯಾಗದ ಫಲವನ್ನು ಹೊಂದಿ ಜ್ಞಾನಯೋಗಗಳ ಸಿದ್ಧಿಯನ್ನು ಪಡೆಯುವನು.

೭೯-೮೦. ಆಮೇಲೆ ಮನುಷ್ಯನು ಮಿಶ್ರಕತೀರ್ಥದಲ್ಲಿ ವಿಧಾನೋಕ್ತ ಪ್ರಕಾರವಾಗಿ ಸ್ನಾನಮಾಡುವುದರಿಂದ ಸಕಲತೀರ್ಥಫಲಗಳನ್ನೂ ಹೊಂದಿ ಉತ್ತಮ ಪದವಿಯನ್ನು ಹೊಂದುವನು.

೮೦-೮೧. ಅಲ್ಲಿಂದ ವ್ಯಾಸವನಕ್ಕೆ ಹೋಗಿ ಮನೋಜವತೀರ್ಥದಲ್ಲಿ ಸ್ನಾನಮಾಡಿ ಮನೀಷಿಸ್ವಾಮಿಯನ್ನು ದರ್ಶನಮಾಡಿದರೆ ಅವನಿಗೆ ಇಷ್ಟಾರ್ಥಗಳು ಲಭಿಸುವುವು.

೮೧-೮೨. ಅಲ್ಲಿಂದ ಮಧುವನಕ್ಕೆ ಹೋಗಿ ದೇವೀತೀರ್ಥದಲ್ಲಿ ಸ್ನಾನಮಾಡಿ ಪರಿಶುದ್ಧನಾದ ಮನುಷ್ಯನು ಅಲ್ಲಿ ದೇವಋಷಿಗಳನ್ನು ಪೂಜಿಸಿದರೆ ಉತ್ತಮಸಿದ್ಧಿಯನ್ನು ಹೊಂದುವನು.

೮೨-೮೩. ದೃಷದ್ವತೀನದಿಯಲ್ಲಿರುವ ಕೌಶಿಕೀಸಂಗಮತೀರ್ಥದಲ್ಲಿ ಸ್ನಾನಮಾಡಿ ಮನುಷ್ಯನು ಜಿತೇಂದ್ರಿಯನಾಗಿ ಆಹಾರನಿಯಮವನ್ನಾಚರಿಸಿದರೆ ಸಕಲಪಾಪಗಳಿಂದಲೂ ಮುಕ್ತನಾಗುವನು.

ಪುತ್ರಶೋಕಾಭಿಭೂತೇನ ದೇಹತ್ಯಾಗೋ ವಿನಿಶ್ಚಿತಃ |
ಪುನರುತ್ಥಾಪಿತೋ ದೇವೈಸ್ತತ್ರ ಗತ್ವಾ ನ ಶೋಕಭಾಕ್ || ೮೪ ||

ಕಿಂದುಶೂಕೂಪಮಾಸಾದ್ಯ ತಿಲಪ್ರಸ್ಥಂ ಪ್ರದಾಪ್ಯ ಚ |
ಗಚ್ಛೇದ್ಧಿ ಪರಮಾಂ ಸಿದ್ಧಿಂ ಮೃತೋ ಮುಕ್ತಿಮವಾಪ್ನುಯಾತ್ || ೮೫ ||

ಅಹ್ನಂ ಚ ಮುದಿತಂ ಚೈವ ದ್ವೇ ತೀರ್ಥೇ ಭುವಿ ವಿಶ್ರುತೇ |
ತಯೋಃ ಸ್ನಾತ್ವಾ ವಿಧಾನೇನ ನತ್ವಾ ಕೋಟೀಶ್ವರಂ ಶಿವಂ || ೮೬ ||

ದೃಷ್ಟ್ವಾ ಶ್ರುತ್ವಾ ಶ್ರದ್ದಧಾನಃ ಕೋಟಿಯಜ್ಞಫಲಂ ಲಭೇತ್ |
ತತೋ ವಾಮನಕಂ ಗಚ್ಛೇತ್ತ್ರಿಷು ಲೋಕೇಷು ವಿಶ್ರುತಂ || ೮೭ ||

ಯತ್ರ ವಾಮನಜನ್ಮಾಭೂದ್ಬಲೇರ್ಯಜ್ಞಜಿಹೀರ್ಷಯಾ |
ತತ್ರ ವಿಷ್ಣುಪದೇ ಸ್ನಾತ್ವಾ ಪೂಜಯಿತ್ವಾ ಚ ವಾಮನಂ || ೮೮ ||

---

೮೩-೮೪. ಅಲ್ಲಿಂದ ವ್ಯಾಸಸ್ಥಲೀ ಎಂಬ ಕ್ಷೇತ್ರಕ್ಕೆ ಹೋಗಬೇಕು. ಅದು ಪುತ್ರಶೋಕದಿಂದ ಬಳಲಿ ದೇಹತ್ಯಾಗಮಾಡಲು ನಿಶ್ಚಯಿಸಿದ್ದ ಜ್ಞಾನಿಯಾದ ವ್ಯಾಸಮುನಿಯನ್ನು ದೇವತೆಗಳು ಪುನಃ ಉಜ್ಜೀವನಗೊಳಿಸಿರುವ ಕ್ಷೇತ್ರವು. ಅದರಯಾತ್ರೆಯಿಂದ ದುಃಖಪರಿಹಾರವಾಗುವುದು.

೮೫. ಅಲ್ಲಿಂದ ಕಿಂದುಶೂಕೂಪಕ್ಕೆ ಬಂದು ಒಂದು ಬಳ್ಳ ಎಳ್ಳನ್ನು ದಾನಮಾಡಿದರೆ ಪರಮಸಿದ್ಧಿಯುಂಟಾಗುವುದು. ಅವನು ಅಲ್ಲಿಯೇ ಮೃತನಾದರೆ ಮುಕ್ತಿಯನ್ನು ಪಡೆಯುವನು.

೮೬-೮೭. ಅಲ್ಲಿಯೇ ಅನ್ಹ, ಮುದಿತ ಎಂಬ ಲೋಕವಿಖ್ಯಾತವಾದ ಎರಡು ತೀರ್ಥಗಳಿವೆ. ಅವುಗಳಲ್ಲಿ ವಿಧಿವತ್ತಾಗಿ ಸ್ನಾನಮಾಡಿ ಕೋಟೀಶ್ವರವೆಂಬ ರುದ್ರದೇವರನ್ನು ಸಂದರ್ಶಿಸಿ, ನಮಸ್ಕಾರಮಾಡಿ ಶ್ರದ್ಧಾವಂತನಾಗಿ ಸ್ತೋತ್ರಮಾಡುವವನು ಕೋಟಿಯಜ್ಞಗಳ ಫಲವನ್ನು ಹೊಂದುವನು.

೮೭-೮೯. ಅಲ್ಲಿಂದ ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾದ ವಾಮನ ಕ್ಷೇತ್ರಕ್ಕೆ ಹೋಗಬೇಕು. ಬಳಿಕ ಬಲಿಚಕ್ರವರ್ತಿಯ ಯಜ್ಞವನ್ನು ನಾಶಪಡಿ

ಸರ್ವಪಾಪವಿಶುದ್ಧಾತ್ಮಾ ವಿಷ್ಣುಲೋಕೇ ಮಹೀಯತೇ ।
ಜ್ಯೇಷ್ಠಾಶ್ರಮಂ ಚ ತತ್ರೈವ ಸರ್ವಪಾತಕನಾಶನಂ ॥ ೮೯ ॥

ಜ್ಯೇಷ್ಠಸ್ಯ ಶುಕ್ಲೈಕಾದಶ್ಯಾಂ ಸೋಪವಾಸಃ ಪರೇಹನಿ ।
ಸ್ನಾತ್ವಾ ತತ್ರ ವಿಧಾನೇನ ಶ್ರೇಷ್ಠತ್ವಂ ಲಭತೇ ನೃಷು ॥ ೯೦ ॥

ಶ್ರಾದ್ಧೇ ತತ್ರ ಕೃತೇ ದೇವಿ ಪಿತೄಣಾಮತಿತುಷ್ಟಿದಂ ।
ತತ್ರೈವ ಕೋಟಿತೀರ್ಥಂ ಚ ತ್ರಿಷು ಲೋಕೇಷು ವಿಶ್ರುತಂ ॥ ೯೧ ॥

ತಸ್ಮಿಂಸ್ತೀರ್ಥೇ ನರಃ ಸ್ನಾತ್ವಾ ಕೋಟಿಯಜ್ಞಫಲಂ ಲಭೇತ್ ।
ತತ್ರ ಕೋಟೀಶ್ವರಂ ನಾಮ ದೇವದೇವಂ ಮಹೇಶ್ವರಂ ॥ ೯೨ ॥

---

ಸುವಸಲುವಾಗಿ ವಿಷ್ಣುವು ವಾಮನಾವತಾರಮಾಡಿದ ಆ ಸ್ಥಳದಲ್ಲಿರುವ ವಿಷ್ಣು ಪದ ತೀರ್ಥದಲ್ಲಿ ಸ್ನಾನಮಾಡಿ ವಾಮನದೇವನನ್ನು ಪೂಜಿಸುವುದರಿಂದ ಸಕಲ ಪಾಪಗಳೂ ಹೋಗಿ ಶುದ್ಧಾಂತಃಕರಣನಾಗಿ ವಿಷ್ಣುಲೋಕವನ್ನು ಹೊಂದಿ ಅಲ್ಲಿ ಸತ್ಕರಿಸಲ್ಪಡುವನು.

೮೯-೯೦. ಅಲ್ಲಿಯೇ ಸಕಲಪಾಪಗಳನ್ನೂ ನಾಶಪಡಿಸುವಂತಹ ಜ್ಯೇಷ್ಠಾಶ್ರಮವೆಂಬ ತೀರ್ಥವಿದೆ. ಜೇಷ್ಠಮಾಸದ ಶುಕ್ಲೈಕಾದಶಿಯ ದಿನ ಉಪವಾಸ ಮಾಡಿ ಮಾರನೆಯದಿನ ಆ ತೀರ್ಥದಲ್ಲಿ ವಿಹಿತಕ್ರಮದಿಂದ ಸ್ನಾನಮಾಡಿದರೆ ಅವನು ಮನುಷ್ಯರಲ್ಲಿ ಶ್ರೇಷ್ಠನಾಗುವನು.

೯೧. ದೇವೀ! ಆ ತೀರ್ಥದಲ್ಲಿ ಶ್ರಾದ್ಧವನ್ನುಮಾಡುವುದು ಪಿತೃಗಳಿಗೆ ಅತ್ಯಂತ ತೃಪ್ತಿಯನ್ನುಂಟುಮಾಡುವುದು. ಅಲ್ಲಿಯೇ ಮೂರುಲೋಕಗಳಲ್ಲಿಯೂ ಪ್ರಸಿದ್ಧವಾದ ಕೋಟಿತೀರ್ಥವಿದೆ.

೯೨-೯೩. ಮನುಷ್ಯನು ಆ ತೀರ್ಥದಲ್ಲಿ ಸ್ನಾನಮಾಡಿದರೆ ಕೋಟಿ ಯಜ್ಞಗಳ ಫಲವು ಬರುವುದು. ಅಲ್ಲಿರುವ ದೇವದೇವನಾದ ಕೋಟೀಶ್ವರನೆಂಬ ಮಹೇಶ್ವರನನ್ನು ವಿಧಿವತ್ತಾಗಿ ಪೂಜಿಸಿದರೆ ಆದೇವನ ಅನುಗ್ರಹದಿಂದ ಗಣಾಧಿ

ಸಮಭ್ಯರ್ಚ್ಯ ವಿಧಾನೇನ ಗಾಣಾಪತ್ಯಮವಾಪ್ನುಯಾತ್ ।
ಸೂರ್ಯತೀರ್ಥಂ ಚ ತತ್ರೈವ ಸ್ನಾತ್ವಾತ್ರ ರವಿಲೋಕಭಾಕ್ ॥ ೯೩ ॥

ಕುಲೋತ್ತಾರಣಕೇ ತೀರ್ಥೇ ಗತ್ವಾ ಸ್ನಾನಂ ಸಮಾಚರನ್ ।
ಉದ್ಧೃತ್ಯ ಸ್ವಕುಲಂ ಸ್ವರ್ಗೇ ಕಲ್ಪಾಂತಂ ನಿವಸೇತ್ತತಃ ॥ ೯೪ ॥

ಪವನಸ್ಯ ಹ್ರದೇ ಸ್ನಾತ್ವಾ ದೃಷ್ಟ್ವಾ ದೇವಂ ಮಹೇಶ್ವರಂ ।
ವಿಮುಕ್ತಃ ಸರ್ವಪಾಪೇಭ್ಯಃ ಶೈವಂ ಪದಮವಾಪ್ನುಯಾತ್ ॥ ೯೫ ॥

ಸ್ನಾತ್ವಾ ಚ ಹನುಮತ್ತೀರ್ಥೇ ನರೋ ಮುಕ್ತಿಮವಾಪ್ನುಯಾತ್ ।
ಶಾಲಹೋತ್ರಸ್ಯ ರಾಜರ್ಷೇಸ್ತೀರ್ಥೇ ಸ್ನಾತ್ವಾಘವರ್ಜಿತಃ ॥ ೯೬ ॥

ಶ್ರೀಕುಂಭಾಖ್ಯೇ ಸರಸ್ವತ್ಯಾಸ್ತೀರ್ಥೇ ಸ್ನಾತ್ವಾಥ ಯಜ್ಞಭಾಕ್ ।
ಸ್ನಾತಶ್ಚ ನೈಮಿಷೇ ಕುಂಡೇ ನೈಮಿಷಸ್ನಾನಪುಣ್ಯಭಾಕ್ ॥ ೯೭ ॥

---

ಪತಿಯಾಗುವನು. ಅಲ್ಲಿಯೇ ಇರುವ ಸೂರ್ಯತೀರ್ಥದಲ್ಲಿ ಸ್ನಾನಮಾಡುವುದ ರಿಂದ ಮನುಷ್ಯನು ಸೂರ್ಯಲೋಕವನ್ನು ಹೊಂದುವನು.

೯೪. ಅಲ್ಲಿಂದ ಹೊರಟು ಕುಲೋತ್ತಾರಣ ತೀರ್ಥದಲ್ಲಿ ಸ್ನಾನಮಾಡು ವವನು ತನ್ನ ವಂಶವನ್ನೇ ಉದ್ಧಾರಮಾಡಿ ಕಲ್ಪಾವಸಾನದವರೆಗೂ ಸ್ವರ್ಗಲೋಕ ದಲ್ಲಿ ವಾಸಮಾಡುವನು.

೯೫. ಅದರ ಸಮೀಪದಲ್ಲಿರುವ ಪವನಹ್ರದದಲ್ಲಿ ಸ್ನಾನಮಾಡಿ ಮಹೇ ಶ್ವರದೇವನನ್ನು ದರ್ಶನಮಾಡಿದರೆ ಸಕಲಪಾಪಗಳಿಂದಲೂ ಬಿಡುಗಡೆಯನ್ನು ಹೊಂದಿ ಶೈವಪದವನ್ನು ಹೊಂದುವನು.

೯೬. ಹನುಮತ್ತೀರ್ಥದಲ್ಲಿ ಸ್ನಾನಮಾಡುವುದರಿಂದ ಮನುಷ್ಯನು ಮುಕ್ತಿಯನ್ನು ಪಡೆಯುವನು. ಶಾಲಹೋತ್ರನೆಂಬ ರಾಜರ್ಷಿಯ ತೀರ್ಥದಲ್ಲಿ ಸ್ನಾನಮಾಡಿದರೆ ಪಾಪಪರಿಹಾರವಾಗುವುದು.

೯೭. ಆಮೇಲೆ ಶ್ರೀಕುಂಭವೆಂಬ ಸರಸ್ವತೀ ತೀರ್ಥದಲ್ಲಿ ಸ್ನಾನಮಾಡು ವುದರಿಂದ ಯಜ್ಞಫಲವು ಲಭಿಸುವುದು. ನೈಮಿಷಕುಂಡದಲ್ಲಿ ಸ್ನಾನಮಾಡಿ ದವನು ನೈಮಿಷತೀರ್ಥಸ್ನಾನದ ಪುಣ್ಯಕ್ಕೆ ಭಾಗಿಯಾಗುವನು.

ಸ್ನಾತ್ವಾ ವೇದವತೀತೀರ್ಥೇ ಸ್ತ್ರೀ ಸತೀತ್ವಮವಾಪ್ನುಯಾತ್ |
ಬ್ರಹ್ಮತೀರ್ಥೇ ನರಃ ಸ್ನಾತ್ವಾ ಬ್ರಾಹ್ಮಣ್ಯಂ ಲಭತೇ ನರಃ || ೯೮ ||

ಬ್ರಹ್ಮಣಃ ಪರಮಂ ಸ್ಥಾನಂ ಯತ್ರ ಗತ್ವಾ ನ ಶೋಚತಿ |
ಸೋಮತೀರ್ಥೇ ನರಃ ಸ್ನಾತ್ವಾ ಸ್ವರ್ಗತಿಂ ಸಮವಾಪ್ನುಯಾತ್ || ೯೯ ||

ಸಪ್ತಸಾರಸ್ವತಂ ತೀರ್ಥಂ ಪ್ರಾಪ್ಯ ಸ್ನಾತ್ವಾ ಚ ಮುಕ್ತಿಭಾಕ್ |
ಯತ್ರ ಸಪ್ತ ಸರಸ್ವತ್ಯಃ ಸಮ್ಯಗೈಕ್ಯಂ ಸಮಾಗತಾಃ || ೧೦೦ ||

ಸುಪ್ರಭಾ ಕಾಂಚನಾಕ್ಷೀ ಚ ವಿಶಾಲಾ ಚ ಮನೋಹರೀ |
ಸುನಂದಾ ಚ ಸುವೇಣುಶ್ಚ ಸಪ್ತಮೀ ವಿಮಲೋದಕಾ || ೧೦೧ ||

ತಥೈವೌಶನಸೇ ತೀರ್ಥೇ ಸ್ನಾತ್ವಾ ಮುಚ್ಯೇತ ಪಾತಕೈಃ |
ಕಪಾಲಮೋಚನೇ ಸ್ನಾತ್ವಾ ಬ್ರಹ್ಮಹಾಪಿ ವಿಶುಧ್ಯತಿ || ೧೦೨ ||

---

೯೮. ನಾರಿಯು ವೇದವತೀತೀರ್ಥದಲ್ಲಿ ಸ್ನಾನಮಾಡಿದರೆ ಸಾಧ್ವೀಮಣಿಯಾಗುವಳು. ಬ್ರಹ್ಮತೀರ್ಥದಲ್ಲಿ ಸ್ನಾನಮಾಡಿದ ಮನುಷ್ಯನು ಬ್ರಹ್ಮತೇಜಸ್ಸನ್ನು ಹೊಂದುವನು.

೯೯. ಅಲ್ಲಿಂದ ಉತ್ತಮವಾದ ಬ್ರಹ್ಮಸ್ಥಾನಕ್ಕೆ ಹೋದರೆ ದುಃಖಪರಿಹಾರವಾಗುವುದು. ಸೋಮತೀರ್ಥದಲ್ಲಿ ಸ್ನಾನಮಾಡುವುದರಿಂದ ಮನುಷ್ಯನಿಗೆ ಸ್ವರ್ಗಪ್ರಾಪ್ತಿಯಾಗುವುದು.

೧೦೦. ಆಮೇಲೆ ಸಪ್ತಸಾರಸ್ವತವೆಂಬ ತೀರ್ಥಕ್ಕೆ ಹೋಗಿ ಸ್ನಾನಮಾಡುವವನು ಮೋಕ್ಷಭಾಗಿಯಾಗುವನು. ಅಲ್ಲಿ ಏಳು ಸರಸ್ವತೀನದಿಗಳೂ ಒಟ್ಟಿಗೆ ಸೇರಿ ಒಂದಾಗಿದೆ.

೧೦೧. ಸುಪ್ರಭಾ, ಕಾಂಚನಾಕ್ಷೀ, ವಿಶಾಲಾ, ಮನೋಹರೀ, ಸುನಂದಾ, ಸುವೇಣು ಮತ್ತು ವಿಮಲೋದಕಾ ಎಂಬೀ ಏಳು ನದಿಗಳೇ ಸಪ್ತಸರಸ್ವತಿಗಳೆನಿಸುವುವು.

೧೦೨. ಅಂತೆಯೇ ಉಶನಸತೀರ್ಥದಲ್ಲಿ ಸ್ನಾನಮಾಡುವುದರಿಂದ ಮನುಷ್ಯನು ಪಾಪಗಳಿಂದ ಬಿಡುಗಡೆಯಾಗುವನು. ಕಪಾಲಮೋಚನ ತೀರ್ಥದಲ್ಲಿ ಸ್ನಾನಮಾಡಿದರೆ, ಬ್ರಹ್ಮಹತ್ಯೆಮಾಡಿದವನಾದರೂ ಪರಿಶುದ್ಧನಾಗುವನು.

ವೈಶ್ವಾಮಿತ್ರೇ ನರಃ ಸ್ನಾತೋ ಬ್ರಾಹ್ಮಣ್ಯಂ ಸಮವಾಪ್ನುಯಾತ್ ।
ತತಃ ಪೃಥೂದಕೇ ಸ್ನಾತ್ವಾ ಮುಚ್ಯತೇ ಭವಬಂಧನಾತ್ ॥ ೧೦ ॥

ಅವಕೀರ್ಣೇ ನರಃ ಸ್ನಾತ್ವಾ ಬ್ರಹ್ಮಚರ್ಯಫಲಂ ಲಭೇತ್ ।
ಮಧುಸ್ರಾವೇ ಯಥಾ ಯಾತೇ ಸ್ನಾತೋ ಮುಚ್ಯೇತ ಪಾತಕೈಃ ॥ ೧೦೪ ॥

ಸ್ನಾತ್ವಾ ತೀರ್ಥೇ ಚ ವಾಸಿಷ್ಠೇ ವಾಸಿಷ್ಠಂ ಲೋಕಮಾಪ್ನುಯಾತ್ ।
ಅರುಣಾಸಂಗಮೇ ಸ್ನಾತ್ವಾ ತ್ರಿರಾತ್ರೋಪೋಷಿತೋ ನರಃ ॥ ೧೦೫ ॥

ಸ್ನಾತ್ವಾ ಮುಕ್ತಿಮವಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ।
ಸಮುದ್ರಾಸ್ತತ್ರ ಚತ್ವಾರಸ್ತೇಷು ಸ್ನಾತೋ ನರಃ ಶುಭೇ ॥ ೧೦೬ ॥

ಗೋಸಹಸ್ರಫಲಂ ಲಬ್ಧ್ವಾ ಸ್ವರ್ಗಲೋಕೇ ಮಹೀಯತೇ ।
ಸೋಮತೀರ್ಥಂ ಚ ತತ್ರಾನ್ಯತ್ತಸ್ಮಿನ್ ಸ್ನಾತ್ವಾ ಚ ಮೋಹಿನಿ ॥ ೧೦೭ ॥

---

೧೦೩. ವಿಶ್ವಾಮಿತ್ರತೀರ್ಥದಲ್ಲಿ ಸ್ನಾನವಮಾಡಿದ ಮನುಷ್ಯನು ಬ್ರಾಹ್ಮಣ್ಯವನ್ನು ಹೊಂದುವನು. ಆಮೇಲೆ ಪೃಥೂದಕದಲ್ಲಿ ಸ್ನಾನಮಾಡುವುದರಿಂದ ಸಂಸಾರಬಂಧನದಿಂದ ಬಿಡುಗಡೆಯಾಗಿ ಮುಕ್ತನಾಗುವನು.

೧೦೪. ಮನುಷ್ಯನು ಅವಕೀರ್ಣತೀರ್ಥದಲ್ಲಿ ಸ್ನಾನಮಾಡುವುದರಿಂದ ಬ್ರಹ್ಮಚರ್ಯಫಲವನ್ನು ಪಡೆಯುವನು. ಮಧುಸ್ರಾವದಲ್ಲಿ ಸ್ನಾನಮಾಡಿದರೆ ಪಾಪ ವಿಮೋಚನೆಯಾಗುವುದು.

೧೦೫-೧೦೬. ವಸಿಷ್ಠತೀರ್ಥದಲ್ಲಿ ಸ್ನಾನವಮಾಡಿದ ಮನುಷ್ಯನು ವಾಸಿಷ್ಠ ಲೋಕವನ್ನು ಹೊಂದಿ ಸುಖಪಡುವನು. ಅರುಣಾಸಂಗಮಕ್ಕೆ ಹೋಗಿ ಮನುಷ್ಯನು ಮೂರುದಿನ ಉಪವಾಸಮಾಡಿ ಅಲ್ಲಿ ಸ್ನಾನಮಾಡುವುದರಿಂದ ಮೋಕ್ಷವನ್ನು ಹೊಂದುವನು. ಈ ವಿಷಯದಲ್ಲಿ ಸಂದೇಹಪಡಬಾರದು.

೧೦೬-೧೦೭. ಮಂಗಳರೂಪಿಯಾದ ಮೋಹಿನಿಯೇ! ಅಲ್ಲಿರುವ ನಾಲ್ಕು ಸಮುದ್ರಗಳಲ್ಲಿ ಸ್ನಾನಮಾಡಿದರೆ ಮನುಷ್ಯನು ಸಾವಿರ ಗೋದಾನಗಳ ಫಲವನ್ನು ಹೊಂದಿ ಸ್ವರ್ಗಲೋಕದಲ್ಲಿ ಪೂಜಿಸಲ್ಪಡುವನು.

ಚೈತ್ರೇ ಷಷ್ಠ್ಯಾಂ ಚ ಶುಕ್ಲಾಯಾಂ ಶ್ರಾದ್ಧಂ ಕೃತ್ವೋದ್ಧರೇತ್ಪಿತೄನ್ ।
ಅಥ ಪಂಚವಟೀ ಸ್ನಾತ್ವಾ ಯೋಗಮೂರ್ತಿಧರಂ ಶಿವಂ ॥ ೧೦೮ ॥
ಸಮಭ್ಯರ್ಚ್ಯ ವಿಧಾನೇನ ದೈವತೈಃ ಸಹ ಮೋದತೇ ।
ಕುರುತೀರ್ಥೇ ತತಃ ಸ್ನಾತ್ವಾ ಸರ್ವಸಿದ್ಧಿಮವಾಪ್ನುಯಾತ್ ॥ ೧೦೯ ॥
ಸ್ವರ್ಗದ್ವಾರೇ ಪ್ಲುತೋ ಮರ್ತ್ಯಃ ಸ್ವರ್ಗಲೋಕೇ ಮಹೀಯತೇ ।
ಸ್ನಾತೋ ಹ್ಯನರಕೇ ತೀರ್ಥೇ ಮುಚ್ಯತೇ ಸರ್ವಕಿಲ್ಬಿಷೈಃ ॥ ೧೧೦ ॥
ತತೋ ಗಚ್ಛೇನ್ನರೋ ದೇವಿ ಕಾಮ್ಯಕಂ ವನಮುತ್ತಮಂ ।
ಯಸ್ಮಿನ್ ಪ್ರವಿಷ್ಟಮಾತ್ರಸ್ತು ಮುಚ್ಯತೇ ಸರ್ವಸಂಶಯೈಃ ॥ ೧೧೧ ॥
ಅಥಾದಿತ್ಯವನಂ ಪ್ರಾಪ್ಯ ದರ್ಶನಾದೇವ ಮುಕ್ತಿಭಾಕ್ ।
ಸ್ನಾನಂ ರವಿದಿನೇ ಕೃತ್ವಾ ತತ್ರ ವಾಂಛಿತಮಾಪ್ನುಯಾತ್ ॥ ೧೧೨ ॥

---

೧೦೭-೧೦೮. ಮೋಹಿನೀ ! ಅಲ್ಲಿ ಸೋಮತೀರ್ಥವೆಂಬ ಇನ್ನೊಂದು ತೀರ್ಥವಿದೆ. ಅದರಲ್ಲಿ ಸ್ನಾನಮಾಡಿ ಚೈತ್ರಮಾಸದ ಶುಕ್ಲಷಷ್ಠಿಯ ದಿವಸ ಶ್ರಾದ್ಧವನ್ನು ಮಾಡುವುದರಿಂದ ಪಿತೃಗಳನ್ನುದ್ಧರಿಸುವನು.

೧೦೮-೧೦೯. ಆಮೇಲೆ ಪಂಚವಟತೀರ್ಥದಲ್ಲಿ ಸ್ನಾನಮಾಡಿ, ಯೋಗ ಶರೀರಧಾರಿಯಾದ ಶಿವನನ್ನು ವಿಧಿವತ್ತಾಗಿ ಪೂಜಿಸಿದರೆ ದೇವತೆಗಳೊಡನೆ ಸೇರಿ ಸುಖಪಡುವನು. ಅನಂತರ ಕುರುತೀರ್ಥದಲ್ಲಿ ಸ್ನಾನಮಾಡಿದವನು ಸಕಲಸಿದ್ಧಿ ಗಳನ್ನೂ ಹೊಂದುವನು.

೧೧೦. ಸ್ವರ್ಗದ್ವಾರತೀರ್ಥದಲ್ಲಿ ಸ್ನಾನಮಾಡಿದ ಮನುಷ್ಯನು ಸ್ವರ್ಗ ಲೋಕದಲ್ಲಿ ಆನಂದಿಸುವನು. ಅನರಕತೀರ್ಥದಲ್ಲಿ ಸ್ನಾನಮಾಡುವುದರಿಂದ ಮನು ಷ್ಯನು ಸಕಲದೋಷಗಳನ್ನೂ ಪರಿಹರಿಸಿಕೊಳ್ಳುವನು.

೧೧೧. ದೇವಿಯೇ ! ಅಲ್ಲಿಂದ ಉತ್ತಮವಾದ ಕಾಮ್ಯಕವನಕ್ಕೆ ಹೋಗ ಬೇಕು. ಅಲ್ಲಿ ಪ್ರವೇಶಮಾಡಿದ ಮಾತ್ರದಿಂದಲೇ ಮನುಷ್ಯನು ಸಕಲಪಾಪಗ ಳಿಂದಲೂ ಮುಕ್ತನಾಗುವನು.

೧೧೨. ಅನಂತರ ಆದಿತ್ಯವನಕ್ಕೆ ಹೋಗಿ ಅದನ್ನು ದರ್ಶನಮಾಡುವ ಮಾತ್ರದಿಂದಲೇ ಮುಕ್ತಿಯನ್ನು ಪಡೆಯುವನು. ಅಲ್ಲಿ ಭಾನುವಾರದದಿನ ಸ್ನಾನ ಮಾಡಿದರೆ ಇಷ್ಟಾರ್ಥವನ್ನು ಹೊಂದುವನು.

ಯಜ್ಞೋಪವೀತಿಕೇ ಸ್ನಾತ್ವಾ ಸ್ವಧರ್ಮಫಲಭಾಗ್ಭವೇತ್ |
ತತಶ್ಚತುಃಪ್ರವಾಹಾಖ್ಯೇ ತೀರ್ಥೇ ಸ್ನಾತ್ವಾ ನರೋತ್ತಮಃ || ೧೧೩ ||

ಸರ್ವತೀರ್ಥಫಲಂ ಪ್ರಾಪ್ಯ ಮೋದತೇ ದಿವಿ ದೇವವತ್ |
ಸ್ನಾತಸ್ತೀರ್ಥೇ ವಿಹಾರೇ ತು ಸರ್ವಸೌಖ್ಯಮವಾಪ್ನುಯಾತ್ || ೧೧೪ ||

ದುರ್ಗಾತೀರ್ಥೇ ನರಃ ಸ್ನಾತ್ವಾ ನ ದುರ್ಗತಿಮವಾಪ್ನುಯಾತ್ |
ತತಃ ಸರಸ್ವತೀಕೂಪೇ ಪಿತೃತೀರ್ಥಾಪರಾಹ್ವಯೇ || ೧೧೫ ||

ಸ್ನಾತ್ವಾ ಸಂತರ್ಪ್ಯ ದೇವಾದೀಂಲ್ಲಭತೇ ಗತಿಮುತ್ತಮಾಂ |
ಸ್ನಾತ್ವಾ ಪ್ರಾಚೀಸರಸ್ವತ್ಯಾಂ ಶ್ರಾದ್ಧಂ ಕೃತ್ವಾ ವಿಧಾನತಃ || ೧೧೬ ||

---

೧೧೩-೧೧೪. ಯಜ್ಞೋಪವೀತ ತೀರ್ಥದಲ್ಲಿ ಸ್ನಾನಮಾಡುವುದರಿಂದ ತನ್ನ ವಿಹಿತಧರ್ಮಾಚರಣೆಯ ಫಲವನ್ನು ಹೊಂದುವನು. ದೇವೀ! ಅಲ್ಲಿಂದ ಚತುಃಪ್ರವಾಹವೆಂಬ ತೀರ್ಥಕ್ಕೆ ಹೋಗಿ ಅಲ್ಲಿ ಸ್ನಾನಮಾಡಿದ ಪುರುಷವರ್ಯನು ಸಕಲತೀರ್ಥಸ್ನಾನಗಳ ಫಲವನ್ನು ಹೊಂದಿ ದೇವತೆಯಂತೆ ದೇವಲೋಕದಲ್ಲಿ ಸುಖಪಡುವನು. ವಿಹಾರತೀರ್ಥದಲ್ಲಿ ಸ್ನಾನಮಾಡಿದವನು ಸಕಲಸೌಖ್ಯಗಳನ್ನೂ ಹೊಂದುವನು.

೧೧೫-೧೧೬. ದುರ್ಗಾತೀರ್ಥದಲ್ಲಿ ಸ್ನಾನಮಾಡುವುದರಿಂದ ಮನುಷ್ಯನು ಎಂದಿಗೂ ದುರ್ಗತಿಯನ್ನು ಹೊಂದುವುದಿಲ್ಲ. ಅಲ್ಲಿಂದ ಪಿತೃತೀರ್ಥ ಎಂಬ ಮತ್ತೊಂದು ನಾಮಧೇಯವುಳ್ಳ ಸರಸ್ವತೀಕೂಪಕ್ಕೆ ಹೋಗಿ ಅಲ್ಲಿ ಸ್ನಾನಮಾಡಿ ದೇವ, ಋಷಿ, ಪಿತೃಗಳಿಗೆ ತರ್ಪಣಕೊಟ್ಟರೆ ಅವನು ಉತ್ತಮಗತಿಯನ್ನು ಹೊಂದುವನು.

೧೧೬-೧೧೭. ಪೂರ್ವದಿಕ್ಕಿನಲ್ಲಿರುವ ಸರಸ್ವತೀನದಿಯಲ್ಲಿ ಸ್ನಾನಮಾಡಿ ವಿಧಾನೋಕ್ತಪ್ರಕಾರವಾಗಿ ಶ್ರಾದ್ಧಮಾಡುವುದರಿಂದ ಹೊಂದಲಶಕ್ಯವಾದ ಇಷ್ಟಾರ್ಥಗಳನ್ನೆಲ್ಲಾ ಪಡೆದು ದೇಹಾವಸಾನವಾದಮೇಲೆ ಸ್ವರ್ಗಗಾಮಿಯಾಗುವನು.

ದುರ್ಲಭಂ ಪ್ರಾಪ್ನುಯಾತ್ಕಾಮಂ ದೇಹಾಂತೇ ಸ್ವರ್ಗತಿಂ ಲಭೇತ್ |
ಶುಕ್ರತೀರ್ಥೇ ನರಃ ಸ್ನಾತ್ವಾ ಶ್ರಾದ್ಧದಃ ಪ್ರೋದ್ಧರೇತ್ಪಿತೄನ್ || ೧೧೭ ||

ಅಷ್ಟಮ್ಯಾಂ ವಾ ಚತುರ್ದಶ್ಯಾಂ ಚೈತ್ರೇ ಕೃಷ್ಣೇ ವಿಶೇಷತಃ |
ಸೋಪವಾಸೋ ಬ್ರಹ್ಮತೀರ್ಥೇ ಮುಕ್ತಿಭಾಙ್ನಾತ್ರ ಸಂಶಯಃ || ೧೧೮ ||

ಸ್ಥಾಣುತೀರ್ಥೇ ತತಃ ಸ್ನಾತ್ವಾ ದೃಷ್ಟ್ವಾ ಸ್ಥಾಣುವಟಂ ನರಃ |
ಮುಚ್ಯತೇ ಪಾತಕೈರ್ಘೋರೈರಿತಿ ಪ್ರಾಹ ಪಿತಾಮಹಃ || ೧೧೯ ||

ದರ್ಶನಾತ್ ಸ್ಥಾಣುಲಿಂಗಸ್ಯ ಯಾತ್ರಾ ಪೂರ್ಣಾ ಪ್ರಜಾಯತೇ |
ಕುರುಕ್ಷೇತ್ರಸ್ಯ ದೇವೇಶಿ ಸತ್ಯಂ ಸತ್ಯಂ ಮಯೋದಿತಂ || ೧೨೦ ||

ಕುರುಕ್ಷೇತ್ರಸಮಂ ತೀರ್ಥಂ ನ ಭೂತಂ ನ ಭವಿಷ್ಯತಿ |
ತತ್ರ ದ್ವಾದಶ ಯಾತ್ರಾಸ್ತು ಕೃತ್ವಾ ಭೂಯೋ ನ ಜನ್ಮಭಾಕ್ || ೧೨೧ ||

---

ಬಳಿಕ ಶುಕ್ಲತೀರ್ಥದಲ್ಲಿ ಸ್ನಾನಮಾಡಿ ಮನುಷ್ಯನು ಶ್ರಾದ್ಧಮಾಡಿದರೆ ಪಿತೃಗಳ ಉದ್ಧಾರವಾಗುವುದು.

೧೧೮. ಅನಂತರ ಚೈತ್ರಮಾಸದ ಕೃಷ್ಣಪಕ್ಷದ ಅಷ್ಟಮೀ ಅಥವಾ ಚತುರ್ದಶಿಯ ದಿನದಲ್ಲಿ ಬ್ರಹ್ಮತೀರ್ಥದಲ್ಲಿ ಸ್ನಾನಮಾಡಿ ಉಪವಾಸಮಾಡಿದರೆ ವಿಶೇಷಪುಣ್ಯವು ಲಭಿಸಿ ಮುಕ್ತಿಯಾಗುವುದು. ಈ ವಿಷಯದಲ್ಲಿ ಸಂದೇಹವಿಲ್ಲ.

೧೧೯. ಅಲ್ಲಿಂದ ಹೊರಟು ಸ್ಥಾಣುತೀರ್ಥದಲ್ಲಿ ಸ್ನಾನಮಾಡಿ ಸ್ಥಾಣುವಟವನ್ನು ದರ್ಶನಮಾಡುವುದರಿಂದ ಮನುಷ್ಯನು ಘೋರವಾದ ಮಹಾಪಾಪಗಳನ್ನು ಕಳೆದುಕೊಳ್ಳುವನೆಂದು ಪಿತಾಮಹನು ಹೇಳಿರುವನು.

೧೨೦. ದೇವೇಶೀ! ಸ್ಥಾಣುಲಿಂಗವನ್ನು ದರ್ಶನಮಾಡುವುದರಿಂದ ಕುರುಕ್ಷೇತ್ರಯಾತ್ರೆಯು ಸಾಂಗವಾಗಿ ಪೂರ್ಣವಾಗುವುದು. ನಾನು ಹೇಳಿರುವ ಈ ಮಾತು ಸತ್ಯ! ಸತ್ಯ!

೧೨೧. ಕುರುಕ್ಷೇತ್ರಕ್ಕೆ ಸಮವಾದತೀರ್ಥವು ಹಿಂದೆಮುಂದೆ ಯಾವಾಗಲೂ ಎಲ್ಲಿಯೂ ಇಲ್ಲ. ಅದರಲ್ಲಿರುವ ಹನ್ನೆರಡು ತೀರ್ಥಯಾತ್ರೆಗಳನ್ನು ಮಾಡಿದವನು ಪುನರ್ಜನ್ಮವನ್ನೇ ಪಡೆಯದೆ ಮುಕ್ತನಾಗುವನು.

ಪೂರ್ತಮಿಷ್ಟಂ ತಪಸ್ತಪ್ತಂ ಹುತಂ ದತ್ತಂ ವಿಧಾನತಃ ।
ತತ್ರ ಸ್ಯಾದಕ್ಷಯಂ ಸರ್ವಮಿತಿ ವೇದವಿದೋ ವಿದುಃ ॥ ೧೨೨ ॥

ಮನ್ವಾದೌ ಚ ಯುಗಾದೌ ಚ ಗ್ರಹಣೇ ಚಂದ್ರಸೂರ್ಯಯೋಃ ।
ಮಹಾಪಾತೇ ಚ ಸಂಕ್ರಾಂತೌ ಪುಣ್ಯೇ ಚಾಪ್ಯನ್ಯವಾಸರೇ ॥ ೧೨೩ ॥

ಸ್ನಾತಸ್ತತ್ರ ಕುರುಕ್ಷೇತ್ರೇ ಫಲಾನಂತ್ಯಮವಾಪ್ನುಯಾತ್ ।
ಕಲಿಜಾನಾಂ ತು ಪಾಪಾನಾಂ ಪಾವನಾಯ ಮಹಾತ್ಮನಾ ॥ ೧೨೪ ॥

ಬ್ರಹ್ಮಣಾ ಕಲ್ಪಿತಂ ತೀರ್ಥಂ ಕುರುಕ್ಷೇತ್ರಂ ಸುಖಾವಹಂ ।
ಯ ಇಮಾಂ ಕೀರ್ತಯೇತ್ಪುಣ್ಯಾಂ ಕಥಾಂ ಪಾಪಪ್ರಣಾಶಿನೀಂ ॥ ೧೨೫ ॥

---

೧೨೨. ಕುರುಕ್ಷೇತ್ರದಲ್ಲಿ ವಿಧಿವತ್ತಾಗಿಮಾಡುವ ತಟಾಕ ನಿರ್ಮಾಣ, ಯಾಗ, ತಪಸ್ಸು, ಹೋಮ, ದಾನ ಇವುಗಳೆಲ್ಲವೂ ಅಕ್ಷಯಫಲವನ್ನು ಕೊಡುತ್ತ ವೆಂದು ವೇದತತ್ತ್ವಜ್ಞಾನಿಗಳು ತಿಳಿದಿರುವರು.

೧೨೩-೧೨೪. ಮನ್ವಾದಿ, ಯುಗಾದಿ, ಚಂದ್ರಸೂರ್ಯಗ್ರಹಣಗಳು, ಮಹಾ ಪಾತ, ಸಂಕ್ರಾಂತಿ, ಇತರ ಪುಣ್ಯದಿನ ಈ ಪರ್ವಕಾಲಗಳಲ್ಲಿ ಕುರುಕ್ಷೇತ್ರದ ತೀರ್ಥ ಗಳಲ್ಲಿ ಸ್ನಾನಮಾಡಿದವನು ಅನಂತಫಲವನ್ನು ಪಡೆಯುವನು.

೧೨೪-೧೨೫. ಕಲಿಮಹಿಮೆಯಿಂದುದ್ಭವಿಸುವ ಪಾಪಗಳನ್ನು ಹೋಗ ಲಾಡಿಸಿ ಮನುಷ್ಯರನ್ನು ಪರಿಶುದ್ಧಿಗೊಳಿಸುವುದಕ್ಕಾಗಿ ಮಹಾತ್ಮನಾದ ಬ್ರಹ್ಮನು ಸುಖಕರವಾದ ಕುರುಕ್ಷೇತ್ರವೆಂಬ ತೀರ್ಥವನ್ನು ಕಲ್ಪಿಸಿರುವನು.

೧೨೫-೧೨೬. ಪಾಪವನ್ನು ಪರಿಹರಿಸಿ ಪುಣ್ಯವನ್ನು ಕೊಡುವ ಈ ಕುರು ಕ್ಷೇತ್ರ ಮಾಹಾತ್ಮ್ಯೆಯನ್ನು ಭಕ್ತಿಯಿಂದ ಶ್ರವಣಕೀರ್ತನೆಗಳನ್ನು ಮಾಡುವ ವನೂ ಸಹ ಪಾಪಮುಕ್ತನಾಗುವನು.

ಶೃಣುಯಾದ್ವಾ ನರೋ ಭಕ್ತ್ಯಾ ಸೋಽಪಿ ಪಾಪೈಃ ಪ್ರಮುಚ್ಯತೇ ।
ಯದ್ಯದ್ದದಾತಿ ಯಸ್ತತ್ರ ಕುರುಕ್ಷೇತ್ರೇ ರವಿಗ್ರಹೇ ॥ ೧೨೬ ॥

ತತ್ತದೇವ ಸದಾಪ್ನೋತಿ ನರೋ ಜನ್ಮನಿ ಜನ್ಮನಿ ।
ಅಥ ಕಿಂ ಬಹುನೋಕ್ತೇನ ವಿಧಿಜೇ ಶೃಣು ನಿಶ್ಚಿತಂ ॥ ೧೨೭ ॥

ಸೇವೇತ್ಯೈವ ಕುರುಕ್ಷೇತ್ರಂ ಯದೀಚ್ಛೇದ್ಭವಮೋಕ್ಷಣಂ ।
ಏತದೇವ ಮಹತ್ಪುಣ್ಯಮೇತದೇವ ಮಹತ್ತಪಃ ॥ ೧೨೮ ॥

ಏತದೇವ ಮಹತ್ ಜ್ಞಾನಂ ಯದ್ವ್ರಜೇತ್ ಸ್ಥಾಣುತೀರ್ಥಕಂ ।
ಕುರುಕ್ಷೇತ್ರಸಮಂ ತೀರ್ಥಂ ನಾನ್ಯದ್ಭುವಿ ಶುಭಾವಹಂ ॥ ೧೨೯ ॥

---

೧೨೬-೧೨೭. ಮನುಷ್ಯನು ಆ ಕುರುಕ್ಷೇತ್ರದಲ್ಲಿ ಸೂರ್ಯಗ್ರಹಣ ಪರ್ವ ಕಾಲದಲ್ಲಿ ಯಾವ ಯಾವ ವಸ್ತುವನ್ನು ದಾನಮಾಡುವನೋ ಆಯಾಯಾ ವಸ್ತುಗಳನ್ನು ಎಲ್ಲಾ ಜನ್ಮಗಳಲ್ಲಿಯೂ ಹೊಂದುವನು.

೧೨೭-೧೨೮. ವಿಧಿಜಾತೇ! ಹೆಚ್ಚುಹೇಳಿದುದರಿಂದೇನು ? ಸಂಸಾರ ಬಂಧನದಿಂದ ಬಿಡುಗಡೆಯಾಗಿ ಮೋಕ್ಷಪದವಿಯನ್ನು ಬಯಸುವುದಾದರೆ ಮನುಷ್ಯನು ಕುರುಕ್ಷೇತ್ರಯಾತ್ರೆಯನ್ನು ಮಾಡಲೇಬೇಕು. ಇದು ನಿಶ್ಚಿತವಾದ ರಹಸ್ಯವೆಂದು ತಿಳಿ. ಈ ಕುರುಕ್ಷೇತ್ರಸೇವೆಯೇ ಮಹಾಪುಣ್ಯಕರವು. ಇದೇ ಮಹಾತಪಸ್ಸು.

೧೨೯-೧೩೦. ಸ್ಥಾಣುತೀರ್ಥಕ್ಕೆ ಹೋಗಿ ಸ್ನಾನಾದಿಗಳನ್ನು ಮಾಡಬೇಕೆಂಬುದು ಅವಶ್ಯಜ್ಞಾತವ್ಯವಾದ ವಿಷಯವು. ಸದಾಚಾರಿಯಾಗಲಿ ಅಥವಾ ದುರಾಚಾರಿಯಾಗಲಿ ಕುರುಕ್ಷೇತ್ರಯಾತ್ರೆಯನ್ನು ಮಾಡಿದವನು ಮುಕ್ತನಾಗುವನು. ಅದಕ್ಕೆ ಸಮಾನವಾದ ಮಂಗಳಕರವಾದ ಇನ್ನೊಂದು ತೀರ್ಥವು ಭೂಲೋಕದಲ್ಲಿಲ್ಲ.

ಸ್ವಾಚಾರೋ ವಾಪ್ಯನಾಚಾರೋ ಯತ್ರ ಮುಕ್ತಿಮವಾಪ್ನುಯಾತ್ ।
ಏತತ್ತೇ ಸರ್ವಮಾಖ್ಯಾತಂ ಯತ್ಪೃಷ್ಟೋಽಹಂ ತ್ವಯಾನಘೇ ॥ ೧೩೦ ॥

ಕುರುಕ್ಷೇತ್ರಸ್ಯ ಮಾಹಾತ್ಮ್ಯಂ ಸರ್ವಪಾಪನಿಕೃಂತನಂ ।
ಪುಣ್ಯದಂ ಮೋಕ್ಷದಂ ಚೈವ ಕಿಮನ್ಯಚ್ಛ್ರೋತುಮಿಚ್ಛಸಿ ॥ ೧೩೧ ॥

ಇತಿ ಶ್ರೀನಾರದೀಯಪುರಾಣೋತ್ತರಭಾಗೇ ವಸುಮೋಹಿನೀಸಂವಾದೇ
ಕುರುಕ್ಷೇತ್ರಮಾಹಾತ್ಮ್ಯೇ ತೀರ್ಥಯಾತ್ರಾವರ್ಣನಂ ನಾಮ
ಪಂಚಷಷ್ಟಿತಮೋಽಧ್ಯಾಯಃ

---

೧೩೦-೧೩೧. ಪಾಪರಹಿತಳಾದ ಮೋಹಿನೀ! ನೀನು ಕೇಳಿದ, ಸಕಲ ಪಾಪಗಳನ್ನೂ ನಿರ್ಮೂಲಮಾಡಿ ಪುಣ್ಯವನ್ನು ಕೊಟ್ಟು ಮೋಕ್ಷವನ್ನೂ ಕೊಡುವಂತಹ ಕುರುಕ್ಷೇತ್ರ ಮಾಹಾತ್ಮ್ಯೆಯನ್ನು ಸಮಗ್ರವಾಗಿ ನಿನಗೆ ಹೇಳಿರುವೆನು ; ಇನ್ನೇನನ್ನು ಕೇಳಬಯಸುವೆ ?

ಇಂತು ಶ್ರೀನಾರದೀಯಪುರಾಣೋತ್ತರಭಾಗದಲ್ಲಿ ವಸು ಮೋಹಿನೀ
ಸಂವಾದದೊಳು ಕುರುಕ್ಷೇತ್ರ ಮಾಹಾತ್ಮ್ಯೆಯಲ್ಲಿ ತೀರ್ಥ
ಯಾತ್ರೆಗಳ ವರ್ಣನೆಯೆಂಬ ಅರವತ್ತೈದನೆಯ
ಅಧ್ಯಾಯವು ಮುಗಿದುದು.



# ಷಟ್ಪಂಚಾಶತ್ತಮೋಽಧ್ಯಾಯಃ



## ಗಂಗಾದ್ವಾರಮಾಹಾತ್ಮ್ಯಂ ಪ್ರಾರಭ್ಯತೇ

### ಮೋಹಿನ್ಯುವಾಚ

ಕುರುಕ್ಷೇತ್ರಸ್ಯ ಮಾಹಾತ್ಮ್ಯಂ ಶ್ರುತಂ ಪಾಪಹರಂ ಮಹತ್ ।
ತ್ವತ್ತೋ ದ್ವಿಜವರಶ್ರೇಷ್ಠ ಸರ್ವಸಿದ್ಧಿಪ್ರದಂ ನೃಣಾಂ ॥ ೧ ॥

ಗಂಗಾದ್ವಾರಂ ಪುರಾಖ್ಯಾತಂ ತೀರ್ಥಂ ಪುಣ್ಯಾವಹಂ ಗುರೋ ।
ತತ್ಸಮಾಖ್ಯಾಹಿ ಭದ್ರಂ ತೇ ಶ್ರೋತ್ರಂ ವಾಂಛಸಿ ಮೇ ಗುರೋ ॥ ೨ ॥

### ವಸುರುವಾಚ

ಶೃಣು ಭದ್ರೇ ಪ್ರವಕ್ಷ್ಯಾಮಿ ಮಾಹಾತ್ಮ್ಯಂ ಪಾಪನಾಶನಂ ।
ಗಂಗಾದ್ವಾರಸ್ಯ ತೇ ಪುಣ್ಯಂ ಶೃಣ್ವತಾಂ ಪಠತಾಂ ಶುಭಂ ॥ ೩ ॥

---

## ಅರವತ್ತಾರನೆಯ ಅಧ್ಯಾಯ

೧. ದ್ವಿಜವರ್ಯ! ಮನುಷ್ಯರಿಗೆ ಸಕಲಸಿದ್ಧಿದಾಯಕವು, ಪಾಪಪರಿಹಾರಕವೂ ಆದ ಕುರುಕ್ಷೇತ್ರದ ಮಹಾಮಹಿಮೆಯನ್ನು ನಿನ್ನಿಂದ ತಿಳಿದೆನು.

೨. ಗುರುವೇ! ನಿನಗೆ ಮಂಗಳವಾಗಲಿ! ಗಂಗಾದ್ವಾರವೆಂಬ ತೀರ್ಥವು ಪುಣ್ಯದಾಯಕವೆಂದು ಹಿಂದೆಯೇ ಹೇಳಿರುವೆಯಷ್ಟೆ! ಅದನ್ನು ತಿಳಿಯಬೇಕೆಂದು ನನಗೆ ಅಭಿಲಾಷೆಯುಂಟಾಗಿದೆಯಾದಕಾರಣ ಆ ತೀರ್ಥದ ಮಾಹಾತ್ಮ್ಯೆಯನ್ನು ಹೇಳು ಎಂಬುದಾಗಿ ಮೋಹಿನಿಯು ವಸುವನ್ನು ಕೇಳಿದಳು.

೩. ಭದ್ರೇ! ಶ್ರವಣಪಠನ ಮಾಡುವವರಿಗೆ ಪುಣ್ಯ ಮತ್ತು ಮಂಗಳಗಳನ್ನು ಕೊಡುವ, ಪಾಪನಾಶಕವಾದ ಗಂಗಾದ್ವಾರದ ಮಾಹಾತ್ಮ್ಯೆಯನ್ನು ಹೇಳುವೆನು ಕೇಳು, ಎಂದು ವಸುವು ಹೇಳುವನು :—

ಯತ್ರ ಭೂಮಿಮನುಪ್ರಾಪ್ತಾ ಭಗೀರಥರಥಾನುಗಾ ।
ಶ್ರೀಗಂಗಾಲಕನಂದಾಖ್ಯಾ ನಗಾನ್ ಭಿತ್ವಾ ಸಹಸ್ರಶಃ ॥ ೪ ॥

ಯತ್ರಾಯಜತ ಯಜ್ಞೇಶಂ ಪುರಾ ದಕ್ಷಃ ಪ್ರಜಾಪತಿಃ ।
ತತ್ ಕ್ಷೇತ್ರಂ ಪುಣ್ಯದಂ ನೄಣಾಂ ಸರ್ವಪಾತಕನಾಶನಂ ॥ ೫ ॥

ಯಸ್ಮಿನ್ಯಜ್ಞೇ ಸಮಾಹೂತಾ ದೇವಾ ಇಂದ್ರಪುರೋಗಮಾಃ ।
ಸ್ವೈಃ ಸ್ವೈರ್ಗಣೈಃ ಸಮಾಯಾತಾ ಯಜ್ಞಭಾಗಜಿಘೃಕ್ಷಯಾ ॥ ೬ ॥

ತತ್ರ ದೇವರ್ಷಯಃ ಪ್ರಾಪ್ತಾಸ್ತಥಾ ಬ್ರಹ್ಮರ್ಷಯೋಽಮಲಾಃ ।
ಶಿಷ್ಯಪ್ರಶಿಷ್ಯೈಃ ಸಹಿತಾಸ್ತಥಾ ರಾಜರ್ಷಯಃ ಶುಭೇ ॥ ೭ ॥

ಸರ್ವೇ ನಿಮಂತ್ರಿತಾಸ್ತೇನ ಬ್ರಹ್ಮಪುತ್ರೇಣ ಧೀಮತಾ ।
ಗಂಧರ್ವಾಪ್ಸರಸೋ ಯಕ್ಷಾಃ ಸಿದ್ಧವಿದ್ಯಾಧರೋರಗಾಃ ॥ ೮ ॥

---

ಅಲಕನಂದಾನಾಮಕಳಾದ ಗಂಗೆಯು ಸಾವಿರಾರುಪರ್ವತಗಳನ್ನು ಭೇದಿಸಿಕೊಂಡು ಭಗೀರಥರಾಜನ ರಥವನ್ನು ಹಿಂಬಾಲಿಸಿ ಬಂದು ಭೂಮಿಯನ್ನು ಹೊಂದಿದ ಸ್ಥಳವೇ ಗಂಗಾದ್ವಾರವು.

೫. ಅಲ್ಲಿ ದಕ್ಷಪ್ರಜೇಶ್ವರನು ಪೂರ್ವದಲ್ಲಿ ಯಜ್ಞಮಾಡಿ ಯಜ್ಞೇಶ್ವರನನ್ನು ಪೂಜಿಸಿರುವನು. ಆ ಕ್ಷೇತ್ರವು ಮನುಷ್ಯರಿಗೆ ಸಕಲಪಾಪಗಳನ್ನೂ ನಾಶಪಡಿಸಿ ಪುಣ್ಯಪ್ರದವಾಗಿದೆ.

೬. ಅಲ್ಲಿ ಮಾಡಿದ ದಕ್ಷಪ್ರಜೇಶ್ವರನ ಯಜ್ಞಕ್ಕೆ ಆಹ್ವಾನಿಸಲ್ಪಟ್ಟ ಇಂದ್ರಾದಿದೇವತೆಗಳು ಯಜ್ಞದಲ್ಲಿ ತಮಗೆ ಸಲ್ಲಬೇಕಾದ ಭಾಗವನ್ನು ತೆಗೆದುಕೊಳ್ಳಬೇಕೆಂಬ ಅಭಿಲಾಷೆಯಿಂದ ಪರಿವಾರದೊಡನೆ ಅಲ್ಲಿಗೆ ಬಂದರು.

೭. ಭದ್ರೇ! ಅಲ್ಲಿಗೆ ದೇವರ್ಷಿಗಳು, ಪರಿಶುದ್ಧರಾದ ಬ್ರಹ್ಮರ್ಷಿಗಳು ಮತ್ತು ರಾಜರ್ಷಿಗಳೂ ಸಹ ಶಿಷ್ಯಪ್ರಶಿಷ್ಯರ ಸಹಿತವಾಗಿ ಬಂದರು.

೮-೯. ಜ್ಞಾನಿಯಾದ ಆ ಬ್ರಹ್ಮಪುತ್ರನು ಎಲ್ಲರನ್ನೂ ಯಜ್ಞಕ್ಕೆ ಆಹ್ವಾನಿಸಿದ್ದನು. ಗಂಧರ್ವರು, ಅಪ್ಸರಸ್ತ್ರೀಯರು, ಯಕ್ಷರು, ಸಿದ್ಧರು, ವಿದ್ಯಾಧರರು, ಸರ್ಪಗಳು ಇವರೆಲ್ಲರೂ ಯಜ್ಞಶಾಲೆಯಲ್ಲಿ ನೆರೆದಿದ್ದರು. ಆದರೆ ಪಿನಾಕಧಾರಿಯಾದ ರುದ್ರದೇವನೊಬ್ಬನುಮಾತ್ರ ಬರಲಿಲ್ಲ.

ಸಂಪ್ರಾಪ್ತಾ ಯಜ್ಞಸದನಮೃತೇ ಶರ್ವಂ ಪಿನಾಕಿನಂ ।
ತತಸ್ತು ಗಚ್ಛತಾಂ ತೇಷಾಂ ಸಪ್ರಿಯಾಣಾಂ ವಿಮಾನಿನಾಂ ॥ ೯ ॥

ದಕ್ಷಯಜ್ಞೋತ್ಸವಂ ಪ್ರೀತ್ಯಾನ್ಯೋನ್ಯಂ ವರ್ಣಯತಾಂ ಸತೀ ।
ಶ್ರುತ್ವಾ ಸೋತ್ಕಾ ಮಹಾದೇವಂ ಪ್ರಾರ್ಥಯಾಮಾಸ ಭಾಮಿನೀ ॥ ೧೦ ॥

ತಚ್ಛ್ರುತ್ವಾ ಭಗವಾನಾಹ ನ ಶ್ರೇಯೋ ಗಮನಂ ತತಃ ।
ಅಥ ದೇವಮನಾದೃತ್ಯ ಭಾವಿನೋರ್ಥಸ್ಯ ಗೌರವಾತ್ ॥ ೧೧ ॥

ಜಗಾಮೈಕಾಕಿನೀ ಭದ್ರೇ ದ್ರಷ್ಟುಂ ಪಿತೃಮಖೋತ್ಸವಂ ।
ತತಃ ಸಾ ತತ್ರ ಸಂಪ್ರಾಪ್ತಾ ನ ಕೇನಾಪಿ ಸಭಾಜಿತಾ ॥ ೧೨ ॥

ಪ್ರಾಣಾಂಸ್ತತ್ಯಾಜ ತನ್ವಂಗೀ ತಜ್ಜಾತಂ ಕ್ಷೇತ್ರಮುತ್ತಮಂ ।
ತಸ್ಮಿಂಸ್ತೀರ್ಥೇ ತು ಯೇ ಸ್ನಾತ್ವಾ ತರ್ಪಯಂತಿ ಸುರಾನ್ ಪಿತೄನ್ ॥೧೩॥

---

೯-೧೦ ಅವರವರ ಪತ್ನಿಸಹಿತರಾಗಿ ವಿಮಾನದಲ್ಲಿ ಕುಳಿತು ವಿಶ್ವಾಸದಿಂದ ದಕ್ಷಯಜ್ಞೋತ್ಸವವನ್ನು ಒಬ್ಬರನ್ನುಕುರಿತು ಇನ್ನೊಬ್ಬರು ಹೊಗಳುತ್ತಾ ಯಜ್ಞಶಾಲೆಗೆ ತೆರಳುತ್ತಿರುವಾಗ ಅವರ ಹೊಗಳಿಕೆಯನ್ನು ಕೇಳಿ ಸತೀದೇವಿಯು ತಾನೂ ಹೋಗಬೇಕೆಂಬ ಔತ್ಸುಕ್ಯದಿಂದ ಮಹಾದೇವನನ್ನು ಪ್ರಾರ್ಥಿಸಿದಳು.

೧೧-೧೨. ಪತ್ನಿಯ ಆ ಮಾತನ್ನು ಕೇಳಿ ಭಗವಂತನು ಹೋಗುವುದು ಶ್ರೇಯಸ್ಕರವಲ್ಲವೆಂದು ಸತಿಗೆ ಹೇಳಿದನು. ಭದ್ರೇ! ಆದರೂ ಸತೀದೇವಿಯು ಮುಂದೆ ನಡೆಯಬೇಕಾದ ಮಹಾಕಾರ್ಯದಲ್ಲಿ ದೃಷ್ಟಿಯಿಟ್ಟು ಮಹಾದೇವರ ಮಾತನ್ನು ಗೌರವಿಸದೆ ತಂದೆಯು ಮಾಡುವ ಯಜ್ಞಮಹೋತ್ಸವವನ್ನು ನೋಡುವುದಕ್ಕಾಗಿ ಒಬ್ಬಳೇ ಹೊರಟು ಯಜ್ಞಶಾಲೆಗೆ ಬಂದಳು. ಅಲ್ಲಿ ಯಾರೂ ಆಕೆಯನ್ನು ಗೌರವಿಸಲಿಲ್ಲ.

೧೩-೧೪. ಹೀಗೆ ತನಗಾದ ಅವಮಾನದಿಂದ ಸತೀದೇವಿಯು ಪ್ರಾಣಬಿಟ್ಟಳು. ಆ ಸ್ಥಾನವು ಉತ್ತಮಕ್ಷೇತ್ರವಾಯಿತು. ಆ ತೀರ್ಥದಲ್ಲಿ ಸ್ನಾನಮಾಡಿ ದೇವಪಿತೃತರ್ಪಣ ಮಾಡುವವರು ದೇವಿಗೆ ಅತ್ಯಂತ ಪ್ರೀತಿಪಾತ್ರರಾಗಿ ಭೋಗಮೋಕ್ಷಗಳಿಗೆ ಭಾಗಿಗಳಾಗುವರು.

ತೇ ಸ್ಯುರ್ದೇವಾಃ ಪ್ರಿಯತಮಾ ಭೋಗಮೋಕ್ಷೈಕಭಾಗಿನಃ ।
ಯೇಽನ್ಯೇಽಪಿ ತತ್ರ ಸ್ವಾನ್ ಪ್ರಾಣಾಂಸ್ತ್ಯಜಂತ್ಯನಶನಾದಿಭಿಃ ॥ ೧೪ ॥

ತೇಽಪಿ ಸಾಕ್ಷಾಚ್ಛಿವಂ ಪ್ರಾಪ್ಯ ನಾಪ್ನುವಂತಿ ಪುನರ್ಜನಿಂ ।
ಅಥ ತನ್ನಾರದಾಚ್ಛ್ರುತ್ವಾ ಭಗವಾನ್ನೀಲಲೋಹಿತಃ ॥ ೧೫ ॥

ಮರಣಂ ಸ್ವಪ್ರಿಯಾಯಾಸ್ತು ವೀರಭದ್ರಂ ವಿನಿರ್ಮಮೇ ।
ಸ ಸರ್ವೈಃ ಪ್ರಮಥೈರ್ಯುಕ್ತಸ್ತಂ ಯಜ್ಞಂ ಸಮನಾಶಯತ್ ॥ ೧೬ ॥

ಪುನರ್ವಿಧೇಃ ಪ್ರಾರ್ಥನಯಾ ಮೀಢ್ವಾನ್ ಸದ್ಯಃ ಪ್ರಸಾದಿತಃ ।
ಸಂದಧೇ ಚ ಪುನರ್ಯಜ್ಞಂ ವಿಕೃತಂ ಪ್ರಕೃತಿಸ್ಥಿತಂ ॥ ೧೭ ॥

ತತಸ್ತತ್ತೀರ್ಥಮತುಲಂ ಸರ್ವಪಾತಕನಾಶನಂ ।
ಜಾತಂ ಯತ್ರಾಪ್ಲುತಃ ಸೋಮೋ ಮುಕ್ತೋ ಯಕ್ಷ್ಮಗ್ರಹಾದಭೂತ್ ॥

---

೧೪-೧೫. ಆ ಕ್ಷೇತ್ರದಲ್ಲಿ ಅನಶನಾದಿವ್ರತಗಳನ್ನಾಚರಿಸಿ ಪ್ರಾಣಬಿಡುವ ಇತರರೂ ಸಹ ಸಾಕ್ಷಾಚ್ಛಿವನ ಪಾದಾರವಿಂದವನ್ನು ಹೊಂದಿ ಪುನರ್ಜನ್ಮವನ್ನು ನೀಗಿಕೊಳ್ಳುವರು.

೧೫-೧೬. ನೀಲಲೋಹಿತನಾದ ಭಗವಂತನು ಕೂಡಲೇ ತನ್ನ ಪ್ರಿಯೆಯ ಮರಣವೃತ್ತಾಂತವನ್ನು ನಾರದರಿಂದ ತಿಳಿದು ವೀರಭದ್ರನನ್ನು ಸೃಷ್ಟಿಸಿದನು. ಅವನು ಸಕಲ ಪ್ರಮಥಗಣಗಳ ಸಹಿತನಾಗಿ ಅಲ್ಲಿಗೆ ಹೋಗಿ ಆ ದಕ್ಷಯಜ್ಞವನ್ನು ನಾಶಪಡಿಸಿದನು.

೧೭. ಆಗ ವಿಧಿಯು ಪ್ರಾರ್ಥನೆಮಾಡಲು ಕೂಡಲೇ ಈಶ್ವರನು ಪ್ರಸನ್ನನಾಗಿ ವಿಕೃತವಾದ ಯಜ್ಞವನ್ನು ಪುನಸ್ಸಂಧಾನ ಮಾಡಿದನು.

೧೮. ಆಗಿನಿಂದಲೂ ಆ ತೀರ್ಥವು ಸಕಲಪಾಪಗಳನ್ನೂ ನಾಶಪಡಿಸುವಂತಹ ಅಸದೃಶವಾದ ತೀರ್ಥವಾಯಿತು. ಸೋಮನು ಆ ತೀರ್ಥದಲ್ಲಿ ಸ್ನಾನ ಮಾಡಿ ಕ್ಷಯರೋಗಬಾಧೆಯಿಂದ ಪಾರಾದನು.

ತತ್ರ ಯೋ ವಿಧಿವತ್ ಸ್ನಾತ್ವಾ ಯಂ ಯಂ ಕಾಮಂ ವಿಚಿಂತಯೇತ್ ।
ತಂ ತಮಾಪ್ನೋತಿ ವಿಧಿಜೇ ನಾತ್ರ ಕಾರ್ಯಾ ವಿಚಾರಣಾ ॥ ೧೯ ॥

ಯತ್ರ ಯಜ್ಞೇಶ್ವರಃ ಸಾಕ್ಷಾದ್ಭಗವಾನ್ವಿಷ್ಣುರವ್ಯಯಃ ।
ಸ್ತುತೋ ದಕ್ಷೇಣ ದೇವೈಶ್ಚ ತತ್ತೀರ್ಥಂ ಹರಿಸಂಜ್ಞಿತಂ ॥ ೨೦ ॥

ತತ್ರ ಯೋ ವಿಧಿವನ್ಮರ್ತ್ಯಃ ಸ್ನಾಯಾದ್ಧರಿಪದೇ ಸತಿ ।
ಸ ವಿಷ್ಣೋರ್ವಲ್ಲಭೋ ಭೂಯಾದ್ಭುಕ್ತಿಮುಕ್ತ್ಯೇಕಭಾಜನಂ ॥ ೨೧ ॥

ಅತಃ ಪೂರ್ವದಿಶಿ ಕ್ಷೇತ್ರಂ ತ್ರಿಗಂಗಂ ನಾಮ ವಿಶ್ರುತಂ ।
ಯತ್ರ ತ್ರಿಪಥಗಾ ಸಾಕ್ಷಾದ್ದೃಶ್ಯತೇ ಸಕಲೈರ್ಜನೈಃ ॥ ೨೨ ॥

ತತ್ರ ಸ್ನಾತ್ವಾಥ ಸಂತರ್ಪ್ಯ ದೇವರ್ಷಿಪಿತೃಮಾನವಾನ್ ।
ಸಮ್ಯಕ್ಛ್ರದ್ಧಾಯುತೋ ಮರ್ತ್ಯೋ ಮೋದತೇ ದಿವಿ ದೇವವತ್॥ ೨೩ ॥

---

೧೯. ವಿಧಿಜಾತೇ! ಆ ತೀರ್ಥದಲ್ಲಿ ವಿಧಿವತ್ತಾಗಿ ಸ್ನಾನಮಾಡುವುದರಿಂದ ನೆನೆದ ಇಷ್ಟಾರ್ಥವೆಲ್ಲವೂ ನೆರವೇರುವುದು. ಈ ವಿಷಯದಲ್ಲಿ ಸಂಶಯ ಪಡಬಾರದು.

೨೦. ಅಲ್ಲಿ ದಕ್ಷಪ್ರಜಾಪತಿಯು ಮತ್ತು ದೇವತೆಗಳೂ ಸಹ ಯಜ್ಞ ನಿಯಾಮಕನಾದ, ನಾಶವಿಲ್ಲದ ಸಾಕ್ಷಾದ್ವಿಷ್ಣುಭಗವಂತನನ್ನು ಸ್ತುತಿಸಿರುವರು ಆ ತೀರ್ಥವು ಹರಿನಾಮಕವಾಗಿ ಪ್ರಸಿದ್ಧವಾಗಿದೆ.

೨೧. ಆ ಹರಿತೀರ್ಥದಲ್ಲಿ ಮನುಷ್ಯನು ವಿಧಿವತ್ತಾಗಿ ಸ್ನಾನಮಾಡಿದರೆ ಅವನು ವಿಷ್ಣುದೇವನಿಗೆ ಪ್ರಿಯನಾಗಿ ಭೋಗಮೋಕ್ಷಗಳಿಗೆ ಮುಖ್ಯಭಾಗಿಯಾಗುವನು.

೨೨. ಇದಕ್ಕೆ ಪೂರ್ವದಿಕ್ಕಿನಲ್ಲಿ ತ್ರಿಗಂಗೆಯೆಂಬ ಕ್ಷೇತ್ರವು ವಿಖ್ಯಾತವಾಗಿದೆ. ಅಲ್ಲಿ ತ್ರಿಪಥಗಾಮಿಯಾದ ಗಂಗೆಯು ಸಕಲಜನಗಳಿಗೂ ಕಾಣಬರುತ್ತದೆ.

೨೩. ಅಲ್ಲಿ ಉತ್ತಮಶ್ರದ್ಧೆಯಿಂದ ಸ್ನಾನಮಾಡಿ ದೇವ, ಋಷಿ, ಪಿತೃ, ಮಾನವರನ್ನು ತರ್ಪಣಾದಿಗಳಿಂದ ಸಂತೋಷಪಡಿಸಿದ ಮನುಷ್ಯನು ದೇವತೆಯಂತೆ ದೇವಲೋಕದಲ್ಲಿ ಆನಂದಿಸುವನು.

ತ್ರಿರಾತ್ರೋಪೋಷಿತಃ ಸ್ನಾತ್ವಾ ಮುಚ್ಯತೇ ಸರ್ವಕಿಲ್ಬಿಷೈಃ |
ಅಥ ಯಸ್ತತ್ರ ಗಾಂ ದದ್ಯಾದ್ಬ್ರಾಹ್ಮಣೇ ವೇದಪಾರಗೇ || ೨೪ ||

ಸ ಕದಾಚಿನ್ನ ಪಶ್ಯೇತ್ತು ದೇವಿ ವೈತರಣೀಂ ಯಮಂ |
ಅತ್ರ ಜಪ್ತಂ ಹುತಂ ದತ್ತಂ ಸರ್ವಮಾನಂತ್ಯಮಶ್ನುತೇ || ೨೫ ||

ಅತ್ರೈವ ಜಹ್ನುತೀರ್ಥಂ ಚ ಯತ್ರ ವೈ ಜಹ್ನುನಾ ಪುರಾ |
ರಾಜರ್ಷಿಣಾ ನಿಪೀತಾಭೂದ್ಗಂಡಷೀಕೃತ್ಯ ಸಾ ನದೀ || ೨೬ ||

ಪ್ರಸಾದಿತೇನ ಸಾ ತೇನ ಮುಕ್ತಾ ಕರ್ಣಾದ್ವಿನಿರ್ಗತಾ |
ತತ್ರ ಸ್ನಾತ್ವಾ ಮಹಾಭಾಗೇ ಯೋ ನರಃ ಶ್ರದ್ಧಯಾನ್ವಿತಃ || ೨೭ ||

ಸೋಪವಾಸಃ ಸಮಭ್ಯರ್ಚೇದ್ಬ್ರಾಹ್ಮಣಂ ವೇದಪಾರಗಂ |
ಭೋಜಯೇತ್ಪರಮಾನ್ನೇನ ಸ್ವರ್ಗೇ ಕಲ್ಪಂ ವಸೇತ್ಸ ತು || ೨೮ ||

---

೨೪-೨೫. ಅಲ್ಲಿ ಮೂರುದಿನ ಉಪವಾಸಮಾಡಿ ಸ್ನಾನಮಾಡುವುದರಿಂದ ಸಕಲಪಾಪಗಳ ವಿಮೋಚನೆಯಾಗುವುದು. ಅಲ್ಲಿ ವೇದಪಾರಂಗತನಾದ ಬ್ರಾಹ್ಮಣನಿಗೆ ಗೋದಾನಮಾಡಿದವನು ಯಾವಾಗಲೂ ವೈತರಣಿ ಮತ್ತು ಯಮರನ್ನು ನೋಡುವುದಿಲ್ಲ. ಅಲ್ಲಿ ಮಾಡಿದ ಜಪ, ಹೋಮ, ದಾನ ಇವೆಲ್ಲವೂ ಅನಂತ ಫಲದಾಯಕವಾಗುವುದು.

೨೬-೨೮. ಪೂರ್ವದಲ್ಲಿ ಜಹ್ನುವೆಂಬ ರಾಜರ್ಷಿಯು ಅಲ್ಲಿಯೇ ನದಿಯ ನೀರನ್ನೆಲ್ಲಾ ಪಾನಮಾಡಿದನು. ಅನಂತರ ಭಗೀರಥನು ಅವನನ್ನು ಪ್ರಾರ್ಥಿಸಲಾಗಿ ಪ್ರಸನ್ನನಾದ ಆ ಮುನಿಯು ತನ್ನ ಕರ್ಣದ್ವಾರದಿಂದ ಆ ನದಿಯನ್ನು ಹೊರಗೆಬಿಟ್ಟಿರುವನು. ಅದು ಜಹ್ನುತೀರ್ಥವೆಂದು ಪ್ರಸಿದ್ಧವಾಗಿದೆ. ಧನ್ಯೇ! ಅಲ್ಲಿ ಶ್ರದ್ಧೆಯಿಂದ ಸ್ನಾನಮಾಡಿ ಉಪವಾಸಪೂರ್ವಕವಾಗಿ ವೇದಾಧ್ಯಯನಸಂಪನ್ನನಾದ ಬ್ರಾಹ್ಮಣನನ್ನು ಪೂಜಿಸಿ ಅವನಿಗೆ ಪರಮಾನ್ನಭೋಜನಮಾಡಿಸಿದರೆ ಅವನು ಕಲ್ಪಪರ್ಯಂತವಾಗಿ ಸ್ವರ್ಗದಲ್ಲಿ ಭೋಗಿಸುವನು.

ಅಥ ಪಶ್ಚಾದ್ದಿಶಿ ಗತಂ ಕೋಟಿತೀರ್ಥಂ ಸುಮಧ್ಯಮೇ ।
ಯತ್ರ ಕೋಟಿಗುಣಂ ಪುಣ್ಯಂ ಭವೇತ್ಕೋಟೀಶದರ್ಶನಾತ್ ॥ ೨೯ ॥

ಉಷ್ಯೈಕಾಂ ರಜನೀಂ ತತ್ರ ಪುಂಡರೀಕಮವಾಪ್ನುಯಾತ್ ।
ತಸ್ಯೈವೋತ್ತರದಿಗ್ಭಾಗೇ ಸಪ್ತಗಂಗೇತಿ ವಿಶ್ರುತಂ ॥ ೩೦ ॥

ತೀರ್ಥಂ ಪರಮಕಂ ದೇವಿ ಸರ್ವಪಾತಕನಾಶನಂ ।
ಯತ್ರಾಶ್ರಮಾಶ್ಚ ಪುಣ್ಯಾ ವೈ ಸಪ್ತರ್ಷೀಣಾಂ ಮಹಾಮತೇ ॥ ೩೧ ॥

ತೇಷು ಸರ್ವೇಷು ತು ಪೃಥಕ್ ಸ್ನಾತ್ವಾ ಸಂತರ್ಪ್ಯ ದೇವತಾಃ ।
ಪಿತ್ರ್ಯಾಂಶ್ಚ ಲಭತೇ ಮರ್ತ್ಯ ಋಷಿಲೋಕಂ ಸನಾತನಂ ॥ ೩೨ ॥

ಭಗೀರಥೇನ ವೈ ರಾಜ್ಞಾ ಯದಾನೀತಾ ಸುರಾಪಗಾ ।
ತದಾ ಸಾ ಪ್ರೀತಯೇ ತೇಷಾಂ ಸಪ್ತಧಾರಾಗತಾಭವತ್ ॥ ೩೩ ॥

---

೨೯. ಸುಂದರಾಂಗೀ! ಜನ್ಹುತೀರ್ಥಕ್ಕೆ ಪಶ್ಚಿಮದಿಕ್ಕಿನಲ್ಲಿ ಕೋಟಿ ತೀರ್ಥವಿದೆ. ಅಲ್ಲಿ ಸ್ನಾನಮಾಡಿ ಕೋಟೀಶ್ವರ ದರ್ಶನಮಾಡಿದರೆ ಕೋಟಿಭಾಗ ಹೆಚ್ಚಿನಪುಣ್ಯ ಬರುತ್ತದೆ.

೩೦-೩೧. ಅಲ್ಲಿ ಒಂದುರಾತ್ರಿ ವಾಸಮಾಡಿದರೆ ಇಂದ್ರಲೋಕವು ಲಭಿಸುವುದು. ದೇವೀ! ಹಾಗೆಯೇ ಉತ್ತರದಿಕ್ಕಿನಲ್ಲಿ ಸಕಲಪಾಪಗಳನ್ನೂ ಪರಿಹರಿಸುವಂತಹ ಸಪ್ತಗಂಗಾ ಎಂದು ವಿಖ್ಯಾತವಾದ ಉತ್ತಮತೀರ್ಥವಿದೆ. ಅಲ್ಲಿ ಪುಣ್ಯಕರವಾದ ಸಪ್ತರ್ಷಿಗಳ ಆಶ್ರಮವಿದೆ.

೩೨. ಆ ತೀರ್ಥಗಳಲ್ಲೆಲ್ಲಾ ಪ್ರತ್ಯೇಕ ಪ್ರತ್ಯೇಕವಾಗಿ ಸ್ನಾನಮಾಡಿ ದೇವ ಪಿತೃಗಳ ತರ್ಪಣವನ್ನಾಚರಿಸುವುದರಿಂದ ಮನುಷ್ಯನು ಸನಾತನವಾದ ಋಷಿ ಲೋಕವನ್ನು ಹೊಂದುವನು.

೩೩-೩೪. ಭಗೀರಥರಾಜನು ಭೂಲೋಕಕ್ಕೆ ದೇವಗಂಗೆಯನ್ನು ತಂದಾಗ ಆ ಗಂಗೆಯು ಸಪ್ತಋಷಿಗಳ ಪ್ರೀತ್ಯರ್ಥವಾಗಿ ಏಳು ಭಾಗವಾಗಿ ಹರಿಯಿತು. ಆಗಿನಿಂದ ಆ ತೀರ್ಥವು ಸಪ್ತಗಂಗೆಯೆಂದು ಪ್ರಸಿದ್ಧಿಗೆ ಬಂದಿತು.

ಸಪ್ತಗಂಗಂ ತತಸ್ತೀರ್ಥಂ ಭುವಿ ವಿಖ್ಯಾತಿಮಾಗತಂ ।
ಸ ಆವರ್ತಂ ತತಃ ಪ್ರಾಪ್ಯ ಸಂತರ್ಪ್ಯಾಮರಪೂರ್ವಕಾನ್ ॥ ೩೪ ॥

ಸ್ನಾತ್ವಾ ದೇವೇಂದ್ರಭವನೇ ಮೋದತೇ ಯುಗಮೇವ ಚ ।
ತತೋ ಭದ್ರೇ ಸಮಾಸಾದ್ಯ ಕಪಿಲಾಹ್ರದಮುತ್ತಮಂ ॥ ೩೫ ॥

ಧೇನುಂ ದತ್ವಾ ದ್ವಿಜಾಗ್ರ್ಯಾಯ ಗೋಸಹಸ್ರಫಲಂ ಲಭೇತ್ ।
ಅತ್ರೈವ ನಾಗರಾಜಸ್ಯ ತೀರ್ಥಂ ಪರಮಪಾವನಂ ॥ ೩೬ ॥

ಅತ್ರಾಭಿಷೇಕಂ ಯಃ ಕುರ್ಯಾತ್ಸೋಽಭಯಂ ಸರ್ಪತೋ ಲಭೇತ್ ।
ತತೋ ಲಲಿತಕಂ ಪ್ರಾಪ್ಯ ಶಂತನೋಸ್ತೀರ್ಥಮುತ್ತಮಂ ॥ ೩೭ ॥

ಸ್ನಾತ್ವಾ ಸಂತರ್ಪ್ಯ ವಿಧಿವತ್ ಸ್ವರ್ಗಾದೀಂಲ್ಲಭತೇ ಗತಿಂ ।
ಯತ್ರ ಶಂತನುನಾ ಲಬ್ಧಾ ಗಂಗಾ ಮಾನುಷ್ಯಮಾಗತಾ ॥ ೩೮ ॥

---

೩೪-೩೫. ಅಲ್ಲಿಂದ ಆವರ್ತತೀರ್ಥಕ್ಕೆ ಹೋಗಿ ಅಲ್ಲಿ ಸ್ನಾನಮಾಡಿ ದೇವಾದಿಗಳಿಗೆ ತರ್ಪಣಕೊಡುವವನು ದೇವೇಂದ್ರಭವನದಲ್ಲಿ ಯುಗಪರ್ಯಂತವಾಗಿ ಸುಖಪಡುವನು.

೩೫-೩೬. ಭದ್ರೇ! ಆಮೇಲೆ ಉತ್ತಮವಾದ ಕಪಿಲಹ್ರದಕ್ಕೆ ಹೋಗಿ ದ್ವಿಜವರ್ಯನಿಗೆ ಗೋದಾನಮಾಡುವುದರಿಂದ ಸಾವಿರ ಗೋದಾನಗಳ ಫಲವು ಬರುವುದು.

೩೬-೩೭. ಅಲ್ಲಿಯೇ ಪರಮಪಾವನವಾದ ನಾಗರಾಜತೀರ್ಥವಿದೆ. ಅಲ್ಲಿ ಅಭಿಷೇಕಮಾಡಿದರೆ ಅವನಿಗೆ ಸರ್ಪಭೀತಿಯು ಪರಿಹಾರವಾಗುವುದು.

೩೭-೩೮. ಅಲ್ಲಿಂದ ಉತ್ತಮವಾದ ಲಲಿತಕವೆಂಬ ಶಂತನುತೀರ್ಥಕ್ಕೆ ಹೋಗಿ ಸ್ನಾನತರ್ಪಣಾದಿಗಳನ್ನು ವಿಧಿವತ್ತಾಗಿ ಮಾಡುವುದರಿಂದ ಸ್ವರ್ಗಾದಿ ಉತ್ತಮಲೋಕಗಳು ಲಭಿಸುತ್ತವೆ. ಅಲ್ಲಿ ಶಂತನುಚಕ್ರವರ್ತಿಗೆ ಗಂಗೆಯು ಮನುಷ್ಯರೂಪದಿಂದ ದೊರೆತಳು.

ತತ್ರೈವ ತತ್ಯಜೇ ದೇಹಂ ವಸೂಕ್ ಸೂತ್ವಾಸುವತ್ಸರಂ |
ತದ್ದೇಹೋ ನ್ಯಪತತ್ತತ್ರ ತತ್ರಾಭೂದ್ಭೀಷ್ಮಜನ್ಮ ಚ || ೩೯ ||

ತತ್ರ ಯಃ ಸ್ನಾತಿ ಮನುಜೋ ಭಕ್ಷಯೇದೌಷಧಿಂ ಚ ತಾಂ |
ಸ ನ ದುರ್ಗತಿಮಾಪ್ನೋತಿ ಗಂಗಾದೇವೀಪ್ರಸಾದತಃ || ೪೦ ||

ಭೀಮಸ್ಥಲಂ ತತಃ ಪ್ರಾಪ್ಯ ಯಃ ಸ್ನಾಯಾತ್ ಸುಕೃತೀ ನರಃ |
ಭೋಗಾನ್ ಭುಕ್ತ್ವೇಹ ದೇಹಾಂತೇ ಸ್ವರ್ಗತಿಂ ಸಮವಾಪ್ನುಯಾತ್ ||೪೧||

ಏತಾನ್ಯುದ್ದೇಶತೋ ದೇವಿ ತೀರ್ಥಾನಿ ಗದಿತಾನಿ ತೇ |
ಅನ್ಯಾನಿ ವೈ ಮಹಾಭಾಗೇ ಸಂತಿ ತತ್ರ ಸಹಸ್ರಶಃ || ೪೨ ||

ಯಸ್ಮಿನ್ ಕ್ಷೇತ್ರೇ ನರಃ ಸ್ನಾಯಾತ್ಕುಂಭಗೇಜ್ಯೇಜಗೇ ರವೌ |
ಸ ತು ಸ್ಯಾದ್ವಾಕ್ಪತಿಃ ಸಾಕ್ಷಾತ್ಪ್ರಭಾಕರ ಇವಾಪರಃ || ೪೩ ||

---

೩೯. ಆಕೆಯು ಅಲ್ಲಿಯೇ ಸಪ್ತವಸುಗಳನ್ನು ಪ್ರಸವಿಸಿ ಆಗಲೇ ಅವರನ್ನು ನೀರಿನಲ್ಲಿ ಮುಳುಗಿಸಿದಳು. ಭೀಷ್ಮಜನ್ಮವೂ ಅಲ್ಲಿಯೇ ಆಯಿತು.

೪೦. ಅಲ್ಲಿ ಸ್ನಾನಮಾಡಿ ಓಷಧಿಗಳನ್ನು ತಿನ್ನುವ ಮನುಷ್ಯನು ಗಂಗಾದೇವಿಯ ಪ್ರಸಾದದಿಂದ ಉತ್ತಮಗತಿಯನ್ನು ಹೊಂದುವನು; ದುರ್ಗತಿಯನ್ನು ಎಂದಿಗೂ ಹೊಂದುವುದಿಲ್ಲ.

೪೧. ಅನಂತರ ಭೀಮಸ್ಥಳಕ್ಕೆ ಹೋಗುವ ಪುಣ್ಯವಂತನಾದ ಮನುಷ್ಯನು ಅಲ್ಲಿ ಭೋಗಗಳನ್ನನುಭವಿಸಿ ಮೃತನಾದಮೇಲೆ ಸ್ವರ್ಗವನ್ನು ಹೊಂದುವನು.

೪೨. ದೇವೀ! ಉದ್ದೇಶಪೂರ್ವಕವಾಗಿ ಈ ತೀರ್ಥಗಳ ಮಹಿಮೆಯನ್ನು ನಿನಗೆ ಹೇಳಿರುವೆನು. ಧನ್ಯೇ! ಅಲ್ಲಿ ಇನ್ನೂ ಇತರ ಸಾವಿರಾರು ತೀರ್ಥಗಳಿವೆ.

೪೩. ರವಿಯು ಕುಂಭಗತನಾಗಿರುವಾಗ ಆ ಕ್ಷೇತ್ರದಲ್ಲಿ ಸ್ನಾನಮಾಡುವ ಮನುಷ್ಯನು ಸಾಕ್ಷಾತ್ಪ್ರಭಾಕರನಂತೆ ವಾಕ್ಪತಿಯಾಗುವನು.

ಅಥ ಯೋತೇ ಪ್ರಯೋಗಾದಿಪುಣ್ಯತೀರ್ಥೇ ಪೃಥೂದಕೇ ।
ಅಥ ಯೋ ವಾರುಣೇ ಯೋಗೇ ಮಹಾವಾರುಣಕೇ ತಥಾ　　॥ ೪೪ ॥

ಮಹಾಮಹಾವಾರುಣೇ ಚ ಸ್ನಾಯೊತ್ತತ್ರ ವಿಧಾನತಃ ।
ಸಂಪೂಜ್ಯ ಬ್ರಾಹ್ಮಣಾನ್ ಭಕ್ತ್ಯಾ ಸ ಲಭೇದ್ಬ್ರಹ್ಮಣಃ ಪದಂ　　॥ ೪೫ ॥

ಸಂಕ್ರಾಂತೌ ವಾಪ್ಯಮಾಯಾಂ ವಾ ವ್ಯತೀಪಾತೇ ಯುಗಾದಿಕೇ ।
ಪುಣ್ಯೇಽಹನಿ ತಥಾನ್ಯಸ್ಮಿನ್ ಯತ್ಕಿಂಚಿದ್ದಾನಮಾಚರೇತ್　　॥ ೪೬ ॥

ತತ್ತು ಕೋಟಿಗುಣಂ ಭೂಯಾತ್ಸತ್ಯಮೇತನ್ಮಯೋದಿತಂ ।
ಗಂಗಾದ್ವಾರಂ ಸ್ಮರೇದ್ಯೋ ವೈ ದೂರಸಂಸ್ಥೋಽಪಿ ಮಾನವಃ　　॥ ೪೭ ॥

ಸದ್ಗತಿಂ ಸಮವಾಪ್ನೋತಿ ಸ್ಮರನ್ನಂತೇ ಯಥಾ ಹರಿಂ ।
ಯಂ ಯಂ ದೇವಂ ಹರಿದ್ವಾರೇ ಪೂಜಯೇತ್ಪ್ರಯತೋ ನರಃ　　॥ ೪೮ ॥

---

೪೪-೪೫. ಅನಂತರ ಹೊರಟು ಪ್ರಯಾಗಮುಂತಾದ ಪುಣ್ಯತೀರ್ಥ, ಪೃಥೂದಕ, ವಾರುಣ, ಮಹಾವಾರುಣ, ಮಹಾಮಹಾವಾರುಣ ಇವುಗಳಲ್ಲಿ ಪರ್ವ ಕಾಲಗಳಲ್ಲಿ ವಿಧಾನೋಕ್ತಪ್ರಕಾರವಾಗಿ ಸ್ನಾನಮಾಡಿ ಭಕ್ತಿಯಿಂದ ಬ್ರಾಹ್ಮಣ ರನ್ನು ಪೂಜಿಸಿದರೆ ಅವನು ಬ್ರಹ್ಮಲೋಕವನ್ನು ಹೊಂದುವನು.

೪೬-೪೭. ಸಂಕ್ರಾಂತಿ, ಅಮಾವಾಸ್ಯೆ, ವ್ಯತೀಪಾತ, ಯುಗಾದಿ ಮುಂ ತಾದ ಪುಣ್ಯದಿನಗಳಲ್ಲಿ ಸಲ್ಪದಾನಮಾಡಿದರೂ ಅದು ಕೋಟಿಪಾಲು ಹೆಚ್ಚಾಗಿ ಫಲಕೊಡುವುದು. ನಾನು ಹೇಳಿರುವ ಈ ವಿಷಯವು ಸತ್ಯವಾದುದು.

೪೭-೪೮. ದೂರದಲ್ಲಿರುವ ಮನುಷ್ಯನೂ ಸಹ ಗಂಗಾದ್ವಾರವನ್ನು ಸ್ಮರಿ ಸಿದ್ದೇ ಆದರೆ ಅವನು ಅಂತ್ಯಕಾಲದಲ್ಲಿ ಹರಿಯನ್ನು ಸ್ಮರಿಸಿದವನಂತೆ ಸದ್ಗತಿ ಯನ್ನು ಪಡೆಯುವನು.

೪೮-೪೯. ಹರಿದ್ವಾರಕ್ಷೇತ್ರದಲ್ಲಿ ಜಿತೇಂದ್ರಿಯನಾದ ಮನುಷ್ಯನು ಯಾವಯಾವ ದೇವತೆಯನ್ನು ಪೂಜಿಸುವನೋ ಆಯಾಯಾ ದೇವನು ಪ್ರಸನ್ನ ನಾಗಿ ಅವನ ಮನೋರಥಗಳನ್ನು ಪೂರ್ಣಮಾಡುವನು.

ಸ ಸ ದೇವಃ ಸುಪ್ರಸನ್ನಃ ಪೂರಯೇತ್ತ್ವನ್ಮನೋರಥಾನ್ ।
ಏತದೇವ ತಪಸ್ಥಾನಮೇತದೇವ ಜಪಸ್ಥಲಂ ॥ ೪೯ ॥

ಏತದೇವ ಹುತಸ್ಥಾನಂ ಯತ್ರ ಗಂಗಾ ಭುವಂ ಗತಾ ।
ಯಸ್ತತ್ರ ನಿಯತೋ ಮರ್ತ್ಯಃ ಗಂಗಾನಾಮಸಹಸ್ರಕಂ ॥ ೫೦ ॥

ತ್ರಿಕಾಲಂ ಪಠತಿ ಸ್ನಾತ್ವಾ ಸೋಽಕ್ಷಯಾಂ ಸಂತತಿಂ ಲಭೇತ್ ।
ಗಂಗಾದ್ವಾರೇ ಪುರಾಣಂ ತು ಶೃಣುಯಾದ್ಯಸ್ತು ಭಕ್ತಿತಃ ॥ ೫೧ ॥

ನಿಯಮೇನ ಮಹಾಭಾಗೇ ಸ ಯಾತಿ ಪದಮವ್ಯಯಂ ।
ಹರಿದ್ವಾರಸ್ಯ ಮಾಹಾತ್ಮ್ಯಂ ಯಃ ಶೃಣೋತಿ ನರೋತ್ತಮಃ ॥ ೫೨ ॥

ಪಠೇದ್ವಾ ಭಕ್ತಿಸಂಯುಕ್ತಃ ಸೋಽಪಿ ಸ್ನಾನಫಲಂ ಲಭೇತ್ ।
ದೇವಿ ತಿಷ್ಠತಿ ಯದ್ಗೇಹೇ ಮಾಹಾತ್ಮ್ಯಂ ಲಿಖಿತಂ ತ್ವಿದಂ ॥ ೫೩ ॥

---

೪೯-೫೦. ಮೊಟ್ಟಮೊದಲು ಗಂಗೆಯು ಭೂಲೋಕದಲ್ಲಿ ನೆಲೆಸಿದ ಸ್ಥಾನವಾದ ಈ ಕ್ಷೇತ್ರವು ತಪಸ್ಸು, ಜಪ, ಹೋಮ ಇವುಗಳಿಗೆ ಅತ್ಯಂತ ಪ್ರಶಸ್ತವಾದ ಸ್ಥಳವು. ಇಂತಹ ಉತ್ತಮಸ್ಥಳವು ಬೇರೊಂದಿಲ್ಲ.

೫೦-೫೧. ಆ ಕ್ಷೇತ್ರದಲ್ಲಿ ಮನುಷ್ಯನು ಜಿತೇಂದ್ರಿಯನಾಗಿ ಸ್ನಾನಮಾಡಿ ಗಂಗಾಸಹಸ್ರನಾಮವನ್ನು ಪ್ರತಿದಿನವೂ ಮೂರುಕಾಲಗಳಲ್ಲಿಯೂ ಪಠನಮಾಡಿದಲ್ಲಿ ಅವನು ಅಕ್ಷಯಸಂತತಿಯನ್ನು ಹೊಂದುವನು.

೫೧-೫೨. ಧನ್ಯೇ! ಗಂಗಾದ್ವಾರದಲ್ಲಿ ಭಕ್ತಿಯಿಂದ ಪುರಾಣಶ್ರವಣ ಮಾಡುವ ಮನುಷ್ಯನು ತಪ್ಪದೇ ಶಾಶ್ವತಸ್ಥಾನಕ್ಕೆ ಹೋಗುವನು.

೫೨-೫೩. ಹರಿದ್ವಾರದ ಮಾಹಾತ್ಮ್ಯೆಯನ್ನು ಭಕ್ತಿಯುತನಾಗಿ ಶ್ರವಣ ಪಠನಮಾಡುವ ಮನುಷ್ಯೋತ್ತಮನೂ ಸಹ ಅಲ್ಲಿ ಸ್ನಾನಮಾಡಿದ ಫಲವನ್ನು ಹೊಂದುವನು.

೫೩-೫೪. ಮೋಹಿನೀದೇವಿಯೇ! ಈ ಮಾಹಾತ್ಮ್ಯೆಯ ಲಿಖಿತಪುಸ್ತಕ

ತದ್ಗೃಹೇ ಸರ್ಪಚೋರಾಗ್ನಿಗ್ರಹರಾಜಭಯಂ ನ ಹಿ ।
ವರ್ಧಂತೇ ಸಂಪದಃ ಸರ್ವಾ ವಿಷ್ಣುದೇವಪ್ರಸಾದತಃ ॥ ೫೪ ॥

ಇತಿ ಶ್ರೀನಾರದೀಯಮಹಾಪುರಾಣೋತ್ತರಭಾಗೇ ವಸುಮೋಹಿನೀ
ಸಂವಾದೇ ಹರಿದ್ವಾರಮಾಹಾತ್ಮ್ಯಂ ನಾಮ
ಷಟ್‌ಷಷ್ಟಿತಮೋಽಧ್ಯಾಯಃ

ಇತಿ ಗಂಗಾದ್ವಾರ (ಹರಿದ್ವಾರ) ಮಾಹಾತ್ಮ್ಯಂ ಸಮಾಪ್ತಂ



---

ವನ್ನಿಟ್ಟುಕೊಂಡಿರುವವರ ಮನೆಯಲ್ಲಿ ಸರ್ಪ, ಕಳ್ಳಕಾಕರರು, ಗ್ರಹ, ರಾಜ ಇವರುಗಳ ಭಯವಿರುವುದಿಲ್ಲ; ವಿಷ್ಣುದೇವನ ಅನುಗ್ರಹದಿಂದ ಆ ಮನೆಯಲ್ಲಿ ಸಕಲ ಸಂಪತ್ತುಗಳೂ ಅಭಿವೃದ್ಧಿಯಾಗುತ್ತವೆ.

ಇಂತು ಶ್ರೀನಾರದೀಯಪುರಾಣೋತ್ತರಭಾಗದಲ್ಲಿ ವಸು ಮೋಹಿನೀ
ಸಂವಾದದೊಳು ಹರಿದ್ವಾರಮಾಹಾತ್ಮ್ಯೆಯೆಂಬ
ಅರವತ್ತಾರನೆಯ ಅಧ್ಯಾಯವು
ಮುಗಿದುದು.



## ಸಪ್ತಷಷ್ಟಿತಮೋಽಧ್ಯಾಯಃ



### ಬದರೀಮಾಹಾತ್ಮ್ಯಂ ಪ್ರಾರಭ್ಯತೇ

**ಮೋಹಿನ್ಯುವಾಚ**

ಅಹೋ ದ್ವಿಜವರಾಖ್ಯಾತಂ ಗಂಗಾದ್ವಾರಸಮುದ್ಭವಂ ।
ಮಾಹಾತ್ಮ್ಯಮಧುನಾ ಬ್ರೂಹಿ ಬದರ್ಯಾಃ ಪಾಪನಾಶನಂ ॥ ೧ ॥

**ವಸುರುವಾಚ**

ಶೃಣು ಭದ್ರೇ ಪ್ರವಕ್ಷ್ಯಾಮಿ ಮಾಹಾತ್ಮ್ಯಂ ಬದರೀಭವಂ !
ಯಚ್ಛ್ರುತ್ವಾ ಮುಚ್ಯತೇ ಜಂತುರ್ಜನ್ಮಸಂಸಾರಬಂಧನಾತ್ ॥ ೨ ॥

ಬದರ್ಯಾಖ್ಯಂ ಹರೇಃ ಕ್ಷೇತ್ರಂ ಸರ್ವಪಾತಕನಾಶನಂ ।
ಮುಕ್ತಿದಂ ಭವಭೀತಾನಾಂ ಕಲಿದೋಷಹರಂ ನೃಣಾಂ ॥ ೩ ॥

---

### ಅರವತ್ತೇಳನೆಯ ಅಧ್ಯಾಯ

೧. ಆಶ್ಚರ್ಯ! ಬ್ರಾಹ್ಮಣೋತ್ತಮನಾದ ವಸುವೇ! ನೀನು ಹೇಳಿದ ಹರಿದ್ವಾರದ ಮಾಹಾತ್ಮ್ಯೆಯನ್ನು ಕೇಳಿ ಧನ್ಯಳಾದೆನು. ಈಗ ಪಾಪನಾಶಕವಾದ ಬದರೀಮಾಹಾತ್ಮ್ಯೆಯನ್ನು ಹೇಳು ಎಂಬುದಾಗಿ ಮೋಹಿನಿಯು ವಸುವನ್ನು ಕೇಳಿದಳು.

೨. ವಸುವು ಹೇಳಿದನು:—ಭದ್ರೇ! ಬದರೀಕ್ಷೇತ್ರದ ಮಾಹಾತ್ಮ್ಯೆಯನ್ನು ಹೇಳುವೆನು ಕೇಳು. ಆ ಮಾಹಾತ್ಮ್ಯೆಯನ್ನು ಶ್ರವಣಮಾಡುವುದರಿಂದ ಪ್ರಾಣಿಯು ಸಂಸಾರಬಂಧನದಿಂದ ಬಿಡುಗಡೆಯಾಗುವನು.

೩. ಬದರೀ ಎಂಬುದು ಹರಿಯ ಕ್ಷೇತ್ರವು. ಅದು ಸಕಲಪಾಪಗಳನ್ನು ಪರಿಹರಿಸುವುದೂ, ಮುಕ್ತಿದಾಯಕವೂ, ಸಂಸಾರದಿಂದ ಭೀತರಾಗಿರುವ ಮನುಷ್ಯರಿಗೆ ಕಲಿದೋಷವನ್ನು ಪರಿಹರಿಸುವುದೂ ಆಗಿದೆ.

ಯತ್ರ ನಾರಾಯಣೋ ದೇವೋ ನರಶ್ಚ ಭಗವಾನೃಷಿಃ ।
ಧರ್ಮಾನ್ಮೂರ್ತ್ಯಾಂ ಲಬ್ಧಜನೀ ಯಯತುರ್ಗಂಧಮಾದನಂ ॥ ೪ ॥

ಯತ್ರಾಸ್ತಿ ಬದರೀವೃಕ್ಷೋ ಬಹುಗಂಧಫಲಾನ್ವಿತಃ ।
ತಸ್ಮಿನ್ ಸ್ಥಾನೇ ಮಹಾಭಾಗ ಆಕಲ್ಪಾದಾಸ್ಥಿತೌ ತಪಃ ॥ ೫ ॥

ನಾರದಾದ್ಯೈರ್ಮುನಿವರೈಃ ಕಲಾಪಗ್ರಾಮವಾಸಿಭಿಃ ।
ಸಿದ್ಧಸಂಘೈಃ ಪರಿವೃತೋ ಲೋಕಾನಾಂ ಸ್ಥಿತಯೇ ಸ್ಥಿತೌ ॥ ೬ ॥

ಯತ್ರಾಗ್ನಿತೀರ್ಥಂ ವಿಖ್ಯಾತಂ ವರ್ತತೇ ಸರ್ವಸಿದ್ಧಿದಂ ।
ಮಹಾಪಾತಕಿನಸ್ತತ್ರ ಸ್ನಾತ್ವಾ ಶುದ್ಧ್ಯಂತಿ ಪಾತಕಾತ್ ॥ ೭ ॥

ದುರ್ವರ್ಣಂ ಹಾಟಕಂ ಯದ್ವದಗ್ನೌ ಧ್ಮಾತಂ ವಿಶುದ್ಧ್ಯತಿ ।
ತಥಾಗ್ನಿತೀರ್ಥ ಆಪ್ಲುತ್ಯ ದೇಹೀ ಪಾಪೈರ್ವಿಮುಚ್ಯತೇ ॥ ೮ ॥

---

೪. ಅಲ್ಲಿ ನಾರಾಯಣದೇವನು ಮತ್ತು ನರನೆಂಬ ಪೂಜ್ಯನಾದ ಋಷಿಯೂ ಸಹ ಧರ್ಮದೇವನಿಂದ ಮೂರ್ತೀದೇವಿಯಲ್ಲಿ ಆವಿರ್ಭವಿಸಿ ಗಂಧಮಾದನಕ್ಕೆ ಹೊರಟರು.

೫-೬. ಮಹಾಭಾಗೇ! ಬಹು ರಸವತ್ತಾದ ಫಲಗಳಿಂದ ತುಂಬಿರುವ ಬದರೀವೃಕ್ಷವಿರುವೆಡೆಯಲ್ಲಿ ಅವರಿಬ್ಬರೂ ಕಲ್ಪಾರಂಭದಿಂದಲೂ ತಪಸ್ಸು ಮಾಡುತ್ತಾ ಕಲಾಪಗ್ರಾಮವಾಸಿಗಳಾದ ನಾರದಾದಿಮುನಿವರರು ಮತ್ತು ಸಿದ್ಧ ಸಂಘಗಳಿಂದ ಪರಿವೃತರಾಗಿ ಲೋಕರಕ್ಷಕರಾಗಿರುವರು.

೭. ಅಲ್ಲಿ ಸಕಲಸಿದ್ಧಿದಾಯಕವಾದ ಅಗ್ನಿತೀರ್ಥವೆಂಬ ಪ್ರಸಿದ್ಧತೀರ್ಥ ವಿದೆ. ಅಲ್ಲಿ ಸ್ನಾನಮಾಡುವುದರಿಂದ ಮಹಾಪಾತಕಿಗಳೂ ಸಹ ಶುದ್ಧರಾಗುವರು.

೮. ಸರಿಯಾದ ಬಣ್ಣವಿಲ್ಲದ ಬಂಗಾರವು ಬೆಂಕಿಯಲ್ಲಿ ಪುಟಹಾಕುವುದ ರಿಂದ ಶುದ್ಧವಾಗುವಂತೆ ಅಗ್ನಿತೀರ್ಥದಲ್ಲಿ ಸ್ನಾನಮಾಡುವುದರಿಂದ ಆತ್ಮನು ಪಾಪಗಳನ್ನು ಕಳೆದುಕೊಳ್ಳುವನು.

ಚಾಂದ್ರಾಯಣಸಹಸ್ರೈಸ್ತು ಕೃಚ್ಛ್ರೈಃ ಕೋಟಿಭಿರೇವ ಚ ।
ಯತ್ಫಲಂ ಲಭತೇ ಮರ್ತ್ಯಸ್ತತ್ಸ್ನಾನಾದ್ವಹ್ನಿತೀರ್ಥತಃ ॥ ೯ ॥

ಶಿಲಾಃ ಪಂಚಾಪಿ ತತ್ತೀರ್ಥೇ ಸಂತಿ ಯನ್ಮಧ್ಯತಃ ಸ್ಥಿತಂ ।
ಅಗ್ನಿತೀರ್ಥಂ ವಿಧಿಸುತೇ ದರ್ಶನಾತ್ತ್ವಘಘಾತಕಂ ॥ ೧೦ ॥

ನಾರದೋ ಯತ್ರ ಭಗವಾಂಸ್ತಪಸ್ತೇಪೇ ಸುದಾರುಣಂ ।
ಸಾ ಶಿಲಾ ನಾರದೀ ನಾಮ ದರ್ಶನಾದೇವ ಮುಕ್ತಿದಾ ॥ ೧೧ ॥

ನಿತ್ಯದಾ ಯತ್ರ ಸಾನ್ನಿಧ್ಯಂ ಹರೇರಸ್ತಿ ಸುಲೋಚನೇ ।
ತತ್ರ ನಾರದಕುಂಡಂ ಚ ಯತ್ರ ಸ್ನಾತೋ ನರಃ ಶುಚಿಃ ॥ ೧೨ ॥

ಭುಕ್ತಿಂ ಮುಕ್ತಿಂ ಹರೇರ್ಭಕ್ತಿಂ ಯದ್ಯದ್ವಾಂಛೇತ್ತು ತಲ್ಲಭೇತ್ ।
ಏತಸ್ಯಾಂ ಯೋ ನರೋ ಭಕ್ತ್ಯಾ ಸ್ನಾನಂ ದಾನಂ ಸುರಾರ್ಚನಂ ॥ ೧೩ ॥

---

೯. ಸಾವಿರಾರು ಚಾಂದ್ರಾಯಣ ಮತ್ತು ಕೋಟ್ಯಾಂತರ ಕೃಚ್ಛ್ರವ್ರತಗಳನ್ನಾಚರಿಸುವುದರಿಂದುಂಟಾಗುವ ಫಲವನ್ನು ಮನುಷ್ಯನು ಅಗ್ನಿತೀರ್ಥದಲ್ಲಿ ಸ್ನಾನಮಾಡುವ ಮಾತ್ರದಿಂದಲೇ ಪಡೆಯುವನು.

೧೦. ಆ ತೀರ್ಥದಲ್ಲಿ ಸುತ್ತಲೂ ಪಂಚಶಿಲೆಗಳಿವೆ. ಅವುಗಳ ಮಧ್ಯದಲ್ಲಿರುವುದೇ ಅಗ್ನಿತೀರ್ಥವು. ವಿಧಿಸುತೇ! ಅದರ ದರ್ಶನಮಾಡುವ ಮಾತ್ರದಿಂದ ಪಾಪಪರಿಹಾರವಾಗುವುದು.

೧೧. ಪೂಜ್ಯನಾದ ನಾರದನು ಕುಳಿತು ತಪಸ್ಸುಮಾಡಿದ ಅತ್ಯಂತ ಕಠಿನವಾದ ಶಿಲೆಯೇ ನಾರದೀಶಿಲೆಯೆಂದು ಪ್ರಸಿದ್ಧವಾಗಿದೆ. ಅದು ದರ್ಶನಮಾತ್ರದಿಂದ ಮುಕ್ತಿಯನ್ನು ಕೊಡುತ್ತದೆ.

೧೨. ಸುಲೋಚನೇ! ಅಲ್ಲಿ ಯಾವಾಗಲೂ ಹರಿಯ ಸಾನ್ನಿಧ್ಯವಿರುತ್ತದೆ. ಅಲ್ಲಿರುವ ನಾರದಕುಂಡದಲ್ಲಿ ಸ್ನಾನಮಾಡುವುದರಿಂದ ಮನುಷ್ಯನು ಪರಿಶುದ್ಧನಾಗುವನು.

೧೩-೧೪. ಆ ತೀರ್ಥದಲ್ಲಿ ಸ್ನಾನಮಾಡುವುದರಿಂದಲೇ ಭುಕ್ತಿ, ಮುಕ್ತಿ, ಹರಿಭಕ್ತಿ ಹೆಚ್ಚೇನು ಅಪೇಕ್ಷಿಸಿದುದೆಲ್ಲವೂ ಲಭಿಸುವುವು. ಈ ತೀರ್ಥದಲ್ಲಿ ಭಕ್ತಿ

ಹೋಮಂ ಜಪಂ ತಥಾನ್ಯದ್ವಾ ಯತ್ಕರೋತಿ ತಪಸ್ವಿಯಃ ।
ವೈನತೇಯಶಿಲಾ ಚಾನ್ಯಾ ತಸ್ಮಿನ್ ಕ್ಷೇತ್ರೇ ಶುಭಾವಹಾ ॥ ೧೪ ॥

ಯತ್ರ ತಪ್ತಂ ತಪಸ್ತೀವ್ರಂ ಗರುಡೇನ ಮಹಾತ್ಮನಾ ।
ತ್ರಿಂಶದ್ವರ್ಷಸಹಸ್ರಾಣಿ ಹರಿದರ್ಶನಕಾಮ್ಯಯಾ ॥ ೧೫ ॥

ತತಃ ಪ್ರಸನ್ನೋ ಭಗವಾನ್ ದದೌ ತಸ್ಮೈ ವರಂ ಶುಭೇ ।
ಅಜೇಯೋ ದೈತ್ಯಸಂಘಾನಾಂ ನಾಗಾನಾಂ ಚ ವಿಭೀಷಣಃ ॥ ೧೬ ॥

ವಾಹನಂ ಭವ ಮೇ ವತ್ಸ ಪ್ರಸನ್ನೋಽಹಂ ತವೋಪರಿ ।
ತ್ವನ್ನಾಮ್ನೇಯಂ ಶಿಲಾಖ್ಯಾತಿಂ ಗಮಿಷ್ಯತಿ ಮಹೀತಲೇ ॥ ೧೭ ॥

ದರ್ಶನಾತ್ಪುಣ್ಯದಾ ನೄಣಾಂ ಯತ್ರ ತಪ್ತಂ ತ್ವಯಾ ತಪಃ ।
ಅತ್ರ ಮುಖ್ಯತಮೇ ಗಂಗಾತೀರ್ಥೇ ಮತ್ಪ್ರೀತಿಕಾಮ್ಯಯಾ ॥ ೧೮ ॥

---

ಪೂರ್ವಕವಾಗಿ ಮಾಡಿದ ಸ್ನಾನ, ದಾನ, ದೇವಪೂಜೆ, ಹೋಮ, ಜಪ ಮುಂತಾದ ಕರ್ಮವೆಲ್ಲವೂ ಅಕ್ಷಯವಾಗುವುವು.

೧೪-೧೫. ಆ ಕ್ಷೇತ್ರದಲ್ಲಿ ಮಂಗಳಕರವಾದ ವೈನತೇಯಶಿಲೆಯೆಂಬ ಇನ್ನೊಂದು ತೀರ್ಥವಿದೆ. ಅಲ್ಲಿ ಮಹಾತ್ಮನಾದ ಗರುಡನು ಹರಿಯ ದರ್ಶನವನ್ನು ಪಡೆಯಬೇಕೆಂಬ ಬಯಕೆಯಿಂದ ಮೂವತ್ತು ವರ್ಷಗಳಕಾಲ ಉಗ್ರತಪಸ್ಸನ್ನು ಮಾಡಿದನು.

೧೬-೨೦. ಶೋಭನಾಂಗೀ! ಆ ತಪಸ್ಸಿಗೆ ಮೆಚ್ಚಿ ಭಗವಂತನು ಅವನಿಗೆ ಈರೀತಿಯಾಗಿ ವರಕೊಟ್ಟನು. ವತ್ಸ! ನಿನಗೆ ನಾನು ಪ್ರಸನ್ನನಾಗಿರುವೆನು ನೀನು ದೈತ್ಯರಾರಿಂದಲೂ ಜಯಿಸಲಶಕ್ಯನು, ಸರ್ಪಗಳಿಗೆ ಭಯಂಕರನೂ ಆಗಿ ನನಗೆ ವಾಹನವಾಗಿರು! ಈ ಶಿಲೆಯು ಲೋಕದಲ್ಲಿ ನಿನ್ನ ಹೆಸರಿನಿಂದಲೇ ಪ್ರಸಿದ್ಧಿಹೊಂದಲಿ. ನೀನು ತಪಸ್ಸುಮಾಡಿದ ಸ್ಥಳವಾದ ಈ ಶಿಲೆಯ ದರ್ಶನಮಾತ್ರದಿಂದ ಮನುಷ್ಯರಿಗೆ ಪುಣ್ಯವು ಬರಲಿ! ಇಲ್ಲಿರುವ ಅತ್ಯಂತ ಮುಖ್ಯವಾದ ಗಂಗಾತೀರ್ಥದಲ್ಲಿ ನನ್ನ ಅನುಗ್ರಹವಾಗಬೇಕೆಂಬ ಆಶೆಯಿಂದ ಸ್ನಾನ

ಅವಿರಸ್ತು ಮಹಾಭಾಗ ಪುಣ್ಯದಾ ಸ್ನಾನಕಾರಿಣಾಂ |
ಪಂಚಗಂಗೇ ತು ಯಃ ಸ್ನಾತ್ವಾ ದೇವಾದೀಂಸ್ತರ್ಪಯಿಷ್ಯತಿ || ೧೯ ||

ನ ತಸ್ಯ ಪುನರಾವೃತ್ತಿರ್ಬ್ರಹ್ಮಲೋಕಾತ್ಸನಾತನಾತ್ |
ಏವಂ ದತ್ವಾ ವರಂ ವಿಷ್ಣುರ್ಬಭೂವಾಂತರ್ಹಿತಸ್ತದಾ || ೨೦ ||

ಗರುಡೋಽಪ್ಯಾಜ್ಞಯಾ ವಿಷ್ಣೋರ್ವಾಹನತ್ವಮುಪಾಗತಃ |
ತತಃ ಪ್ರಭೃತಿ ತತ್ತೀರ್ಥಂ ಜಾತಂ ಪಾಪವಿನಾಶನಂ || ೨೧ ||

ಪುಣ್ಯದಂ ವೈ ಸ್ಮರೇಚ್ಚಾಪಿ ವೈನತೇಯಗತಿಪ್ರದಂ |
ಅಥಾನ್ಯಾ ತು ಶಿಲಾ ತತ್ರ ವಾರಾಹೀತಿ ಶುಭಾವಹಾ || ೨೨ ||

ಯತ್ರೋದ್ಧೃತ್ಯ ಮಹೀಂ ದೇವೋ ಹಿರಣ್ಯಾಕ್ಷಂ ನಿಪಾತ್ಯ ಚ |
ಶಿಲಾರೂಪೇಣ ಚಾಕ್ರಮ್ಯ ಸ್ಥಿತಃ ಪಾಪವಿನಾಶನಃ || ೨೩ ||

---

ಮಾಡುವ ಜನರಿಗೆ ಇದು ಪುಣ್ಯದಾಯಕವಾಗಲಿ. ಪಂಚಗಂಗೆಯಲ್ಲಿ ಸ್ನಾನ ಮಾಡಿ ದೇವಾದಿಗಳಿಗೆ ತರ್ಪಣಕೊಡುವ ಮನುಷ್ಯರಿಗೆ ಸನಾತನವಾದ ಬ್ರಹ್ಮ ಲೋಕ ಪ್ರಾಪ್ತಿಯಾಗುವುದು. ಅವನು ಅಲ್ಲಿಂದ ಪುನಃ ಹಿಂತಿರುಗುವುದಿಲ್ಲ. ಈ ರೀತಿಯಾದ ವರವನ್ನು ಕೊಟ್ಟು ವಿಷ್ಣುವು ಅಂತರ್ಧಾನಹೊಂದಿದನು.

೨೧. ಗರುಡನೂ ಸಹ ವಿಷ್ಣುವಿನ ಅಪ್ಪಣೆಯಂತೆ ಅವನಿಗೆ ವಾಹನ ವಾದನು. ಆಗಿನಿಂದಲೂ ಆ ತೀರ್ಥವು ಪಾಪನಾಶಕವಾಯಿತು.

೨೨. ಗರುಡನಿಗೆ ಸದ್ಗತಿಯನ್ನುಕೊಟ್ಟ ಆ ತೀರ್ಥವನ್ನು ಸ್ಮರಿಸಿದ್ದೇ ಆದರೆ ಪುಣ್ಯವು ಬರುವುದು. ಅಲ್ಲಿಯೇ ಮಂಗಳಕರವಾದ ವಾರಾಹೀ ಎಂಬ ಇನ್ನೊಂದು ಶಿಲೆಯಿದೆ.

೨೩. ಅಲ್ಲಿ ಪಾಪವಿಮೋಚಕನಾದ ನಾರಾಯಣದೇವನು ಭೂಮಿ ಯನ್ನು ಮೇಲಕ್ಕೆತ್ತಿ ಹಿರಣ್ಯಾಕ್ಷನನ್ನು ಕೊಂದು ಶಿಲಾರೂಪದಿಂದ ಸನ್ನಿಹಿತ ನಾಗಿರುವನು.

ತತ್ರ ಯೋ ಮನುಜೋ ಗತ್ವಾ ಗಂಗಾಂಭಸ್ಯಮಲೇ ಪ್ಲುತಃ ।
ಪೂಜಯೇತ್ತಾಂ ಶಿಲಾಂ ಭಕ್ತ್ಯಾ ಸ ನ ದುರ್ಗತಿಮಾಪ್ನುಯಾತ್ ॥ ೨೪ ॥

ಅಥಾನ್ಯಾ ನಾರಸಿಂಹಾಖ್ಯಾ ಶಿಲಾ ತತ್ರ ಸುರೇಶ್ವರೀ ।
ಹಿರಣ್ಯಕಶಿಪುಂ ಹತ್ವಾ ಸ್ಥಿತೋ ಯತ್ರ ಬಭೂವಹ ॥ ೨೫ ॥

ತತಃ ಸುರರ್ಷಿಭಿಃ ಸರ್ವೈಃ ಕ್ರೋಧಸ್ತಸ್ಯ ನಿವಾರಿತಃ ।
ಪ್ರಾರ್ಥಿತಶ್ಚ ವಿಶಾಲಾಯಾಂ ಸ್ಥಾತುಂ ತತ್ರ ಸದೈವ ಹಿ ॥ ೨೬ ॥

ಚತುರ್ಭುಜಸ್ತಥಾ ತತ್ರ ಶಿಲಾರೂಪಮುಪಾಗತಃ ।
ಜಲಕ್ರೀಡಾಪರೋ ನಿತ್ಯಂ ವರ್ತತೇ ತೋಯಮಧ್ಯಗಃ ॥ ೨೭ ॥

ತತ್ರ ಯಃ ಸ್ನಾತಿ ಮನುಜೋ ನೃಹರೇಃ ಪೂಜಯೇಚ್ಛಿಲಾಂ ।
ಸ ಲಭೇದ್ವೈಷ್ಣವಂ ಧಾಮ ಪುನರಾವೃತ್ತಿದುರ್ಲಭಂ ॥ ೨೮ ॥

---

೨೪. ಅಲ್ಲಿಗೆ ಹೋಗಿ ನಿರ್ಮಲವಾದ ಗಂಗೋದಕದಲ್ಲಿ ಸ್ನಾನಮಾಡಿ ಭಕ್ತಿಯಿಂದ ಆ ಶಿಲೆಯನ್ನು ಪೂಜಿಸುವವನು ಎಂದಿಗೂ ದರ್ಗತಿಯನ್ನು ಹೊಂದಲಾರನು.

೨೫-೨೬. ಸುರೇಶ್ವರೀ! ಅಲ್ಲಿಯೇ ನರಸಿಂಹ್ಮವೆಂಬ ಮತ್ತೊಂದು ಶಿಲೆಯಿದೆ. ಅಲ್ಲಿ ದೇವನು ಹಿರಣ್ಯಕಶಿಪುವನ್ನು ಸಂಹರಿಸಿ ರೌದ್ರಾಕಾರವನ್ನು ತಾಳಿದಾಗ ದೇವರ್ಷಿಗಳೆಲ್ಲರೂ ಪ್ರಾರ್ಥನೆಮಾಡಿ ಅವನ ಕ್ರೋಧವನ್ನು ಶಾಂತಿಗೊಳಿಸಿ ಆ ದೇವನನ್ನು ವಿಶಾಲೆಯಲ್ಲಿಯೇ ಸರ್ವದಾ ಸನ್ನಿಹಿತನಾಗಿರಬೇಕೆಂದು ಪ್ರಾರ್ಥಿಸಿರುವರು.

೨೭. ಅವರ ಪ್ರಾರ್ಥನೆಯನ್ನು ಲಾಲಿಸಿ ಚತುರ್ಭುಜನಾದ ದೇವನು ಶಿಲಾರೂಪವನ್ನು ಹೊಂದಿ ಜಲಕ್ರೀಡಾಪರನಾಗಿ ಯಾವಾಗಲೂ ನೀರಿನ ಮಧ್ಯದಲ್ಲಿರುವನು.

೨೮. ಅಲ್ಲಿ ಸ್ನಾನಮಾಡಿ ನರಹರಿಯ ಶಿಲೆಯನ್ನು ಪೂಜಿಸುವುದರಿಂದ ಮನುಷ್ಯನು ಪುನರಾವೃತ್ತಿರಹಿತವಾದ ವೈಷ್ಣವಸ್ಥಾನವನ್ನು ಪಡೆಯುವನು.

ಪಂಚಮೀಂ ತು ಶಿಲಾಂ ದೇವಿ ವಹ್ನಿಕುಂಡತಟಸ್ಥಿತಾಂ ।
ನರನಾರಾಯಣಾಖ್ಯಾಂ ಚ ವಕ್ಷ್ಯಾಮಿ ಶೃಣು ಸಾಂಪ್ರತಂ ॥ ೨೯ ॥

ಕೃತೇ ಯುಗೇ ತು ಸರ್ವೇಷಾಂ ನರನಾರಾಯಣೋ ಹರಿಃ ।
ಪ್ರತ್ಯಕ್ಷಂ ವಸತೇ ತತ್ರ ಭುಕ್ತಿಮುಕ್ತಿಪ್ರದಾಯಕಃ ॥ ೩೦ ॥

ತ್ರೇತಾಯಾಂ ಮುನಿಭಿರ್ದೇವೈರ್ಯೋಗಿಭಿರ್ದೃಶ್ಯತೇ ಶುಭೇ ।
ನಾನ್ಯೈಃ ಸಮಾಸ್ಥಿತೋ ಯೋಗಂ ಲೋಕಸ್ಥಿತಿವಿಧಾಯಕಃ ॥ ೩೧ ॥

ದ್ವಾಪರೇ ಸಮನುಪ್ರಾಪ್ತೇ ಜ್ಞಾನಯೋಗೇನ ದೃಶ್ಯತೇ ।
ನಾನ್ಯೋಪಾಯೇನ ಕೇನಾಪಿ ತಿಷ್ಯೇ ದರ್ಶನತಾಂ ಗತಃ ॥ ೩೨ ॥

ತತೋ ಬ್ರಹ್ಮಾದಯೋ ದೇವಾ ಋಷಯಶ್ಚ ತಪೋಧನಾಃ ।
ಸ್ತುತ್ವಾ ವಾಗ್ಭಿರ್ವಿಚಿತ್ರಾಭಿರ್ದೇವಂ ಪ್ರಾಸಾದಯನ್ ಹರಿಂ ॥ ೩೩ ॥

---

೨೯. ದೇವೀ ! ಅಗ್ನಿಕುಂಡದ ದಡದಲ್ಲಿರುವ ನರನಾರಾಯಣ ನಾಮಕವಾದ ಐದನೆಯ ಶಿಲೆಯನ್ನು ಈಗ ಹೇಳುವೆನು ; ಕೇಳು.

೩೦. ಕೃತಯುಗದಲ್ಲಿ ನರನಾರಾಯಣ ನಾಮಕನಾದ ಹರಿಯು ಎಲ್ಲರಿಗೂ ಪ್ರತ್ಯಕ್ಷವಾಗಿ ಭೋಗಮೋಕ್ಷಗಳನ್ನು ಕೊಡುವವನಾಗಿ ಅಲ್ಲಿ ವಾಸವಾಗಿದ್ದನು.

೩೧. ಶೋಭನೇ ! ತ್ರೇತಾಯುಗದಲ್ಲಿ ಆ ಹರಿಯು ಮುನಿಗಳು, ದೇವತೆಗಳು, ಯೋಗಿಗಳು ಇವರಿಗೆ ಮಾತ್ರ ದೃಗ್ಗೋಚರನಾಗುತ್ತಿದ್ದನು. ಇತರರಿಗೆ ಗೋಚರನಾಗದೆ ಲೋಕಪಾಲನೆಯನ್ನು ಮಾಡುತ್ತಾ ಯೋಗವನ್ನಾಶ್ರಯಿಸಿದ್ದನು.

೩೨. ದ್ವಾಪರಯುಗವು ಬಂದಮೇಲೆ ಹಿಮಂತಕಾಲದಲ್ಲಿ ಜ್ಞಾನದೃಷ್ಟಿಗೆಮಾತ್ರ ಗೋಚರನಾಗುತ್ತಿದ್ದನು. ಬೇರಾವ ಉಪಾಯದಿಂದಲೂ ಕಾಣಬರುತ್ತಿರಲಿಲ್ಲ.

೩೩. ತರುವಾಯ ಬ್ರಹ್ಮಾದಿದೇವತೆಗಳು, ತಪೋಧನರಾದ ಋಷಿಗಳೂ ಸಹ ವಿಚಿತ್ರಸ್ತೋತ್ರಗಳನ್ನು ಮಾಡಿ ಹರಿಯನ್ನು ಪ್ರಸನ್ನೀಕರಿಸಿಕೊಂಡರು.

ತತೋಽಶರೀರಿಣೀ ವಾಣೀ ಪ್ರಾಹ ತಾನ್ಬ್ರಹ್ಮಪೂರ್ವಕಾನ್ ।
ಕಲೌ ನ ದರ್ಶನಂ ಯಾಮಿ ಸರ್ವಧರ್ಮವಿವರ್ಜಿತೇ ॥ ೩೪ ॥

ಯದಿ ವೋ ದರ್ಶನೇ ಶ್ರದ್ಧಾ ಮಂಡಪಸ್ಯ ಸುರೇಶ್ವರಾಃ ।
ಗೃಹ್ಣೀಧ್ವಂ ಮಾಮಕೀಂ ಮೂರ್ತಿಂ ಶೈಲೀಂ ನಾರದಕುಂಡಗಾಂ ॥ ೩೫ ॥

ತತಸ್ತಾಂ ಗಿರಮಾಕರ್ಣ್ಯ ಬ್ರಹ್ಮಾದ್ಯಾ ಹೃಷ್ಟಮಾನಸಾಃ ।
ನಿಷ್ಕಾಸ್ಯ ಶೈಲೀಂ ತಾಂ ದಿವ್ಯಾಂ ಮೂರ್ತಿಂ ನಾರದಕುಂಡಗಾಂ ॥ ೩೬ ॥

ಸ್ಥಾಪಯಾಮಾಸುರಭ್ಯರ್ಚ್ಯ ಸ್ವಂ ಸ್ವಂ ಧಾಮ ಯಯುಸ್ತತಃ ।
ವೈಶಾಖೇ ಮಾಸಿ ತೇ ದೇವಾ ಗಚ್ಛಂತಿ ನಿಜಮಂದಿರಂ ॥ ೩೭ ॥

ಕಾರ್ತಿಕೇ ತು ಸಮಾಗತ್ಯ ಪುನರರ್ಚಾಂ ಚರಂತಿ ಚ ।
ತತೋ ವೈಶಾಖಮಾರಭ್ಯ ಮಾನವಾ ಹಿಮಸಂಕ್ಷಯಾತ್ ॥ ೩೮ ॥

---

೩೪-೩೫. ಅನೋಲೆ ಅಶರೀರವಾಣಿಯು ಬ್ರಹ್ಮಾದಿದೇವತೆಗಳನ್ನು ಕುರಿತು “ಸುರೇಶ್ವರರೇ! ಸಕಲಧರ್ಮವರ್ಜಿತವಾದ ಕಲಿಯುಗದಲ್ಲಿ ನಾನು ನಿಮಗೆ ಕಾಣಿಸಿಕೊಳ್ಳುವುದಿಲ್ಲ. ನಿಮಗೆ ನನ್ನನ್ನು ನೋಡಬೇಕೆಂಬ ಶ್ರದ್ಧೆ ಯಿದ್ದರೆ ನಾರದಕುಂಡದಲ್ಲಿರುವ, ಶಿಲಾಮಯವಾದ ನನ್ನ ವಿಗ್ರಹವನ್ನು ತೆಗೆದು ಪ್ರತಿಷ್ಠೆಮಾಡಿರಿ” ಎಂದು ನುಡಿಯಿತು.

೩೬-೩೭. ಅನಂತರ ಆ ಮಾತನ್ನು ಕೇಳಿ ಬ್ರಹ್ಮಾದಿಗಳು ಸಂತುಷ್ಟ ಚಿತ್ತರಾಗಿ ನಾರದಕುಂಡದಲ್ಲಿದ್ದ, ಶಿಲಾಮಯವಾದ ದಿವ್ಯಮೂರ್ತಿಯನ್ನು ತೆಗೆದು ಸ್ಥಾಪನೆಮಾಡಿದರು. ಬಳಿಕ ಎಲ್ಲರೂ ಆ ದಿವ್ಯಮೂರ್ತಿಯನ್ನು ಪೂಜಿಸಿ ತಮ್ಮ ತಮ್ಮ ಸ್ಥಾನಕ್ಕೆ ಹೊರಟುಹೋದರು. ಆ ದೇವತೆಗಳು ವೈಶಾಖ ಮಾಸದಲ್ಲಿ ಅವರ ಸ್ಥಳಕ್ಕೆ ಹೋಗುವರು.

೩೮-೩೯. ಕಾರ್ತೀಕಮಾಸದಲ್ಲಿ ಅವರು ಪುನಃ ಆ ಬದರಿಕಾಶ್ರಮಕ್ಕೆ ಬಂದು ಪೂಜೆಯನ್ನು ಮಾಡುವರು. ಆದಕಾರಣ ಪಾಪಕೃತ್ಯ ಮಾಡದಿರುವ ಪುಣ್ಯವಂತರಾದ ಮಾನವರು ಹಿಮವು ಹೋದಮೇಲೆ ವೈಶಾಖಮಾಸದಿಂದ

ಲಭಂತೇ ದರ್ಶನಂ ಪುಣ್ಯಾಃ ಪಾಪಕರ್ಮವಿವರ್ಜಿತಾಃ ।
ಷಣ್ಮಾಸಂ ದೈವತೈಃ ಪೂಜ್ಯಾ ಷಣ್ಮಾಸಂ ಮಾನವೈಸ್ತಥಾ ॥ ೩೯ ॥

ಏವಂ ವ್ಯವಸ್ಥಯಾ ಮೂರ್ತಿಸ್ತತ್ರಪ್ರಾದುರಾಸ ಸಾ ।
ಯಃ ಶೈಲೀಂ ಪ್ರತಿಮಾಂ ವಿಷ್ಣೋಃ ಪೂಜಯೇದ್ಭಕ್ತಿಭಾವತಃ ॥ ೪೦ ॥

ನೈವೇದ್ಯಂ ಭಕ್ಷಯೇಚ್ಚಾಪಿ ಸ ಮುಕ್ತಿಂ ಲಭತೇ ಧ್ರುವಂ ।
ಏತಾಃ ಪಂಚಶಿಲಾಃ ಪುಣ್ಯಾ ವಿಶಾಲಾಯಾಂ ವ್ಯವಸ್ಥಿತಾಃ ॥ ೪೧ ॥

ಆಸಾಂ ಮಧ್ಯೇ ತು ನೈವೇದ್ಯಂ ದೇವಾನಾಂ ದುರ್ಲಭಂ ಹರೇಃ ।
ಕಿಂ ಪುನರ್ಮಾನುಷಾದೀನಾಂ ಭಕ್ಷಿತಂ ಮೋಕ್ಷಸಾಧನಂ ॥ ೪೨ ॥

ಬದರ್ಯಾಂ ವಿಷ್ಣುನೈವೇದ್ಯಂ ಸಿಕ್ಥಮಾತ್ರಂ ಚ ಭಕ್ಷಿತಂ ।
ಶೋಧಯೇದ್ದೇಹಗಂ ಪಾಪಂ ದೀಪ್ತಾಗ್ನಿರಿವ ಕಾಂಚನಂ ॥ [illegible] ॥

---

ಆರು ತಿಂಗಳುಕಾಲ ಆ ದೇವರ ದರ್ಶನವಮಾಡುವರು. ಹೀಗೆ ಆ ದಿವ್ಯಮೂರ್ತಿಯನ್ನು ಹಿಮವಿರುವ ಆರುತಿಂಗಳು ದೇವತೆಗಳೂ, ಹಿಮವಿಲ್ಲದ ಆರುತಿಂಗಳು ಮನುಷ್ಯರೂ ಪೂಜಿಸುವರು.

೪೦-೪೧. ಆಗಿನಿಂದಲೂ ಈ ರೀತಿಯಾದ ವ್ಯವಸ್ಥೆಯಿಂದ ಆ ದಿವ್ಯ ಮೂರ್ತಿಯು ಆವಿರ್ಭವಿಸಿದೆ. ವಿಷ್ಣುವಿನ ಶಿಲಾಪ್ರತಿಮೆಯನ್ನು ಭಕ್ತಿಭಾವದಿಂದ ಪೂಜಿಸಿ ಆ ದೇವನಿಗೆ ನಿವೇದಿತವಾದುದನ್ನು ತಿನ್ನುವವನು ಖಂಡಿತವಾಗಿಯೂ ಮೋಕ್ಷವನ್ನು ಪಡೆಯುವನು. ಪುಣ್ಯಕರವಾದ ಈ ಐದು ಶಿಲೆಗಳು ವಿಶಾಲಾಕ್ಷೇತ್ರದಲ್ಲಿ ಸ್ಥಾಪಿತವಾಗಿವೆ.

೪೨. ಇವುಗಳ ಮಧ್ಯದಲ್ಲಿ ಹರಿಯ ನೈವೇದ್ಯವು ದೇವತೆಗಳಿಗೂ ದುರ್ಲಭವು ಹೀಗಿರುವಾಗ ಮಾನವರು ಅದನ್ನು ತಿನ್ನುವುದು ಮೋಕ್ಷಸಾಧನವೆಂದು ಹೇಳತಕ್ಕುದೇನು !

೪೩. ಬದರೀಕ್ಷೇತ್ರದಲ್ಲಿ ವಿಷ್ಣುವಿಗೆ ನಿವೇದನೆ ಮಾಡಿದ ಒಂದು ಅಗಳನ್ನಾದರೂ ತಿಂದರೆ ಅದು ಉರಿಯುತ್ತಿರುವ ಅಗ್ನಿಯು ಬಂಗಾರವನ್ನು ಶೋಧಿಸುವಂತೆ ದೇಹದಲ್ಲಿರುವ ಪಾಪಗಳನ್ನೆಲ್ಲಾ ಹೋಗಲಾಡಿಸಿ ಶುದ್ಧಿಮಾಡುವುದು.

ಕಪಾಲಮೋಚನಂ ಹ್ಯೇತತ್ತೀರ್ಥಂ ಪಾಪವಿಶೋಧನಂ ।
ಯನ್ಮಧ್ಯೇ ತು ಶಿಲಾಃ ಪಂಚ ಸಂತಿ ಪಾಪವಿಮೋಚಿಕಾಃ ॥ ೪೪ ॥

ಅಥಾಪರಂ ಮಹತ್ತೀರ್ಥಮತ್ರೈವ ಶೃಣು ಮೋಹಿನಿ ।
ಯತ್ರ ಸ್ನಾತೋ ನರೋ ಭಕ್ತ್ಯಾ ವೇದಾನಾಂ ಪಾರಗೋ ಭವೇತ್ ॥

ಸುಪ್ತಸ್ಯ ಬ್ರಹ್ಮಣೋ ವಕ್ತ್ರಾನ್ನಿರ್ಗತಾನಸುರೋ ಹರತ್ ।
ವೇದಾನ್ ಹಯಶಿರಾ ನಾಮ ದೇವಾದೀನಾಂ ಭಯಾವಹಃ ॥ ೪೬ ॥

ತತಸ್ತು ಬ್ರಹ್ಮಣಾ ವಿಷ್ಣುಃ ಪ್ರಾರ್ಥಿತಃ ಪ್ರಕಟೋಽಭವತ್ ।
ಮತ್ಸ್ಯರೂಪೇಣ ತಂ ಹತ್ವಾ ವೇದಾನ್ ಪ್ರತ್ಯರ್ಪಯದ್ವಿಧೇಃ ॥ ೪೭ ॥

ತಚ್ಚ ತೀರ್ಥಂ ಮಹತ್ಪುಣ್ಯಂ ಸರ್ವವಿದ್ಯಾಪ್ರಕಾಶಕಂ ।
ತೈಮಿಂಗಿಲಂ ಮಹಾಭಾಗೇ ದರ್ಶನಾತ್ಪಾಪನಾಶನಂ ॥ ೪೮ ॥

---

೪೪. ಪಾಪವಿಮೋಚನೆ ಮಾಡುವಂತಹ ಐದು ಶಿಲೆಗಳೂ, ಮಧ್ಯದಲ್ಲಿರುವ ಕಪಾಲ ಮೋಚನವೆಂಬ ಈ ತೀರ್ಥವೂ ಪಾಪಗಳನ್ನೆಲ್ಲಾ ನಿರ್ಮೂಲ ಮಾಡುವುವು.

೪೫. ಮೋಹಿನೀ! ಇಲ್ಲಿಯೇ ಇನ್ನೊಂದು ದೊಡ್ಡ ತೀರ್ಥವಿದೆ. ಅಲ್ಲಿ ಭಕ್ತಿಯಿಂದ ಸ್ನಾನಮಾಡುವ ಮನುಷ್ಯನು ವೇದಪಾರಂಗತನಾಗುವನು.

೪೬. ದೇವಾದಿಗಳಿಗೂ ಭಯಂಕರನಾದ ಹಯಶಿರಸ್ಸೆಂಬ ಅಸುರನು ಮಲಗಿದ್ದ ಬ್ರಹ್ಮನ ಬಾಯಿಯಿಂದ ಹೊರಟ ವೇದಗಳನ್ನು ಅಪಹರಿಸಿದನು.

೪೭. ತರುವಾಯ ಬ್ರಹ್ಮನು ವಿಷ್ಣುವನ್ನು ಶರಣುಹೊಂದಿ ಪ್ರಾರ್ಥಿಸಲಾಗಿ ಅವನು ಮತ್ಸ್ಯಾವತಾರಮಾಡಿ ಆ ಹಯಶಿರಸ್ಸೆಂಬ ಅಸುರನನ್ನು ಕೊಂದು ಬ್ರಹ್ಮನಿಗೆ ವೇದಗಳನ್ನು ಹಿಂದಕ್ಕೆ ತಂದುಕೊಟ್ಟನು.

೪೮. ಧನ್ಯೇ! ಸಕಲ ವಿದ್ಯಾಪ್ರಕಾಶಕವಾದ ಆ ತೀರ್ಥವೇ ಮಹಾ ಪುಣ್ಯಕರವಾದ ತೈಮಿಂಗಿಲವೆಂಬುದು. ಅದನ್ನು ದರ್ಶನಮಾಡುವ ಮಾತ್ರದಿಂದ ಪಾಪಗಳು ಹೋಗುವುವು.

ಹಯಗ್ರೀವಸ್ವರೂಪೇಣ ಭಗವಾನ್ವಿಷ್ಣುರವ್ಯಯಃ ।
ಪುನರ್ಹತ್ವಾ ಹತ್ವಾ ಮತ್ತೌ ದ್ವಾವಸುರೌ ಮಧುಕೈಟಭೌ ॥ ೪೯ ॥

ವೇದಾಪಹಾರಿಣೌ ಭೂಯೋ ವೇದಾನ್ದೈ ಬ್ರಹ್ಮಣೇ ಹ್ಯದಾತ್ ।
ತತ್ತೀರ್ಥಂ ಸರ್ವಪಾಪಘ್ನಂ ಸ್ನಾನಮಾತ್ರೇಣ ವೈಧಸಿ ॥ ೫೦ ॥

ಮಾತ್ಸ್ಯೇ ಚಾಪಿ ಹಯಗ್ರೀವೇ ವೇದಾಸ್ತೇ ದ್ರವರೂಪಿಣಃ ।
ಸತತಂ ಸರ್ವದಾ ಭದ್ರೇ ತಜ್ಜಲಂ ಪಾಪನಾಶನಂ ॥ ೫೧ ॥

ತೀರ್ಥಮಿಂದ್ರಪದಂ ತತ್ರ ವಿಖ್ಯಾತಂ ವಹ್ನಿಕೋಣಗಂ ।
ತತ್ರ ಸ್ನಾತ್ವಾ ನರೋ ದೇವಿ ಪದಮೈಂದ್ರಮವಾಪ್ನುಯಾತ್ ॥ ೫೨ ॥

ಮಾನಸೋದ್ಭೇದಕಂ ಚಾನ್ಯತ್ತತ್ರ ತೀರ್ಥಂ ಮನೋರಮಂ ।
ಭಿನತ್ತಿ ಹೃದಯಗ್ರಂಥಿಂ ಛಿನತ್ತ್ಯಖಿಲಸಂಶಯಾಂ ॥ ೫೩ ॥

---

೪೯-೫೦. ವೃದ್ಧಿಹ್ರಾಸವಿವರ್ಜಿತನಾದ ವಿಷ್ಣುಭಗವಂತನು ಪುನಃ ಹಯಗ್ರೀವಸ್ವರೂಪವನ್ನು ತಾಳಿ ಮತ್ತರಾಗಿ ವೇದಗಳನ್ನು ಅಪಹರಿಸಿದ್ದ ಮಧುಕೈಟಭರೆಂಬ ಅಸುರರಿಬ್ಬರನ್ನೂ ಸಂಹರಿಸಿ ಬ್ರಹ್ಮನಿಗೆ ಪುನಃ ವೇದಗಳನ್ನು ಕೊಟ್ಟನು. ಬ್ರಹ್ಮಕುಮಾರಿಯೇ! ಆ ತೀರ್ಥದಲ್ಲಿ ಸ್ನಾನಮಾಡುವ ಮಾತ್ರದಿಂದ ಸಕಲಪಾಪಗಳೂ ಪರಿಹಾರವಾಗುವುವು.

೫೧. ಮತ್ಸ್ಯತೀರ್ಥ ಮತ್ತು ಹಯಗ್ರೀವತೀರ್ಥಗಳಲ್ಲಿ ಆ ವೇದಗಳು ದ್ರವರೂಪದಿಂದ ಯಾವಾಗಲೂ ಇರುತ್ತವೆಯಾದಕಾರಣ ಭದ್ರೇ ! ಅದರ ನೀರು ಪಾಪಪರಿಹಾರಮಾಡುತ್ತದೆ.

೫೨. ಅಲ್ಲಿಯೇ ಆಗ್ನೇಯಮೂಲೆಯಲ್ಲಿರುವ ಇಂದ್ರತೀರ್ಥವೆಂದು ವಿಖ್ಯಾತವಾದ ತೀರ್ಥದಲ್ಲಿ ಸ್ನಾನಮಾಡಿದರೆ ಆ ಮನುಷ್ಯನು ಇಂದ್ರಪದವಿಯನ್ನು ಹೊಂದುವನು.

೫೩-೫೪. ಅಲ್ಲಿ ಮಾನಸೋದ್ಭೇಧಕವೆಂಬ ಇನ್ನೊಂದು ಮನೋಹರ ತೀರ್ಥವಿದೆ. ಅದು ಹೃದಯಗ್ರಂಥಿಯನ್ನು ಭೇದಿಸಿ ಸಕಲಸಂಶಯಗಳನ್ನೂ ಪರಿಹರಿಸುವುದು. ಮತ್ತು ಸಕಲ ಪಾಪಗಳನ್ನೂ ನಾಶಪಡಿಸುವುದು.

ಹರತ್ಯಂಹಶ್ಚ ಸಕಲಂ ಪಾಪಸಂಘೋಽಸ್ಯೋದಕಂ ತತಃ ।
ಕಾಮಾಕಾಮಾಭಿಧಂ ಚಾನ್ಯತ್ತೀರ್ಥಂ ತತ್ರ ವರಾನನೇ ॥ ೫೪ ॥

ಕಾಮಪ್ರದಂ ಕಾಮುಕಾನಾಮಕಾಮಾನಾಂ ತು ಮೋಕ್ಷದಂ ।
ತಸ್ಯ ಪಶ್ಚಿಮತೋ ಭದ್ರೇ ವಸುಧಾರೇತಿ ತೀರ್ಥಕಂ ॥ ೫೫ ॥

ತತ್ರ ಸ್ನಾತ್ವಾ ನರೋ ಭಕ್ತ್ಯಾ ಲಭತೇ ವಾಂಛಿತಂ ಫಲಂ ।
ಅತ್ರ ಪುಣ್ಯವತೋ ಯಾಂತಿ ದೃಶ್ಯತೇ ಜಲಮಧ್ಯಗಂ ॥ ೫೬ ॥

ಯದ್ದೃಷ್ಟ್ವಾ ನ ಪುನರ್ಜಂತುರ್ಗರ್ಭವಾಸಂ ಪ್ರಪದ್ಯತೇ ।
ತತೋ ನೈರ್ಋತಿದಿಗ್ಭಾಗೇ ಪಂಚಧಾರಾಃ ಪತಂತ್ಯಧಃ ॥ ೫೭ ॥

ಪ್ರಭಾಸಪುಷ್ಕರಗಯಾನೈಮಿಷಾರಣ್ಯಸಂಜ್ಞಕಾಃ ।
ತಾಸು ಸ್ನಾತ್ವಾ ಪೃಥಙ್ಮರ್ತ್ಯಸ್ತತ್ತತ್ತೀರ್ಥಫಲಂ ಲಭೇತ್ ॥ ೫೮ ॥

---

೫೪-೫೫. ವರಾನನೇ! ಅಲ್ಲಿ ಕಾಮಾಕಾಮನಾಮಕವಾದ ಇನ್ನೊಂದು ತೀರ್ಥವಿದೆ. ಅದು ಕಾಮಿಗಳಿಗೆ ಇಷ್ಟಾರ್ಥವನ್ನೂ, ನಿಷ್ಕಾಮಿಗಳಿಗೆ ಮೋಕ್ಷವನ್ನೂ ಕೊಡುತ್ತದೆ.

೫೫-೫೭. ಭದ್ರೇ! ಅದರ ಪಶ್ಚಿಮದಿಗ್ಭಾಗದಲ್ಲಿ ವಸುಧಾರಾ ಎಂಬ ತೀರ್ಥವಿದೆ. ಅಲ್ಲಿ ಭಕ್ತಿಯಿಂದ ಸ್ನಾನಮಾಡಿದ್ದೇ ಆದರೆ ಮನುಷ್ಯನು ಬಯಸಿದ ಫಲವನ್ನು ಹೊಂದುವನು. ಪುಣ್ಯವಂತನಾದ ಯಾತ್ರಿಕನಿಗೆ ಅಲ್ಲಿ ನೀರಿನ ಮಧ್ಯದಲ್ಲಿರುವುದು ಕಾಣಿಸುತ್ತದೆ. ಅದರ ದರ್ಶನಮಾಡಿದಪ್ರಾಣಿಯು ಪುನಃ ಗರ್ಭವಾಸಕ್ಕೆ ಗುರಿಯಾಗುವುದಿಲ್ಲ.

೫೭-೫೮. ಅದರ ನೈಋತ್ಯದಿಕ್ಕಿನಲ್ಲಿ ಐದು ಧಾರೆಗಳು ಕೆಳಗೆ ಬೀಳುತ್ತವೆ. ಪ್ರಭಾಸ, ಪುಷ್ಕರ, ಗಯಾ, ನೈಮಿಷ, ಅರಣ್ಯ ಎಂಬುದಾಗಿ ಆ ಪಂಚಧಾರೆಗಳ ಹೆಸರುಗಳು. ಅವುಗಳಲ್ಲಿ ಪ್ರತ್ಯೇಕವಾಗಿ ಸ್ನಾನಮಾಡುವ ಮನುಷ್ಯನು ಆಯಾಯಾ ತೀರ್ಥಫಲಗಳನ್ನು ಹೊಂದುವನು.

ತತೋಽನ್ಯದ್ವಿಮಲಂ ತೀರ್ಥಂ ಸೋಮಕುಂಡಾಪರಾಹ್ವಯಂ ।
ಯತ್ರ ತಪ್ತಂ ತಪಸ್ತೀವ್ರಂ ಸೋಮಖೇಟಾದ್ಯಧೀಶ್ವರೈಃ ॥ ೫೯ ॥

ತತ್ರ ಸ್ನಾತ್ವಾ ನರೋ ಭದ್ರೇ ಗತದೋಷಃ ಪ್ರಜಾಯತೇ ।
ತತ್ರಾನ್ಯದ್ದ್ವಾದಶಾದಿತ್ಯಂ ತೀರ್ಥಂ ಪಾಪಹರಂ ಪರಂ ॥ ೬೦ ॥

ಸ್ನಾತ್ವಾ ಯತ್ರ ನರೋ ಭೂತ್ವಾ ತೇಜಸಾ ಭಾಸ್ಕರೋಪಮಃ ।
ಚತುಃಸ್ನಾತೋಪರಂ ತತ್ರ ತೀರ್ಥಂ ತತ್ರಾಪ್ಲುತೋ ನರಃ ॥ ೬೧ ॥

ಧರ್ಮಾರ್ಥಕಾಮಮೋಕ್ಷಾಂಶ್ಚ ಲಭತೇ ಯಂ ಯಮಿಚ್ಛತಿ ।
ಅಥ ಸಪ್ತಪದಂ ನಾಮ ತೀರ್ಥಂ ತತ್ರ ಮನೋಹರಂ ॥ ೬೨ ॥

ದರ್ಶನಾದ್ಯಸ್ಯ ತೀರ್ಥಸ್ಯ ಪಾತಕಾನಿ ಮಹಾಂತ್ಯಪಿ ।
ನಶ್ಯಂತಿ ನಿಯತಂ ತಸ್ಯ ಕಿಂ ಪುನಃ ಸ್ನಾನತಃ ಸತಿ ॥ ೬೩ ॥

---

೫೯-೬೦. ಅಲ್ಲಿಂದ ಮುಂದೆ ಸೋಮಕುಂಡ ಎಂಬ ನಾಮಧೇಯವುಳ್ಳ, ನಿರ್ಮಲವಾದ ಇನ್ನೊಂದು ತೀರ್ಥವಿದೆ. ಅಲ್ಲಿ ಸೋಮಖೇಟಾದ್ಯಧೀಶ್ವರರು ಉಗ್ರ ತಪಸ್ಸನ್ನು ಮಾಡಿರುವರು. ಭದ್ರೇ! ಅಲ್ಲಿ ಮನುಷ್ಯನು ಸ್ನಾನಮಾಡುವುದರಿಂದ ಪಾಪಗಳನ್ನು ಕಳೆದುಕೊಳ್ಳುವನು.

೬೦-೬೧. ಅಲ್ಲಿಯೇ ಪಾಪಪರಿಹಾರಕವಾದ, ದ್ವಾದಶಾದಿತ್ಯವೆಂಬ ಇನ್ನೊಂದು ಉತ್ತಮತೀರ್ಥವಿದೆ. ಅಲ್ಲಿ ಭಕ್ತಿಪೂರ್ವಕವಾಗಿ ಸ್ನಾನಮಾಡುವ ಮನುಷ್ಯನು ಸೂರ್ಯನಿಗೆ ಸಮಾನವಾದ ತೇಜಸ್ಸನ್ನು ಹೊಂದುವನು.

೬೧-೬೨. ಅಲ್ಲಿ ಚತುಃಸ್ನಾತವೆಂಬ ಇನ್ನೊಂದು ತೀರ್ಥವಿದೆ ಅದರಲ್ಲಿ ಸ್ನಾನಮಾಡುವುದರಿಂದ ಮನುಷ್ಯನಿಗೆ ಅವನ ಇಚ್ಛಾನುಸಾರವಾಗಿ ಧರ್ಮ, ಅರ್ಥ, ಕಾಮ, ಮೋಕ್ಷ ಇವುಗಳು ಲಭಿಸುವುವು.

೬೨-೬೩. ಆಮೇಲೆ ಅಲ್ಲಿರುವ ಸಪ್ತಪದವೆಂಬ ಮನೋಹರ ತೀರ್ಥಕ್ಕೆ ಹೋಗಬೇಕು. ಸಾಧ್ವೀ! ಆ ತೀರ್ಥದ ದರ್ಶನಮಾಡುವ ಮಾತ್ರದಿಂದ ಮಹಾಪಾತಕಗಳು ಖಂಡಿತವಾಗಿಯೂ ನಾಶವಾಗುವುವು. ಅಂದಬಳಿಕ ಅಲ್ಲಿ ಸ್ನಾನಮಾಡುವುದರಿಂದ ಮಹಾಪಾಪಗಳು ಹೋಗುತ್ತವೆಂದು ಹೇಳತಕ್ಕುದೇನು!

ತ್ರಿಷು ಲೋಕೇಷು ಕುಂಡಸ್ಯ ಬ್ರಹ್ಮವಿಷ್ಣುಮಹೇಶ್ವರಾಃ ।
ಪ್ರಸ್ಥಿತಾಸ್ತತ್ರ ಮರಣಾನ್ನರಃ ಸತ್ಯಪದಂ ಲಭೇತ್ ॥ ೬೪ ॥

ನರನಾರಾಯಣಾವಾಸೇ ತೀರ್ಥಮಸ್ತ್ಯಪರಂ ಶುಭೇ ।
ಉರ್ವಶೀಕುಂಡನಾಮಾತ್ರ ಸ್ನಾತೋ ರೂಪಮನೋಹರಃ ॥ ೬೫ ॥

ನಾರಾಯಣಪ್ರಿಯೋಽತ್ಯರ್ಥಂ ಭವೇದ್ವಿಶ್ವವಶಂಕರಃ ।
ತತೋ ದಕ್ಷಿಣದಿಗ್ಭಾಗೇ ತೀರ್ಥಮಸ್ತ್ರಾಭಿಧಂ ಪರಂ ॥ ೬೬ ॥

ನರನಾರಾಯಣೌ ಯತ್ರ ಶಸ್ತ್ರಂ ನ್ಯಸ್ಯ ತಪಃಸ್ಥಿತೌ ।
ಆಯುಧಾನಿ ತು ದಿವ್ಯಾನಿ ಶಂಖಚಕ್ರಾದಿಕಾನಿ ಚ ॥ ೬೭ ॥

ಮೂರ್ತಿಮಂತ ಮಹಾಭಾಗೇ ದೃಶ್ಯಂತೇ ಕೃತಿಭಿರ್ಯುತೈಃ ।
ತತ್ರ ಸ್ನಾತ್ವಾ ನರೋ ಭಕ್ತ್ಯಾ ನ ಶತ್ರೋರ್ಭಯಮಾಪ್ನುಯಾತ್ ॥ ೬೮ ॥

---

೬೪. ಮೂರು ಲೋಕಗಳಲ್ಲಿಯೂ ಬ್ರಹ್ಮ, ವಿಷ್ಣು, ಮಹೇಶ್ವರರು ಕುಂಡದಿಂದಲೇ ಹೊರಟಿರುವರು. ಅಂತಹ ಕುಂಡದಲ್ಲಿ ಮನುಷ್ಯನು ಮೃತನಾದರೆ ಸತ್ಯಲೋಕವನ್ನು ಹೊಂದುವನು.

೬೫-೬೬. ಶೋಭನೇ ! ಈ ನರನಾರಾಯಣಾಶ್ರಮದಲ್ಲಿ ಊರ್ವಶೀ ಕುಂಡವೆಂಬ ಇನ್ನೊಂದು ತೀರ್ಥವಿದೆ. ಅಲ್ಲಿ ಸ್ನಾನಮಾಡಿದ ಮನುಜನು ಮನೋಹರರೂಪವನ್ನು ಹೊಂದಿ ನಾರಾಯಣನಿಗೆ ಅತ್ಯಂತಪ್ರಿಯನಾಗಿ ಜಗತ್ತನ್ನೇ ಸ್ವಾಧೀನಪಡಿಸಿಕೊಳ್ಳುವವನಾಗುವನು.

೬೬-೬೮. ಅದರ ದಕ್ಷಿಣದಿಕ್ಕಿನಲ್ಲಿ ಅಸ್ತ್ರನಾಮಕವಾದ ತೀರ್ಥವಿದೆ. ನರನಾರಾಯಣರು ಅಲ್ಲಿ ತಮ್ಮ ಆಯುಧಗಳನ್ನಿಟ್ಟು ತಪೋನಿಷ್ಠರಾದರು. ಧನ್ಯೇ! ಅಲ್ಲಿ ಮೂರ್ತಿಮತ್ತಾಗಿರುವ ನರನಾರಾಯಣರ ಮತ್ತು ದಿವ್ಯವಾದ ಶಂಖಚಕ್ರಾದ್ಯಾಯುಧಗಳ ದರ್ಶನವು ಸುಕೃತಿಗಳಿಗೇ ಲಭಿಸುವುದು. ಆ ತೀರ್ಥದಲ್ಲಿ ಭಕ್ತಿಯಿಂದ ಸ್ನಾನಮಾಡಿದ ಮನುಷ್ಯನಿಗೆ ಶತ್ರುಭಯ ಪರಿಹಾರವಾಗುವುದು.

ಮೇರುತೀರ್ಥಂ ಚ ತತ್ರಾಸ್ತಿ ಯತ್ರ ದೃಷ್ಟ್ವಾ ಧನುರ್ಧರಂ ।
ಸ್ನಾತ್ವಾ ಚ ಲಭತೇ ಸೋಽಪಿ ಶುಭೇ ಸರ್ವಾನ್ ಮನೋರಥಾನ್ ॥ ೧೯ ॥

ಲೋಕಪಾಲಾಹ್ವಯಂ ನಾಮ ತತ್ರಾಸ್ತ್ಯತ್ತೀರ್ಥಮುತ್ತಮಂ ।
ಲೋಕಪಾಲೈಸ್ತಪಸ್ತಪ್ತಂ ಯತ್ರ ತತ್ರಾಪ್ಲುತೋ ನರಃ ॥ ೨೦ ॥

ಸರ್ವತೀರ್ಥಾಪ್ಲುತಫಲಂ ಲಭತೇ ದೇವಿ ಮಾನವಃ ।
ದಂಡೇನಾಹತ್ಯ ಹರಿಣಾ ಯತಸ್ತೀರ್ಥಂ ವಿನಿರ್ಮಿತಂ ॥ ೨೧ ॥

ದಂಡಪುಷ್ಕರಣೀತ್ಯೇತತ್ತತೋ ಲೋಕಪಸೌಖ್ಯದಂ ।
ಭಾಗೀರಥೀ ಯತ್ರ ಯೋಗಂ ಪ್ರಾಪ್ತಾ ಹ್ಯಲಕನಂದಯಾ ॥ ೨೨ ॥

ತತ್ತೀರ್ಥಂ ಸರ್ವತಃ ಶ್ರೇಷ್ಠಂ ಪುಣ್ಯೇ ಬದರಿಕಾಶ್ರಮೇ ।
ತತ್ರ ಸ್ನಾತ್ವಾ ಪಿತೄನ್ ದೇವಾನ್ ಸಂತರ್ಪ್ಯಾಭ್ಯರ್ಚ್ಯ ಭಕ್ತಿತಃ ॥ ೨೩ ॥

---

೧೯. ಶೋಭನಾಂಗಿಯೇ! ಅಲ್ಲಿ ಮೇರುತೀರ್ಥವೆಂಬೊಂದು ತೀರ್ಥವಿದೆ. ಅದರಲ್ಲಿ ಸ್ನಾನಮಾಡಿ ಧನುರ್ಧಾರಿಯಾದ ದೇವನನ್ನು ದರ್ಶನಮಾಡಿದರೆ ಅವನಿಗೆ ಸಕಲ ಮನೋರಥಗಳೂ ಲಭಿಸುವುವು.

೨೦-೨೧. ಅಲ್ಲಿ ಲೋಕಪಾಲನಾಮಕವಾದ ಇನ್ನೊಂದು ಉತ್ತಮ ತೀರ್ಥವಿದೆ. ಅದು ಲೋಕಪಾಲಕರು ತಪಸ್ಸು ಮಾಡಿದ ಸ್ಥಳವು. ದೇವೀ! ಅಲ್ಲಿ ಸ್ನಾನಮಾಡಿದ ಮನುಷ್ಯನು ಸಕಲತೀರ್ಥಸ್ನಾನ ಫಲವನ್ನೂ ಹೊಂದುವನು.

೨೧-೨೨. ಹರಿಯು ದಂಡದಿಂದ ಹೊಡೆದು ತೀರ್ಥವನ್ನು ನಿರ್ಮಾಣ ಮಾಡಿರುವ ಕಾರಣ ಆ ತೀರ್ಥವು ದಂಡಪುಷ್ಕರಿಣೀ ಎಂದು ಪ್ರಸಿದ್ಧಿಗೊಂಡಿತು. ಅದು ಲೋಕಪಾಲಕರಿಗೆ ಸೌಖ್ಯದಾಯಕವು.

೨೩-೨೪. ಭಾಗೀರಥಿಯು ಅಲಕನಂದೆಯೊಡನೆ ಸಮಾಗಮಹೊಂದಿದ ತೀರ್ಥವು ಪುಣ್ಯಕರವಾದ ಬದರಿಕಾಶ್ರಮದಲ್ಲಿ ಶ್ರೇಷ್ಠವಾದುದು. ಅಲ್ಲಿ ಸ್ನಾನಮಾಡಿ ಭಕ್ತಿಯಿಂದ ಪಿತೃದೇವತರ್ಪಣಮಾಡಿ ಪೂಜಿಸಿದ್ದೇ ಆದರೆ

ಲಭತೇ ವೈಷ್ಣವಂ ಧಾಮ ಸರ್ವದೇವನಮಸ್ಕೃತಃ ।
ಸಂಗಮಾದ್ದಕ್ಷಿಣೇ ಭಾಗೇ ಧರ್ಮಕ್ಷೇತ್ರಂ ಶುಭಾನನೇ ॥ ೭೪ ॥

ತತ್ ಕ್ಷೇತ್ರಂ ಪಾವನಂ ಪುಣ್ಯೇ ಸರ್ವತೀರ್ಥೋತ್ತಮೋತ್ತಮಂ ।
ತತ್ರ ಸ್ನಾತ್ವಾ ನರೋ ಭದ್ರೇ ಸಾಧ್ಯಸನ್ನಿಧಿಭಾಗ್ಭವೇತ್ ॥ ೭೫ ॥

ಉರ್ವಶೀಸಂಗಮಂ ತೀರ್ಥಂ ಸರ್ವಪಾಪಹರಂ ನೃಣಾಂ ।
ಕರ್ಮೋದ್ಧರಾಹ್ವಯಂ ಚಾನ್ಯದ್ಧರಿಭಕ್ತ್ಯೈಕಸಾಧನಂ ॥ ೭೬ ॥

ಬ್ರಹ್ಮಾವರ್ತಾಹ್ವಯಂ ತೀರ್ಥಂ ಬ್ರಹ್ಮಲೋಕೈಕಕಾರಣಂ ।
ಗಂಗಾಶ್ರಿತಾನಿ ಚೈತಾನಿ ತೀರ್ಥಾನಿ ಕಥಿತಾನಿ ತೇ ॥ ೭೭ ॥

ಬ್ರಹ್ಮಾಪಿ ಕಾರ್ತ್ಸ್ನ್ಯತೋ ವಕ್ತುಂ ತತ್ರಸ್ಥಾನಿ ನ ವೈ ಪ್ರಭುಃ ।
ಯ ಇದಂ ಶೃಣುಯಾನ್ನಿತ್ಯಂ ಶ್ರಾವಯೇದ್ವಾ ಸಮಾಹಿತಃ ॥ ೭೮ ॥

---

ಅವನು ಸಕಲದೇವತೆಗಳಿಂದಲೂ ನಮಸ್ಕರಿಸಲ್ಪಟ್ಟವನಾಗಿ ವಿಷ್ಣುಲೋಕವನ್ನು ಹೊಂದುವನು.

೭೪-೭೫. ಶುಭಾನನೇ ! ಆ ಸಂಗಮದ ದಕ್ಷಿಣಭಾಗದಲ್ಲಿ ಧರ್ಮಕ್ಷೇತ್ರ ವಿದೆ. ಆ ಕ್ಷೇತ್ರವು ಸಕಲತೀರ್ಥೋತ್ತಮೋತ್ತಮವು ಮತ್ತು ಪವಿತ್ರವು. ಇಂದು ತಿಳಿದಿರುವೆನು. ಅಲ್ಲಿ ಸ್ನಾನಮಾಡಿದ ಮನುಷ್ಯನು ಸಾಧ್ಯಸನ್ನಿಧಾನವನ್ನು ಹೊಂದುವನು.

೭೬. ಊರ್ವಶೀಸಂಗಮವೆಂಬ ತೀರ್ಥವು ಮನುಷ್ಯರ ಪಾಪಗಳನ್ನೆಲ್ಲಾ ಪರಿಹರಿಸುವುದು. ಕರ್ಮೋದ್ಧರವೆಂಬ ಇನ್ನೊಂದು ತೀರ್ಥವಿದೆ. ಅದು ಹರಿ ಭಕ್ತಿಗೆ ಉತ್ತಮಸಾಧನವು.

೭೭-೭೮. ಬ್ರಹ್ಮಾವರ್ತವೆಂಬ ತೀರ್ಥವು ಬ್ರಹ್ಮಲೋಕಪ್ರಾಪ್ತಿಗೆ ಮುಖ್ಯ ಸಾಧನವು. ಗಂಗೆಯಲ್ಲಿರುವ ಈ ತೀರ್ಥಗಳ ಮಹಿಮೆಯನ್ನು ನಿನಗೆ ಹೇಳಿರು ವೆನು. ಬ್ರಹ್ಮನೂ ಸಹ ಅಲ್ಲಿರುವ ತೀರ್ಥಗಳನ್ನು ಸಮಗ್ರವಾಗಿ ಹೇಳಲು ಸಮರ್ಥನಲ್ಲ.

**ಸರ್ವಪಾಪವಿನಿರ್ಮುಕ್ತಃ ಸೋಽಪಿ ವಿಷ್ಣುಪದಂ ಲಭೇತ್ ।**
**ಮಾಸಮಾತ್ರಂ ನರೋ ಭಕ್ತ್ಯಾ ಯೋಽತ್ರ ತಿಷ್ಠೇದ್ಧೃತವ್ರತಃ ॥ ೭೯ ॥**

**ಸ ಸಾಕ್ಷಾದೇವ ಪಶ್ಯೇತ್ತು ನರನಾರಾಯಣಂ ಹರಿಂ ।**
**ಯತ್ರೈತಲ್ಲಿಖಿತಂ ದೇವಿ ಮಾಹಾತ್ಮ್ಯಂ ಬದರೀಭವಂ ।**
**ವರ್ಧಂತೇ ಸಂಪದಸ್ಸರ್ವಾಸ್ತತ್ರ ವಿಷ್ಣುಪ್ರಸಾದತಃ ॥ ೮೦ ॥**

**ಇತಿ ಶ್ರೀನಾರದೀಯಪುರಾಣೋತ್ತರಭಾಗೇ ವಸುಮೋಹಿನೀಸಂವಾದೇ**
**ಬದರಿಕಾಶ್ರಮಮಾಹಾತ್ಮ್ಯಂ ನಾಮ**
**ಸಪ್ತಷಷ್ಟಿತಮೋಽಧ್ಯಾಯಃ**
**ಇತಿ ಬದರಿಕಾಮಾಹಾತ್ಮ್ಯಂ ಸಮಾಪ್ತಂ**

---

೭೮-೭೯. ಈ ಬದರೀ ಮಾಹಾತ್ಮ್ಯೆಯನ್ನು ಸಮಾಧಾನಚಿತ್ತದಿಂದ ಯಾವಾಗಲೂ ಶ್ರವಣಮಾಡುವವನು, ಇತರರಿಗೆ ಹೇಳುವವನೂ ಸಹ ಸಕಲ ಪಾಪವಿಮೋಚನೆಯನ್ನು ಹೊಂದಿ ವಿಷ್ಣುಲೋಕವನ್ನು ಪಡೆಯುವನು.

೭೯-೮೦. ಈ ಕ್ಷೇತ್ರದಲ್ಲಿ ಒಂದು ತಿಂಗಳು ವ್ರತಧಾರಿಯಾಗಿ ಭಕ್ತಿಯಿಂದ ವಾಸಮಾಡುವವನು ಸಾಕ್ಷಾತ್ತಾಗಿ ನರನಾರಾಯಣ ನಾಮಕನಾದ ಹರಿಯನ್ನು ನೋಡುವನು.

೮೦. ದೇವೀ! ಲಿಖಿತವಾದ ಈ ಬದರೀ ಮಾಹಾತ್ಮ್ಯೆಯ ಪುಸ್ತಕವಿರುವೆಡೆಯಲ್ಲಿ ವಿಷ್ಣುದೇವನ ಅನುಗ್ರಹದಿಂದ ಸಕಲವಿಧಸಂಪತ್ತುಗಳೂ ಅಭಿವೃದ್ಧಿಯಾಗುವುವು.

ಇಂತು ಶ್ರೀನಾರದೀಯಪುರಾಣೋತ್ತರಭಾಗದಲ್ಲಿ ವಸು ಮೋಹಿನೀ
ಸಂವಾದದೊಳು ಬದರಿಕಾಶ್ರಮ ಮಾಹಾತ್ಮ್ಯೆಯೆಂಬ
ಅರವತ್ತೇಳನೆಯ ಅಧ್ಯಾಯವು
ಮುಗಿದುದು.



# ಅಷ್ಟಷಷ್ಟಿತಮೋಽಧ್ಯಾಯಃ

---

## ಕಾಮೋದಾಮಾಹಾತ್ಮ್ಯಂ ಪ್ರಾರಭ್ಯತೇ

ಮೋಹಿನ್ಯುವಾಚ

ಕಾಮೋದಾಯಾಸ್ತು ಮಾಹಾತ್ಮ್ಯಂ ಬ್ರೂಹಿ ಮೇ ದ್ವಿಜಸತ್ತಮ ।
ಯಚ್ಛ್ರುತ್ವಾಹಂ ತವ ಮುಖಾತ್ಪ್ರಸನ್ನಾ ಸ್ಯಾಂ ಕೃತಾರ್ಥವತ್ ॥ ೧ ॥

ವಸುರುವಾಚ

ಶೃಣು ದೇವಿ ಪ್ರವಕ್ಷ್ಯಾಮಿ ಕಾಮೋದಾಖ್ಯಾನಕಂ ಶುಭಂ ।
ಯಚ್ಛ್ರುತ್ವಾ ಸರ್ವಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ ॥ ೨ ॥

ಕಾಮೋದಾಖ್ಯಂ ಪುರಂ ದೇವಿ ಗಂಗಾತೀರೇ ವ್ಯವಸ್ಥಿತಂ ।
ಕಾಮೋದಾ ಯತ್ರ ವರ್ತಂತೇ ಸಾರ್ಧಂ ದೇವೈರ್ಹರಿಪ್ರಿಯಾಃ ॥ ೩ ॥

---

## ಅರವತ್ತೆಂಟನೆಯ ಅಧ್ಯಾಯ

೧. ದ್ವಿಜಶ್ರೇಷ್ಠಾ ! ಕಾಮೋದಾ ಮಾಹಾತ್ಮ್ಯೆಯನ್ನು ನನಗೆ ಹೇಳು. ಅದನ್ನು ನಿನ್ನಮುಖದಿಂದ ಕೇಳಿ ಕೃತಾರ್ಥಳಾಗಿ ನಾನು ಶಾಂತಚಿತ್ತಳಾಗುವೆನು ಎಂಬುದಾಗಿ ಮೋಹಿನಿಯು ವಸುವನ್ನು ಕೇಳಿದಳು.

೨. ವಸುವು ಹೇಳಿದನು :—ದೇವೀ ! ಮಂಗಳಕರವಾದ ಕಾಮೋದೋಪಾಖ್ಯಾನವನ್ನು ಹೇಳುವೆನು, ಕೇಳು. ಅದನ್ನು ಕೇಳುವುದರಿಂದ ಸಕಲ ಪಾಪವಿಮೋಚನೆಯಾಗುವುದು ಸಂದೇಹವಿಲ್ಲ.

೩. ದೇವೀ ! ಗಂಗಾತೀರದಲ್ಲಿ ಕಾಮೋದಾ ಎಂಬ ಪುರವಿದೆ. ಅಲ್ಲಿ ಹರಿಪ್ರಿಯರಾದ ಕಾಮೋದಾ ನಾಮಕರಾದ ದೇವಿಯರು ದೇವತೆಗಳ ಸಹಿತರಾಗಿ ಅಲ್ಲಿರುವರು.

ಯದಾ ಸುರಾಸುರೈರ್ದೇವಿ ಮಥಿತಃ ಕ್ಷೀರಸಾಗರಃ ।
ಕಾಮೋದಾ ಸಾ ತದೋತ್ಪನ್ನಾ ಕನ್ಯಾರತ್ನಚತುಷ್ಟಯಂ ॥ ೪ ॥

ಕನ್ಯಾ ರಮಾಖ್ಯಾ ಪ್ರಥಮಾ ದ್ವಿತೀಯಂ ವಾರುಣೀ ಸ್ಮೃತಾ ।
ಕಾಮೋದಾಖ್ಯಾ ತೃತೀಯಾ ತು ಚತುರ್ಥೀ ತು ವರಾಭಿಧಾ ॥ ೫ ॥

ತತ್ರ ಕನ್ಯಾತ್ರಯಂ ಪ್ರಾಪ್ತಂ ವಿಷ್ಣುನಾ ಪ್ರಭವಿಷ್ಣುನಾ ।
ವಾರುಣೀತ್ವಸುರೈರ್ನೀತಾ ವಿಷ್ಣುದೇವಾಜ್ಞಯಾ ಸತಿ ॥ ೬ ॥

ತತಃ ಪ್ರಭೃತಿ ಲಕ್ಷ್ಮೀಸ್ತು ವಿಷ್ಣೋರ್ವಕ್ಷಃಸ್ಥಲೇ ಸ್ಥಿತಾ ।
ಬಭೂವ ವಿಷ್ಣುಪತ್ನೀ ಸಾ ಸಪತ್ನೀರಹಿತಾ ಶುಭೇ ॥ ೭ ॥

ಭವಿಷ್ಯಕಾರ್ಯಂ ವಿಜ್ಞಾಯ ದೇವಾ ವಿಷ್ಣುಸಮಾಜ್ಞಯಾ ।
ಕಾಮೋದಾಖ್ಯೇ ಪುರೇ ದೇವೀಂ ಕಾಮೋದಾಂ ಪೂಜಯಂತಿ ಹಿ ॥ ೮ ॥

---

೪. ದೇವಿಯೇ! ದೇವಾಸುರರು ಕ್ಷೀರಸಾಗರವನ್ನು ಮಥನಮಾಡಿದಾಗ ಕಾಮೋದಾ ಎಂಬ ನಾಲ್ಕು ಕನ್ಯಾರತ್ನಗಳು ಉತ್ಪನ್ನವಾದುವು.

೫. ಅವರಲ್ಲಿ ರಮಾ ಎಂಬ ಕನ್ಯೆಯೇ ಮೊದಲನೆಯವಳು. ವಾರುಣಿಯು ಎರಡನೆಯವಳು. ಕಾಮೋದೆಯು ಮೂರನೆಯವಳು. ವರಾ ಎಂಬ ಕನ್ಯೆಯು ನಾಲ್ಕನೆಯವಳು.

೬. ಸಾಧ್ವಿಯೇ! ಆ ಕನ್ಯೆಯರಲ್ಲಿ ಮೂವರನ್ನು ಅತಿಸಮರ್ಥನಾದ ವಿಷ್ಣುವು ಪರಿಗ್ರಹಿಸಿದನು. ವಿಷ್ಣುದೇವನ ಅಪ್ಪಣೆಯ ಪ್ರಕಾರ ವಾರುಣಿಯು ಅಸುರರಿಂದ ಒಯ್ಯಲ್ಪಟ್ಟಳು.

೭. ಮಂಗಳಕರಳೇ! ಆಗಿನಿಂದಲೂ ಲಕ್ಷ್ಮೀದೇವಿಯು ವಿಷ್ಣುವಿನ ವಕ್ಷಸ್ಥಳದಲ್ಲಿರುವಳು. ಆ ದೇವಿಯು ಸಪತ್ನೀರಹಿತಳಾಗಿ ವಿಷ್ಣುಪತ್ನಿಯಾದಳು.

೮. ಮುಂದಾಗಬೇಕಾದ ಕಾರ್ಯವನ್ನು ತಿಳಿದು ದೇವತೆಗಳು ವಿಷ್ಣುವಿನ ಅಪ್ಪಣೆಯ ಪ್ರಕಾರ ಕಾಮೋದಾ ನಾಮಕವಾದ ಪಟ್ಟಣದಲ್ಲಿ ಕಾಮೋದಾದೇವಿಯನ್ನು ಪೂಜಿಸುತ್ತಿರುವರು.

ಸಾ ತತ್ರ ವರ್ತತೇ ನಿತ್ಯಂ ವಿಷ್ಣುಸಂಯೋಗಕಾಮ್ಯಯಾ ।
ಭಾರ್ಯಾತ್ವಂ ಭಾವತಃ ಪ್ರಾಪ್ತಾ ವಿಷ್ಣುಧ್ಯಾನಪರಾಯಣಾ ॥ ೯ ॥

ಸ ತತ್ರ ಭಾವಗಮ್ಯೋ ವೈ ವಿಷ್ಣುಃ ಸರ್ವಗತೋ ಮಹಾನ್ ।
ಅನಯಾಪಿ ತಯಾ ನಿತ್ಯಂ ವರ್ತತೇ ತತ್ಸಮೀಪತಃ ॥ ೧೦ ॥

ಸ ದೇವೈರ್ವಾಸುರೈರ್ದೇವಿ ಮುನಿಭಿರ್ಮಾನವೈಸ್ತಥಾ ।
ಅಲಕ್ಷ್ಯದೇಹೋ ವಿಶ್ವಾತ್ಮಾ ವರ್ತತೇ ಧ್ಯಾನಗೋಚರಃ ॥ ೧೧ ॥

ಧ್ಯಾನೇನೈವ ಪ್ರಪಶ್ಯಂತಿ ದೇವಾಶ್ಚ ಮುನಯೋ ವಿಭುಂ ।
ಕಾಮೋದಾ ಸಾ ಮಹಾಭಾಗಾ ಯದಾ ಹಸತಿ ಮೋಹಿನಿ ॥ ೧೨ ॥

ಹರ್ಷೇಣ ತು ಸಮಾವಿಷ್ಟಾ ತದಾಶ್ರೂಣಿ ಪತಂತಿ ಚ ।
ಆನಂದಾಶ್ರೂಣಿ ಗಂಗಾಯಾಂ ಪತಿತಾನಿ ಸುರೇಶ್ವರಿ ॥ ೧೩ ॥

---

೯. ಆ ದೇವಿಯು ಯಾವಾಗಲೂ ವಿಷ್ಣುಸಮಾಗಮವನ್ನೇ ಬಯಸುತ್ತಾ ವಿಷ್ಣುಧ್ಯಾನತತ್ಪರಳಾಗಿ ಭಾರ್ಯೆಯೆಂದು ಅನುಸಂಧಾನಮಾಡಿಕೊಂಡಳು.

೧೦. ಭಾವಗಮ್ಯನೂ, ಸರ್ವಗತನೂ ಆದ ಮಹಾವಿಷ್ಣುವು ಈ ಕಾಮೋದಾದೇವಿಯ ಸಮೀಪದಲ್ಲಿಯೂ ಸರ್ವದಾ ಇರುತ್ತಿದ್ದನು.

೧೧. ದೇವಿಯೇ! ಧ್ಯಾನಗೋಚರನಾದ ಆ ವಿಷ್ಣುವು ದೇವತೆಗಳು, ಅಸುರರು, ಮುನಿಗಳು ಮತ್ತು ಮನುಷ್ಯರು ಇವರುಗಳಿಗೆ ಕಾಣಿಸದಂತೆಯೇ ಜಗತ್ತಿನಲ್ಲೆಲ್ಲಾ ಅಂತರ್ಗತನಾಗಿರುವನು.

೧೨-೧೩. ದೇವತೆಗಳೂ, ಮುನಿಗಳೂ ಸಹ ಸ್ವಾಮಿಯನ್ನು ಧ್ಯಾನದಿಂದಲೇ ನೋಡುವರು. ಮೋಹಿನೀ! ಮಹಾಭಾಗ್ಯಶಾಲಿನಿಯಾದ ಕಾಮೋದಾದೇವಿಯು ನಕ್ಕಾಗ ಸಂತೋಷಪೂರ್ಣಳಾದ ಆ ದೇವಿಯ ನೇತ್ರಗಳಿಂದ ಆನಂದಬಾಷ್ಪಗಳು ಸುರಿಯುವುವು.

೧೪-೧೫. ಸುರೇಶ್ವರಿಯೇ! ಗಂಗೆಯಲ್ಲಿ ಬಿದ್ದ ಆ ಆನಂದಬಾಷ್ಪಗಳು

ಕಾಮೋದಾಖ್ಯಾನಿ ಪದ್ಮಾನಿ ತಾನಿ ತತ್ರ ಭವಂತಿ ಚ ।
ಪೀತಾನಿ ಚ ಸುಗಂಧೀನಿ ಮಹಾಮೋಹಪ್ರದಾನಿ ಚ ॥ ೧೪ ॥

ಯಸ್ತು ಭಾಗ್ಯವಶಾಲ್ಲಬ್ಧ್ವಾ ತಾನಿ ತೈಃ ಪೂಜಯೇಚ್ಛಿವಂ ।
ಸ ಲಭೇದ್ವಾಂಛಿತಾನ್ಕಾಮಾನಿತ್ಯಾಜ್ಞಾ ಪಾರಮೇಶ್ವರೀ ॥ ೧೫ ॥

ದುಃಖಜಾನಿ ತಥಾಶ್ರೂಣಿ ಕದಾಚಿತ್ಸ್ರಪತಂತಿ ಹಿ ।
ತೇಭ್ಯಶ್ಚ ತಾನಿ ಪದ್ಮಾನಿ ವಿಗಂಧೀನ್ಯುದ್ಭವಂತಿ ಚ ॥ ೧೬ ॥

ತೈಸ್ತು ಯಃ ಪೂಜಯೇದ್ದೇವಂ ಶಂಕರಂ ಲೋಕಶಂಕರಂ ।
ಸ ಯುಜ್ಯೇತಾಖಿಲೈರ್ದುಃಖೈಃ ಪೂರ್ವಪಾಪೈರ್ವಿಮೋಹಿತಃ ॥ ೧೭ ॥

ಗಂಗಾದ್ವಾರಾದುಪರಿ ಚ ದಶಯೋಜನಕೇ ಸ್ಥಿತಂ ।
ಕಾಮೋದಂ ತತ್ರ ವರ್ಷೈಕಂ ಯೋ ಜಪೇದ್ದ್ವಾದಶಾಕ್ಷರಂ ॥ ೧೮ ॥

---

ಅಲ್ಲಿ ಕಾಮೋದವೆಂಬ ಪದ್ಮಗಳಾಗುವುವು. ಅವು ಹಳದೀ ಬಣ್ಣವುಳ್ಳವುಗಳು, ಸುವಾಸನೆಯಿಂದ ಕೂಡಿರುವುವೂ ಆಗಿ ಮಹಾನಂದದಾಯಕಗಳಾಗಿರುತ್ತವೆ.

೧೫. ಅದೃಷ್ಟದಿಂದ ಆ ಕಮಲಗಳನ್ನು ಪಡೆದು ಅವುಗಳಿಂದ ಈಶ್ವರನನ್ನು ಪೂಜಿಸುವ ಭಾಗ್ಯಶಾಲಿಯು ಇಷ್ಟಾರ್ಥಗಳನ್ನು ಪಡೆಯುವನು ಎಂಬುದಾಗಿ ಪರಮೇಶ್ವರನ ಅಪ್ಪಣೆಯಾಗಿದೆ.

೧೬. ಅಂತೆಯೇ ಒಂದಾನೊಂದು ಸಮಯದಲ್ಲಿ ಕಾಮೋದಾದೇವಿಯು ದುಃಖದಿಂದ ಕಣ್ಣೀರನ್ನು ಸುರಿಸುವಳು. ಗಂಗೆಯಲ್ಲಿ ಬಿದ್ದ ಆ ಕಣ್ಣೀರಿನಿಂದ ದುರ್ಗಂಧವುಳ್ಳ ಪದ್ಮಗಳು ಹುಟ್ಟುವುವು.

೧೭. ಅವುಗಳಿಂದ ಲೋಕಸುಖಕರನಾದ ಶಂಕರದೇವನನ್ನು ಪೂಜಿಸುವವನು ಸಕಲಪಾಪಗಳಿಂದ ಮೋಹಿತನಾಗಿ ಎಲ್ಲಾ ದುಃಖಗಳನ್ನೂ ಅನುಭವಿಸುವನು.

೧೮-೧೯. ಗಂಗಾದ್ವಾರದಿಂದ ಮುಂದೆ ಹತ್ತುಗಾವುದ ದೂರದಲ್ಲಿರುವ ಕಾಮೋದಾಕ್ಷೇತ್ರದಲ್ಲಿ ಒಂದು ವರ್ಷ ದ್ವಾದಶಾಕ್ಷರಮಂತ್ರವನ್ನು ಜಪಿಸಿ

ವರ್ಷಾಂತೇ ಚೈತ್ರಮಾಸಸ್ಯ ದ್ವಾದಶ್ಯಾಂ ವಿಧಿನಂದಿನಿ ।
ವಾಸಂತೀಂ ಚ ಶ್ರಿಯಂ ದೃಷ್ಟ್ವಾ ಸಾಹಸೋದ್ಧರ್ಷತಃ ಸದಾ ॥ ೧೯ ॥

ತಾನಿ ಪದ್ಮಾನಿ ಸ ಲಭೇನ್ನಾನ್ಯದಾ ಕೋಽಪಿ ಕರ್ಹಿಚಿತ್ ।
ತತ್ರ ಯಃ ಸ್ನಾತಿ ಮನುಜೋ ವಿಷ್ಣುಭಕ್ತಿಪರಾಯಣಃ ॥ ೨೦ ॥

ಧ್ಯಾತ್ವಾ ಪುರಂ ಚ ಕಾಮೋದಂ ಸ ಭವೇದ್ವಿಷ್ಣುವಲ್ಲಭಃ ।
ದೇವತಾನಾಂ ಪಿತೄಣಾಂ ಚ ಸ ಲಭೇನ್ನಾತ್ರ ಸಂಶಯಃ ॥ ೨೧ ॥

ಯೋ ದ್ವಾದಶಸಮಾಸ್ತತ್ರ ತಿಷ್ಠೇಜ್ಜಪಪರಾಯಣಃ ।
ಸ ಲಭೇದ್ದರ್ಶನಂ ಸಾಕ್ಷಾತ್ಕಾಮೋದಾಯಾಃ ಶುಭಾನನೇ ॥ ೨೨ ॥

ಯಂ ಯಂ ಚಿಂತಯತೇ ಕಾಮಂ ತತ್ರ ತೀರ್ಥೇ ನರಃ ಶುಚಿಃ ।
ಸ್ನಾನಮಾತ್ರೇಣ ಲಭತೇ ತಂ ತಮೈಹಿಕಮಂಗನೇ ॥ ೨೩ ॥

---

ವರ್ಷದ ಕೊನೆಯಲ್ಲಿ ಚೈತ್ರಮಾಸ ದ್ವಾದಶಿಯದಿನ ವಸಂತಕಾಲದ ಸಂಪತ್ತನ್ನು ನೋಡಿ ಸಂತೋಷಿಸುವ ಸಾಹಸಶಾಲಿಗೆ ಆ ಪದ್ಮಗಳು ದೊರೆಯುವುವು.

೨೦-೨೧. ಬೇರೆ ಸಮಯದಲ್ಲಿ ಯಾವನಿಗೂ ಹೇಗೂ ಅವು ಸಿಕ್ಕಲಾರವು. ಆ ತೀರ್ಥದಲ್ಲಿ ವಿಷ್ಣುಭಕ್ತಿ ನಿರತನಾಗಿ ಸ್ನಾನಮಾಡಿ ಕಾಮೋದಪುರವನ್ನು ಧ್ಯಾನಿಸುವವನು ವಿಷ್ಣುಪ್ರಿಯನಾಗುವನು. ಅವನು ದೇವತೆ ಮತ್ತು ಪಿತೃಗಳಿಗೆ ಸದ್ಗತಿಯನ್ನು ಹೊಂದಿಸಿ ತಾನೂ ಶ್ರೇಯೋಭಾಗಿಯಾಗುವನು. ಈ ವಿಷಯ ದಲ್ಲಿ ಸಂದೇಹವಿಲ್ಲ.

೨೨. ಶುಭಾನನೇ! ಆ ಕ್ಷೇತ್ರದಲ್ಲಿ ಹನ್ನೆರಡು ವರ್ಷಗಳು ಜಪಮಾಡುತ್ತಾ ವಾಸಿಸುವವನು ಸಾಕ್ಷಾತ್ತಾಗಿ ಕಾಮೋದಾದೇವಿಯ ದರ್ಶನವನ್ನು ಪಡೆಯುವನು.

೨೩. ಅಂಗನೇ! ಮನುಷ್ಯನು ಶೌಚಾಚಮನಾದಿಗಳಿಂದ ಶುಚಿಯಾಗಿ ಆ ತೀರ್ಥದಲ್ಲಿ ಸ್ನಾನಮಾಡುವ ಮಾತ್ರದಿಂದ ಅವನು ನೆನೆದ ಇಷ್ಟಾರ್ಥಗಳೆಲ್ಲವೂ ಈ ಲೋಕದಲ್ಲಿಯೇ ಲಭಿಸುವುವು.

ಏತದ್ಧಿ ಪರಮಂ ತೀರ್ಥಂ ಲಭ್ಯಂ ಭಾಗ್ಯವಶಾದ್ಧ್ರುವೇತ್ ।
ಹಿಮಾತ್ಯಯೋದಗಂ ಭದ್ರೇ ದುರ್ಗಮಂ ವಿಕಟಸ್ಥಲಂ ॥ ೨೮ ॥

ಏತತ್ತೇ ಸರ್ವಮಾಖ್ಯಾತಂ ಕಾಮೋದಾಖ್ಯಾನಕಂ ಶುಭಂ ।
ಯಃ ಶೃಣೋತಿ ನರೋ ಭಕ್ತ್ಯಾ ಸೋಽಪಿ ಪಾಪೈಃ ಪ್ರಮುಚ್ಯತೇ ॥ ೨೯ ॥

ಇತಿ ಶ್ರೀನಾರದೀಯಪುರಾಣೋತ್ತರಭಾಗೇ ವಸುಮೋಹಿನೀಸಂವಾದೇ
ಕಾಮೋದಾಖ್ಯಾನಂ ನಾಮಾಷ್ಟಷಷ್ಟಿತಮೋಽಧ್ಯಾಯಃ

ಇತಿ ಕಾಮೋದಾಮಾಹಾತ್ಮ್ಯಂ ಸಮಾಪ್ತಂ



---

೨೮. ಭದ್ರೇ! ಈ ಉತ್ತಮತೀರ್ಥವು ಪುಣ್ಯಾತಿಶಯದಿಂದಲೇ ಲಭಿಸಬೇಕು. ಅದು ಹಿಮವು ಹೆಚ್ಚಾಗಿರುವುದರಿಂದ ಹೋಗಲಶಕ್ಯವಾದ ವಿಕಟಸ್ಥಳವಾಗಿದೆ.

೨೯. ಮೋಹಿನೀ! ಮಂಗಳಕರವಾದ ಈ ಕಾಮೋದೋಪಾಖ್ಯಾನವನ್ನು ಸಮಗ್ರವಾಗಿ ನಿನಗೆ ಹೇಳಿರುವೆನು ಇದನ್ನು ಭಕ್ತಿಯಿಂದ ಶ್ರವಣಮಾಡುವ ಮನುಷ್ಯನೂ ಸಹ ಪಾಪಮುಕ್ತನಾಗುವನು.

ಇಂತು ಶ್ರೀನಾರದೀಯಪುರಾಣೋತ್ತರಭಾಗದಲ್ಲಿ ವಸು ಮೋಹಿನೀ
ಸಂವಾದದೊಳು ಕಾಮೋದಾಖ್ಯಾನವೆಂಬ
ಅರವತ್ತೆಂಟನೆಯ ಅಧ್ಯಾಯವು
ಮುಗಿದುದು.



# ಏಕೋನಸಪ್ತತಿತಮೋಽಧ್ಯಾಯಃ



## ಅಥ ಸಿದ್ಧನಾಥಚರಿತ್ರಸಹಿತಂ ಕಾಮಾಕ್ಷಾಮಾಹಾತ್ಮ್ಯಂ ಪ್ರಾರಭ್ಯತೇ

ಮೋಹಿನ್ಯುವಾಚ

ಶ್ರುತಂ ಕಾಮೋದಕಾಖ್ಯಾನಂ ಪಾಪಘ್ನಂ ಪುಣ್ಯದಂ ನೃಣಾಂ |
ಸಾಂಪ್ರತಂ ಶ್ರೋತುಮಿಚ್ಛಾಮಿ ಕಾಮಾಕ್ಷಾಯಾಃ ಫಲಂ ದ್ವಿಜ ॥ ೧ ॥

ವಸುರುವಾಚ

ಕಾಮಾಕ್ಷಾ ಪರಮಾ ದೇವೀ ಪೂರ್ವಸ್ಯಾಂ ದಿಶಿ ಸಂಸ್ಥಿತಾ |
ಸಾಗರಾನೂಪತಟಗಾ ಕಲೌ ಸಿದ್ಧಿಪ್ರದಾ ನೃಣಾಂ ॥ ೨ ॥

ಯಸ್ತತ್ರ ಗತ್ವಾ ಕಾಮಾಕ್ಷಾಂ ಸಂಪೂಜ್ಯ ನಿಯತಾಶನಃ |
ತಿಷ್ಠೇದೇಕಾಂ ನಿಶಾಂ ಭದ್ರೇ ಸ ಪಶ್ಯೇತ್ತಾಂ ದೃಢಾಸನಃ ॥ ೩ ॥

---

## ಅರವತ್ತೊಂಭತ್ತನೆಯ ಅಧ್ಯಾಯ

೧. ದ್ವಿಜನೇ! ಮನುಷ್ಯರಿಗೆ ಪಾಪಗಳನ್ನು ಹೋಗಲಾಡಿಸಿ ಪುಣ್ಯವನ್ನು ಕೊಡುವ ಕಾಮೋದೋಪಾಖ್ಯಾನವನ್ನು ಕೇಳಿದ್ದಾಯಿತು. ಈಗ ನಿನ್ನ ದಯೆಯಿಂದ ಕಾಮಾಕ್ಷೆಯ ಫಲವನ್ನು ಕೇಳಬಯಸುವೆನು ಎಂದು ಮೋಹಿನಿಯು ವಸುವನ್ನು ಕೇಳಿದಳು.

೨. ವಸುವು ಹೇಳಿದನು :—ಕಾಮಾಕ್ಷಾ ಎಂಬ ಉತ್ತಮದೇವಿಯು ಪೂರ್ವದಿಕ್ಕಿನಲ್ಲಿ ಸಮುದ್ರತೀರದ ಸಮೀಪದಲ್ಲಿರುವಳು. ಆ ದೇವಿಯು ಮನುಷ್ಯರಿಗೆ ಕಲಿಯುಗದಲ್ಲಿ ಸಿದ್ಧಿಪ್ರದಳು.

೩. ಭದ್ರೇ! ಆ ಕ್ಷೇತ್ರಕ್ಕೆಹೋಗಿ ಸ್ಥಿರಾಸನದಲ್ಲಿ ಕುಳಿತು ಆಹಾರ ನಿಯಮದಿಂದ ಕಾಮಾಕ್ಷಾದೇವಿಯನ್ನು ಪೂಜಿಸಿ ಅಲ್ಲಿ ಒಂದುರಾತ್ರಿ ವಾಸಿಸುವವನು ಆ ದೇವಿಯ ದರ್ಶನಮಾಡುವನು.

ಸಾ ದೇವೀ ಭೀಮರೂಪೇಣ ಯಾತಿ ಸಂದರ್ಶನಂ ನೃಣಾಂ ।
ತಾಂ ದೃಷ್ಟ್ವಾ ನ ಚಲೇದ್ಯೋ ವೈ ಸ ಸಿದ್ಧಿಂ ವಾಂಛಿತಾಂ ಲಭೇತ್ ॥೪॥

ಯಸ್ತು ದೃಷ್ಟ್ವಾ ಸುರೇಶಾನೀಂ ಕಾಮಾಕ್ಷಾಂ ಭೀಮರೂಪಿಣೀಂ ।
ಆಸನಾಚ್ಚಲತೇ ಸದ್ಯಃ ಸ ವಿಕ್ಷಿಪ್ತೋ ಭವೇದ್ಧ್ರುವಂ ॥ ೫ ॥

ತತ್ರಾಸ್ತೇ ಪಾರ್ವತೀಪುತ್ರಃ ಸಿದ್ಧನಾಥೋ ವರಾನನೇ ।
ಉಗ್ರೇ ತಪಸಿ ಲೋಕೈಃ ಸ ಪ್ರೇಕ್ಷ್ಯತೇ ನ ಕದಾಚನ ॥ ೬ ॥

ಕೃತತ್ರೇತಾದ್ವಾಪರೇಷು ಪ್ರತ್ಯಕ್ಷಂ ದೃಶ್ಯತೇಽಖಿಲೈಃ ।
ಕಲಾವಂತರ್ಹಿತಸ್ತಿಷ್ಠೇದ್ಯಾವತ್ಪಾದಃ ಕಲೇರ್ವ್ರಜೇತ್ ॥ ೭ ॥

ಕಲೇಃ ಪಾದೇ ಗತೇ ಚೈಕಸ್ಮಿನ್ ಘೋರೇ ಚ ಧರಾತಲೇ ।
ಸ ವೈ ಪ್ರತ್ಯಕ್ಷತಾಂ ಪ್ರಾಪ್ಯ ಸಾಧಯೇದಖಿಲಂ ಜನಂ ॥ ೮ ॥

---

೪. ಆ ದೇವಿಯು ಭಯಂಕರರೂಪದಿಂದ ಮನುಷ್ಯರಿಗೆ ದರ್ಶನಕೊಡು ವಳು. ಆ ರೂಪವನ್ನು ತಾಳಿದ ದೇವಿಯನ್ನು ನೋಡಿ ಮನಸ್ಸು ಚಲಿಸದಿರು ವವನು ಅಪೇಕ್ಷಿಸಿದ ಸಿದ್ಧಿಯನ್ನು ಹೊಂದುವನು.

೫. ಭಯಂಕರ ರೂಪವನ್ನು ಧರಿಸಿದ, ಸುರೇಶ್ವರಿಯಾದ ಕಾಮಾಕ್ಷಾ ದೇವಿಯನ್ನು ನೋಡಿದಕೂಡಲೇ ಆಸನದಿಂದ ಚಲಿಸುವವನು ಖಂಡಿತವಾಗಿಯೂ ವಿಕ್ಷೇಪಹೊಂದುವನು.

೬. ವರಾನನೇ! ಪಾರ್ವತೀದೇವಿಯ ಮಗನಾದ ಸಿದ್ಧನಾಥನು ಅಲ್ಲಿ ಉಗ್ರವಾದ ತಪಸ್ಸನ್ನು ಮಾಡುತ್ತಿರುವನು. ಅವನು ಯಾವಾಗಲೂ ಜನರಿಗೆ ಕಾಣಿಸಿಕೊಳ್ಳುವುದಿಲ್ಲ.

೭. ಅವನು ಕೃತ, ತ್ರೇತಾ ಮತ್ತು ದ್ವಾಪರಯುಗಗಳಲ್ಲಿ ಎಲ್ಲರಿಗೂ ಪ್ರತ್ಯಕ್ಷವಾಗಿ ಕಾಣುತ್ತಿದ್ದನು. ಕಲಿಯುಗದಲ್ಲಿ ಮೊದಲನೆಯ ಪಾದವು ಕಳೆ ಯುವವರೆಗೂ ಅಲ್ಲಿಯೇ ಅದೃಶ್ಯನಾಗಿರುವನು.

೮. ಕಲಿಯುಗದಲ್ಲಿ ಒಂದುಪಾದವು ಕಳೆದಮೇಲೆ ಘೋರವಾದ ಭೂಲೋಕದಲ್ಲಿ ಆ ಸಿದ್ಧಿನಾಥನು ಸಾಕ್ಷಾತ್ತಾಗಿ ಕಾಣಿಸಿಕೊಂಡು ಸಮಸ್ತಜನ ರಿಗೂ ಸಿದ್ಧಿಯನ್ನುಂಟುಮಾಡುವನು.

ಮೋಹನಾದ್ಯೈರುಪಾಯೈಸ್ತು ಮ್ಲೇಚ್ಛಪ್ರಾಯಾಂಜನಾಂಸ್ತದಾ ।
ಕೃತ್ವಾ ವಶೇ ಮಹಾಭಾಗೇ ಗಮಯೇದ್ವಿಪದಂ ಕಲೇಃ ॥ ೯ ॥

ಯಸ್ತತ್ರ ಗತ್ವಾ ಸಿದ್ಧೇಶಂ ಭಕ್ತಿಭಾವಸಮನ್ವಿತಃ ।
ಚಿಂತಯೇದ್ವರ್ಷಮಾತ್ರಂ ತು ಕಾಮಾಕ್ಷಾಂ ನಿತ್ಯದಾರ್ಚಯೇ ॥ ೧೦ ॥

ಸ ಲಭೇದ್ದರ್ಶನಂ ಸ್ವಪ್ನೇ ದರ್ಶನಾಂತೇ ಸಮಾಹಿತಃ ।
ಸೂಚಿತಾಂ ತೇನ ಸಿದ್ಧಿಂ ಸ ಲಬ್ಧ್ವಾ ಸಿದ್ಧೋ ಭವೇದ್ಭುವಿ ॥ ೧೧ ॥

ವಿಚರೇತ್ಸರ್ವಲೋಕಾನಾಂ ಕಾಮನಾಃ ಪೂರಯನ್ ಶುಭೇ ।
ತ್ರಿಲೋಕ್ಯಾಂ ಯಾನಿ ವಸ್ತೂನಿ ತಾನಿ ಸಂಕರ್ಷಯೇದ್ವರಾತ್ ॥ ೧೨ ॥

ಸ ಮತ್ಸ್ಯನಾಥಃ ಕಿಲ ತತ್ರ ಸಂಸ್ಥೋ
ವಿಜ್ಞಾನಪಾರಂಗಮ ಏವ ಭದ್ರೇ ।
ಚಚಾರ ಲೋಕಾಭಿಮತಂ ವಿತನ್ವಂ
ಸ್ತಪೋತಿಘೋರಂ ನ ಚ ಯಾತಿ ದೃಷ್ಟಿಂ ॥ ೧೩ ॥

---

೯. ಆಗ ಮ್ಲೇಂಚ್ಛಪ್ರಾಯರಾಗಿದ್ದ ಜನರನ್ನು ಸಿದ್ಧನಾಥನು ಮೋಹನಾದ್ಯುಪಾಯಗಳಿಂದ ವಶಮಾಡಿಕೊಂಡು ಕಲಿಯುಗದ ಎರಡನೆಯಪಾದವನ್ನು ಕಳೆಸುವನು.

೧೦-೧೧. ಆ ಕ್ಷೇತ್ರಕ್ಕೆ ಹೋಗಿ ಭಕ್ತಿಭಾವಯುತನಾಗಿ ಕಾಮಾಕ್ಷಾದೇವಿಯನ್ನು ಪ್ರತಿದಿನವೂ ಪೂಜಿಸುತ್ತಾ ಒಂದುವರ್ಷ ಸಿದ್ಧೇಶನನ್ನು ಧ್ಯಾನಿಸುತ್ತಿರುವವನು ಸ್ವಪ್ನದಲ್ಲಿ ಸಿದ್ಧನಾಥನನ್ನು ಸಾಕ್ಷಾತ್ತಾಗಿ ನೋಡುವನು. ಆಮೇಲೆ ಅವನಿಂದ ಸೂಚಿತವಾದ ಸಿದ್ಧಿಯನ್ನು ಹೊಂದಿ ಭೂಮಂಡಲದಲ್ಲಿ ಸಿದ್ಧಿವಂತನಾಗಿರುವನು.

೧೨. ಮಂಗಳಕರಳೇ! ಅವನು ಎಲ್ಲಾಜನಗಳ ಇಷ್ಟಾರ್ಥವನ್ನೂ ಪೂರ್ತಿಗೊಳಿಸುತ್ತ ಸಂಚರಿಸುತ್ತಿರುವನು. ಅವನು ಮೂರುಲೋಕಗಳಲ್ಲಿಯೂ ಇರುವವಸ್ತುಗಳನ್ನು ವರಬಲದಿಂದ ಆಕರ್ಷಿಸವನು.

೧೩. ಭದ್ರೆ! ಅಲ್ಲಿರುವ ವಿಜ್ಞಾನಪಾರಂಗತನಾದ ಆ ಮತ್ಸ್ಯನಾಥನು ಜನರ ಇಷ್ಟಾರ್ಥವನ್ನು ನೆರವೇರಿಸುತ್ತ ಉಗ್ರತಪಸ್ಸು ಮಾಡುತ್ತಿರುನು. ಅವನು ಯಾರದೃಷ್ಟಿಗೂ ಗೋಚರಿಸುವುದಿಲ್ಲ.

ಯುಗಾನ್ಯನೇಕಾನಿ ಪುರಾ ಭ್ರಮಿತ್ವಾ
ಲೋಕಾನ್ ಸಮಗ್ರಾನಹತೇಷ್ಟಗತ್ಯಾ ।
ತಪಃಸ್ಥಿತೋದ್ಯಾಸ್ತಿ ಮಹಾನುಭಾವೋ
ನ ಕಾಲವೇಗೇನ ಶುಭೇಽಭಿಭೂತಃ ॥ ೧೪ ॥

ಗಂಡಾಂತಜಾತಸ್ತು ಪುರಾ ಭವೇಽಭೂ
ದ್ದ್ವಿಜಸ್ಯ ಕಸ್ಯಾಪಿ ಸುತಃ ಸುಭದ್ರೇ ।
ಸ ಜಾತಮಾತ್ರಃ ಕಿಲ ಪುಷ್ಕರಾಖ್ಯೇ
ದ್ವೀಪೇಽಸ್ಯ ಪಿತ್ರಾ ಹ್ಯುದಧೌ ವಿಸೃಷ್ಟಃ ॥ ೧೫ ॥

ಪ್ರಕ್ಷಿಪ್ತಮಾತ್ರಂ ಕಿಲ ತತ್ರ ಬಾಲಂ
ಮತ್ಸ್ಯೋಗ್ರಸೀತ್ಕೋಽಪಿ ವಿಧೇರ್ನಿಯೋಗಾತ್ ।
ತತ್ರ ಸ್ಥಿತೋಽನೇಕಯುಗಾನಿ ಸೋಽಭೂತ್
ಕಾಲಸ್ಯ ಗತ್ಯಾ ಹ್ಯಜರಾಮರಾಂಗಃ ॥ ೧೬ ॥

---

೧೪. ಅವನು ಪೂರ್ವದಲ್ಲಿ ಅನೇಕ ಯುಗಗಳಕಾಲ ಎಲ್ಲಾಲೋಕಗಳಲ್ಲಿಯೂ ತಡೆಯಿಲ್ಲದೆ ಸ್ವೇಚ್ಛಾನುಸಾರವಾಗಿ ಸಂಚರಿಸಿ ಈಗ ತಪಸ್ಸಿನಲ್ಲಿ ತೊಡಗಿರುವ ಮಹಾನುಭಾವನು. ಅವನು ಕಾಲವೇಗದಿಂದ ಶುಭ ಹಾನಿಯನ್ನು ಹೊಂದುವುದಿಲ್ಲ.

೧೫. ಸುಭದ್ರೇ ! ಅವನು ಪೂರ್ವಜನ್ಮದಲ್ಲಿ ಒಬ್ಬಾನೊಬ್ಬ ಬ್ರಾಹ್ಮಣನ ಮಗನಾಗಿ ಪುಷ್ಕರದ್ವೀಪದಲ್ಲಿ ಗುಹೆಯಲ್ಲಿ ಹುಟ್ಟಿದನು. ಹುಟ್ಟಿಕೂಡಲೇ ಅವನ ತಂದೆಯು ಅವನನ್ನು ಸಮುದ್ರದಲ್ಲಿ ಬಿಟ್ಟುಬಿಟ್ಟನು.

೧೬. ಸಮುದ್ರದಲ್ಲಿ ಹಾಕಿದಕೂಡಲೇ ವಿಧಿಯ ಪ್ರೇರಣೆಯಮೇರೆಗೆ ಒಂದು ಮೀನು ಆ ಬಾಲಕನನ್ನು ನುಂಗಿತು. ಅನೇಕ ಯುಗಗಳವರೆಗೆ ಅವನು ಅಲ್ಲಿಯೇ ಇದ್ದು ದೈವಗತಿಯಿಂದ ಜರಾಮರಣ ರಹಿತನಾದನು.

ತತಃ ಕದಾಚಿತ್ಪ್ರಿಯಯಾ ಪ್ರಬಿಷ್ಟೋ
ಮಹೇಶ್ವರಃ ಸಾರ್ಧಮಗಪ್ರಸೂತ್ಯಾ ।
ತತ್ತ್ವೋಪದೇಶಾಯ ಜಗಾಮ ಭದ್ರೇ
ಸ ಲೋಕಲೋಕಾಚಲಮಪ್ರಮೇಯಃ ॥ ೧೭ ॥

ತತ್ಸೌಮ್ಯಶೃಂಗೇ ಮಣಿಭಿಃ ಪ್ರದೀಪ್ತೇ
ಸ್ಥಿತ್ವಾ ಕ್ಷಣಾರ್ಧಂ ಹರಿಮಗ್ನಚೇತಾಃ ।
ದೇವೀಮುಮಾಂ ಸಂಪ್ರತಿಬೋಧ್ಯ ಶಕ್ತ್ಯಾ
ತಾಲತ್ರಯೇಣಾಪ್ಯಭಿಭೂಯ ಸತ್ತ್ವಾ ॥ ೧೮ ॥

ಉವಾಚ ತತ್ತ್ವಂ ಸುರಹಸ್ಯಭೂತಂ
ಯದ್ದ್ವಾದಶಾರ್ಣಾರ್ಥನಿಜಸ್ವರೂಪಂ ।
ತತಸ್ತು ಸಾ ಶೈಲಸುತಾ ಮಹೇಶಂ
ಮಾರಾಂತಕಂ ಯಾವದಭಿಪ್ರಣಮ್ಯ ॥ ೧೯ ॥

---

೧೭. ಭದ್ರೇ! ಆಮೇಲೆ ಒಂದಾನೊಂದು ಕಾಲದಲ್ಲಿ ಪತ್ನಿಯಾದ ಪಾರ್ವತೀದೆವಿಯಿಂದ ತತ್ತ್ವೋಪದೇಶಮಾಡಬೇಕೆಂದು ಪ್ರಾರ್ಥಿತನಾಗಿ ಅಪ್ರಮೇಯನಾದ ಮಹೇಶ್ವರನು ಪರ್ವತಪುತ್ರಿಯಾದ ಪಾರ್ವತೀದೇವಿಯೊಡನೆ ಲೋಕಾಲೋಕಪರ್ವತಕ್ಕೆ ಹೋದನು.

೧೮-೧೯. ಮಣಿಗಳಿಂದ ಹೊಳೆಯುತ್ತಿರುವ, ಸೌಮ್ಯವಾದ ಆ ಪರ್ವತ ಶಿಖರದಲ್ಲಿ ಅರ್ಧಕ್ಷಣಕಾಲ ಹರಿಯಲ್ಲಿಯೇ ಮನಸ್ಸನ್ನು ನಟ್ಟು, ಈ ಉಮಾದೇವಿಯನ್ನು ಸಂಭೋಧಿಸಿ ಶಕ್ತಿಯಿಂದ ಮತ್ತು ಮೂರು ಚಪ್ಪಾಳೆಗಳಿಂದಲೂ ಭೂತೋಚ್ಚಾಟನೆ ಮಾಡಿ ಅತ್ಯಂತ ರಹಸ್ಯವಾದ, ದ್ವಾದಶಾಕ್ಷರ ಮಂತ್ರಾರ್ಥವಾದ ನಿಜಸ್ವರೂಪತತ್ತ್ವವನ್ನು ಹೇಳಿದನು.

ಆಜ್ಞಾಯ ತತ್ವಂ ಸಮವಸ್ಥಿತಾಭೂ
ತ್ತಾವತ್ಸ ಮತ್ಸ್ಯಸ್ತು ಮಹಾರ್ಣವಸ್ಥಃ ।
ದೃತಂ ಸಮುಪ್ಲುತ್ಯ ಜಗಾಮ ಶೃಂಗಂ
ಯೋಽ ವಿಪ್ರಬಾಲೋಽ ಹ್ಯುದರೇಽಸ್ಯ ಸಂಸ್ಥಃ ॥ ೨೦ ॥
(ತತ್ತ್ವಸಿದ್ಧೋಽಖಿಲಬಂಧಮುಕ್ತಃ)
ನಿರ್ಗಮ್ಯ ಮತ್ಸ್ಯೋದರತಃ ಶುಭಾಸ್ಯೇ
ನಮಃ ಪ್ರಚಕ್ರೇ ಭವಯೋಃ ಪುರಸ್ತಾತ್ ।
ವಿಜ್ಞಾತತತ್ತ್ವೋಽಪಿ ಮಹೇಶ್ವರಸ್ತಂ
ಪಪ್ರಚ್ಛ ತದ್ಗರ್ಭಪತೇರ್ನಿದಾನಂ ॥ ೨೧ ॥

ಸ ವರ್ಣಯಾಮಾಸ ಯಥಾರ್ಥಮೇವ
ತಯೋಃ ಪುರಃ ಸರ್ವಮಪಿ ಪ್ರವೃತ್ತಂ ।
ಆಕರ್ಣ್ಯ ತದ್ವೃತ್ತಮನುಪ್ರಸನ್ನಃ
ಸೋಮಾಮಹೇಶೋಽನುಮತಿಂ ಚ ಕೃತ್ವಾ ॥ ೨೨ ॥

---

೧೯.೨೧. ಆಗ ಪಾರ್ವತಿಯು ಮಾರಾಂತಕನಾದ ಮಹೇಶ್ವರನನ್ನು ನಮಸ್ಕರಿಸಿ ತತ್ತ್ವವನ್ನು ತಿಳಿದುಕೊಳ್ಳುವಷ್ಟರಲ್ಲಿಯೇ ಮಹಾ ಸಮುದ್ರದಲ್ಲಿದ್ದ ಆ ಮತ್ಸ್ಯವು ಬಹುಬೇಗ ಹಾರಿ ಪರ್ವತಶಿಖರಕ್ಕೆ ಬಂದಿತು. ಆಗ ಅದರ ಉದರ ದಲ್ಲಿದ್ದ ಬ್ರಾಹ್ಮಣಬಾಲಕನು ತತ್ತ್ವಜ್ಞಾನವನ್ನು ಹೊಂದಿ ಸಕಲ ಬಂಧಗಳಿಂದಲೂ ವಿಮೋಚನೆಯನ್ನು ಹೊಂದಿ ಮೀನಿನಹೊಟ್ಟೆಯಿಂದ ಹೊರಕ್ಕೆಬಂದು ಇದಿರಿ ಗಿದ್ದ ಪಾರ್ವತೀಪರಮೇಶ್ವರರಿಗೆ ನಮಸ್ಕಾರಮಾಡಿದನು. ಮಹೇಶ್ವರನು ಅದರ ತತ್ತ್ವವನ್ನು ತಿಳಿದವನಾದರೂ ಈ ರೀತಿಯಾದ ಗರ್ಭಪತನದ ಮೂಲವೇನೆಂದು ಆ ಬ್ರಾಹ್ಮಣಬಾಲಕನನ್ನು ಕೇಳಿದನು.

೨೨. ಅವನು ಆ ಪಾರ್ವತೀಪರಮೇಶ್ವರರಿಬ್ಬರಿಗೂ ನಡೆದ ವೃತ್ತಾಂತವ ನ್ನೆಲ್ಲಾ ಸತ್ಯವಾಗಿ ಹೇಳಿದನು. ಅದನ್ನು ಪಾರ್ವತೀಯುತನಾದ ಪರಮೇಶ್ವರನು ಪ್ರಸನ್ನನಾಗಿ ಅನುಮೋದನೆಯನ್ನು ಮಾಡಿದನು.

ತಂ ಕಲ್ಪಯೊಮಾಸ ಯುತಂ ಶುಭಾಂಗೇ
ಸೋತ್ಸಂಗ ಆಸ್ಥಾಪ್ಯ ಚುಚುಂಬ ವಕ್ತ್ರಂ ।
ಸುತೋ ಮಮಾಯಂ ಕಿಲ ಮತ್ಸ್ಯನಾಥೋ
ವಿಜ್ಞಾತಸತ್ತ್ವೋಽಖಿಲಸಿದ್ಧನಾಥಃ ॥ ೨೩ ॥

ನಿಜೇಚ್ಛಯಾ ಸಂಪ್ರತಿ ಯಾತು ಲೋಕಾನ್
ಕೀರ್ತಿಂ ವಿತನ್ವನ್ ಸುಖಮಾವಯೋಶ್ಚ ।
ತತಃ ಪ್ರಭೃತ್ಯೇಷ ಸುತೋಂಬಿಕಾಯಾ
ಲೋಕಾನ್ ಸಮಗ್ರಾನ್ ಪ್ರವಿಹೃತ್ಯ ಕಾಮಂ ॥ ೨೪ ॥

ತತ್ಸಿದ್ಧಪೀಠಂ ಸಮವಾಪ್ಯ ತತ್ರ
ತಪಸ್ಯುಪಾದಿಷ್ಟ ಇವಾಸ್ಥಿತೋಽಸ್ತಿ ।
ತಂ ಸಿದ್ಧನಾಥಂ ಮನಸಾ ವಿಚಿಂತ್ಯ
ನರೋ ಭವೇತ್ಸಿದ್ಧಸಮಸ್ತಕಾಮಃ ॥ ೨೫ ॥

---

೨೩-೨೪. ಬಳಿಕ ಈಶ್ವರನು ಆ ಬಾಲಕನನ್ನು ತೊಡೆಯಮೇಲೆ ಕೂಡಿಸಿಕೊಂಡು ಮುಖವನ್ನು ಮುದ್ದಾಡಿ "ಈ ಮತ್ಸ್ಯನಾಥನು ನನ್ನ ಮಗನಷ್ಟೆ! ಇವನು ತತ್ವಜ್ಞಾನಿಯು, ಸಮಸ್ತಸಿದ್ಧಿಗೂ ಒಡೆಯನೂ ಆಗಿ (ಸಿದ್ಧನಾಥನೆನಿಸಿ) ಇನ್ನುಮುಂದೆ ಕೀರ್ತಿಯನ್ನು ಹರಡುತ್ತಾ ನಮ್ಮಿಬ್ಬರಿಗೂ ಸಂತೋಷವನ್ನುಂಟುಮಾಡುವವನಾಗಿ ತನ್ನ ಇಚ್ಛಾನುಸಾರ ಲೋಕಗಳಲ್ಲಿ ಸಂಚರಿಸಲಿ" ಎಂಬುದಾಗಿ ಅನುಗ್ರಹಿಸಿದನು.

೨೪-೨೬. ಆಗಿನಿಂದಲೂ ಈ ಅಂಬಿಕಾಸುತನು ಯಥೇಷ್ಟವಾಗಿ ಎಲ್ಲಾ ಲೋಕಗಳಲ್ಲಿಯೂ ಸಂಚರಿಸಿ ಆ ಸಿದ್ಧಪೀಠವನ್ನು ಹೊಂದಿ ಅಲ್ಲಿ ತಪೋನಿಷ್ಠನಾಗಿರುವನು. ಅಂತಹ ಸಿದ್ಧನಾಥನನ್ನು ಮನದಲ್ಲಿ ನೆನೆಯುವ ಮನುಷ್ಯನು ಇಷ್ಟಾರ್ಥಸಿದ್ಧಿಗಳನ್ನೆಲ್ಲಾ ಹೊಂದುವನು. ಮತ್ತು ಅವನು ವಿದ್ಯೆಗಳಲ್ಲಿ ಪಾರಂಗತನಾಗಿ ತನ್ನ ವಾಕ್ಚಾತುರ್ಯಬಲದಿಂದ ಪಂಡಿತಸಮೂಹವನ್ನೆಲ್ಲಾ ಜಯಿಸುವನು.

ಸಂಪ್ರಾಪ್ಯ ವಿದ್ಯಾಂ ನಿಜವಾಕ್ಯಬಾಹೋ
ನಿಮಜ್ಜಯೇತ್ಪಂಡಿತವರ್ಗಜಾತಂ ।
ಏತಾಂ ಕಥಾಂ ತಸ್ಯ ಜಗತ್ಪವಿತ್ರಾಂ
ಶೃಣೋತಿ ಯಃ ಕರ್ಣಪಥಪ್ರಯಾತಾಂ || ೨೬ ||

ಸ ಚಾಭಿಕಾಮಂ ಸಮವಾಪ್ಯ ಭೂಮೌ
ಸ್ವರ್ಗಂ ಪ್ರಯಾತ್ಯೇವ ಸುರಾರ್ಚಿತಾಂಘ್ರಿಃ ।
ಏತನ್ಮಯಾ ತೇ ಕಥಿತಂ ಸುನೇತ್ರೇ
ಶ್ರೀಸಿದ್ಧನಾಥಸ್ಯ ಚರಿತ್ರಯುಕ್ತಂ || ೨೭ ||

ಕಾಮಾಕ್ಷಮಾಹಾತ್ಮ್ಯಮಘಘ್ನಮಾದ್ಯಂ
ಭೂಯೋಽಪಿ ಕಿಂತೇ ಪ್ರವದಾಮಿ ಭದ್ರೇ || ೨೮ ||

ಇತಿ ಶ್ರೀನಾರದೀಯಪುರಾಣೋತ್ತರಭಾಗೇ ವಸುಮೋಹಿನೀಸಂವಾದೇ
ಸಿದ್ಧನಾಥಚರಿತ್ರಯುಕ್ತಂ ಕಾಮಾಕ್ಷಾಮಾಹಾತ್ಮ್ಯಂ
ನಾಮೈಕೋನಸಪ್ತತಿತಮೋಽಧ್ಯಾಯಃ

ಇತಿ ಸಿದ್ಧನಾಥಚರಿತ್ರಸಹಿತಂ ಕಾಮಾಕ್ಷಾಮಾಹಾತ್ಮ್ಯಂ ಸಮಾಪ್ತಂ

---

೨೬-೨೭. ಲೋಕಪಾವನವಾದ ಸಿದ್ಧನಾಥನ ಈ ಚರಿತ್ರೆಯನ್ನು ಕಿವಿಗೊಟ್ಟು ಕೇಳುವವನು ಭೂಲೋಕದಲ್ಲಿ ತನ್ನ ಇಷ್ಟಾರ್ಥವನ್ನೆಲ್ಲಾ ಹೊಂದಿ ದೇವತೆಗಳಿಂದಲೂ ಸತ್ಕರಿಸಲ್ಪಡುವವನಾಗಿ ಸ್ವರ್ಗದಲ್ಲಿ ಭೋಗಿಸುವನು.

೨೭-೨೮. ಮನೋಹರನಯನವುಳ್ಳ ಮೋಹಿನೀ! ಪಾಪಗಳನ್ನು ಹೋಗಲಾಡಿಸುವಂತಹ ಕಾಮಾಕ್ಷಾ ಮಾಹಾತ್ಮ್ಯೆಯನ್ನು ಶ್ರೀ ಸಿದ್ಧನಾಥನ ಚರಿತ್ರೆಯ ಸಹಿತವಾಗಿ ನಿನಗೆ ಹೇಳಿರುವೆನು. ಭದ್ರೇ! ನಿನಗೆ ಇನ್ನಾವುದನ್ನು ಹೇಳಲಿ?

ಇಂತು ಶ್ರೀನಾರದೀಯಪುರಾಣೋತ್ತರಭಾಗದಲ್ಲಿ ವಸು ಮೋಹಿನೀ
ಸಂವಾದದೊಳು ಸಿದ್ಧನಾಥಚರಿತ್ರೆಯ ಸಹಿತವಾದ ಕಾಮಾಕ್ಷಾ
ಮಾಹಾತ್ಮ್ಯೆಯೆಂಬ ಅರವತ್ತೊಂಬತ್ತನೆಯ
ಅಧ್ಯಾಯವು ಮುಗಿದುದು.

# ಸಪ್ತತಿತಮೋಽಧ್ಯಾಯಃ



## ಅಥ ಪ್ರಭಾಸಮಾಹಾತ್ಮ್ಯಂ ಪ್ರಾರಭ್ಯತೇ

ಮೋಹಿನ್ಯುವಾಚ

ಪ್ರಭಾಸಸ್ಯ ತು ಮಾಹಾತ್ಮ್ಯಂ ವದ ಮೇ ದ್ವಿಜಸತ್ತಮ ।
ಯಚ್ಛ್ರುತ್ವಾಹಂ ಪ್ರಸನ್ನಾತ್ಮಾ ಧನ್ಯಾ ಸ್ಯಾಂ ತ್ವತ್ಪ್ರಸಾದತಃ ॥ ೧ ॥

ವಸುರುವಾಚ

ಶೃಣು ದೇವಿ ಪ್ರವಕ್ಷ್ಯಾಮಿ ಪ್ರಭಾಸಾಖ್ಯಂ ಸುಪುಣ್ಯದಂ ।
ತೀರ್ಥಂ ಪಾಪಹರಂ ನೃಣಾಂ ಭುಕ್ತಿಮುಕ್ತಿಪ್ರದಾಯಕಂ ॥ ೨ ॥

ಯಸ್ಮಿನ್ನಸಂಖ್ಯತೀರ್ಥಾನಿ ವಿದ್ಯಂತೇ ವಿಧಿನಂದಿನಿ ।
ಸೋಮೇಶೋ ಯತ್ರ ವಿಶ್ವೇಶೋ ಭಗವಾನ್ ಗಿರಿಜಾಪತಿಃ ॥ ೩ ॥

---

## ಎಪ್ಪತ್ತನೆಯ ಅಧ್ಯಾಯ.

೧. ದ್ವಿಜಶ್ರೇಷ್ಠನೇ! ಪ್ರಭಾಸಕ್ಷೇತ್ರದ ಮಾಹಾತ್ಮ್ಯೆಯನ್ನು ನನಗೆ ಹೇಳು. ನಿನ್ನ ಅನುಗ್ರಹದಿಂದ ನಾನು ಅದನ್ನು ಕೇಳಿ ಸಂತುಷ್ಟಚಿತ್ತಳಾಗಿ ಧನ್ಯಳಾಗುವೆನು ಎಂಬುದಾಗಿ ಮೋಹಿನಿಯು ವಸುವನ್ನು ಕೇಳಿದಳು.

೨. ವಸುವು ಹೇಳಿದನು :—ದೇವೀ! ಸೇವಿಸುವ ಮನುಷ್ಯರಿಗೆ ಪಾಪಗಳನ್ನು ಪರಿಹರಿಸಿ ಅತ್ಯಂತ ಪುಣ್ಯಗಳನ್ನು ಕೊಡುವುದು, ಭೋಗಮೋಕ್ಷದಾಯಕವೂ ಆದ ಪ್ರಭಾಸತೀರ್ಥದ ಮಹಿಮೆಯನ್ನು ಹೇಳುವೆನು ಕೇಳು.

೩. ವಿಧಿಕುಮಾರಿಯೇ! ಈ ಪ್ರಭಾಸತೀರ್ಥದಲ್ಲಿ ಜಗದೀಶನೂ, ಪಾರ್ವತೀಪತಿಯೂ ಆದ ಭಗವಾನ್ ಸೋಮೇಶ್ವರನು ಸನ್ನಿಹಿತನಾಗಿರುವ ತೀರ್ಥಗಳು ಅಸಂಖ್ಯಾಕಗಳಾಗಿವೆ.

ಸ್ನಾತ್ವಾ ಪ್ರಭಾಸಕೇ ತೀರ್ಥೇ ಸೋಮನಾಥಂ ಪ್ರಪೂಜ್ಯ ಚ ।
ನರೋ ಮುಕ್ತಿಮವಾಪ್ನೋತಿ ಸತ್ಯಮೇತನ್ಮಯೋದಿತಂ ॥ ೪ ॥

ಯೋಜನಾನಾಂ ದಶ ದ್ವೇ ಚ ಪ್ರಭಾಸಪರಿಮಂಡಲಂ ।
ಮಧ್ಯೇಽಸ್ಯ ಪೀಠಿಕಾ ಪ್ರೋಕ್ತಾ ಪಂಚಯೋಜನವಿಸ್ತೃತಾ ॥ ೫ ॥

ಗೋಚರ್ಮಮಾತ್ರಂ ತನ್ಮಧ್ಯೇ ಕ್ಷೇತ್ರಂ ಕೈಲಾಸತೋಽಧಿಕಂ ।
ಅರ್ಕಸ್ಥಲಂ ತತ್ರ ಪುಣ್ಯಂ ತೀರ್ಥಮನ್ಯತ್ಸುಶೋಭನಂ ॥ ೬ ॥

ಸಿದ್ಧೇಶ್ವರಾದಿಲಿಂಗಾನಿ ಯತ್ರ ಸಂತಿ ಸಹಸ್ರಶಃ ।
ತತ್ರ ಸ್ನಾತ್ವಾ ನರೋ ಭಕ್ತ್ಯಾ ಸಂತರ್ಪ್ಯ ಪಿತೃದೇವತಾಃ ॥ ೭ ॥

ಲಿಂಗಾನಿ ಪೂಜಯಿತ್ವಾ ಚ ಯಾತಿ ರುದ್ರಸಲೋಕತಾಂ ।
ಅಗ್ನಿತೀರ್ಥಂ ತಥಾನ್ಯಚ್ಚ ಸಾಗರಸ್ಯ ತಟೇ ಸ್ಥಿತಂ ॥ ೮ ॥

---

೪. ಮನುಷ್ಯನು ಪ್ರಭಾಸತೀರ್ಥದಲ್ಲಿ ಸ್ನಾನಮಾಡಿ ಸೋಮನಾಥನನ್ನು ಪೂಜಿಸಿದರೆ ಮುಕ್ತಿಯನ್ನು ಹೊಂದುವನು. ನಾನು ಹೇಳಿರುವ ಈ ವಿಷಯವು ಸತ್ಯವಾದುದು.

೫. ಪ್ರಭಾಸಕ್ಷೇತ್ರದ ಸುತ್ತಳತೆಯು ಹನ್ನೆರಡುಗಾವುದ ವಿಸ್ತಾರವಾಗಿದೆ. ಇದರ ಮಧ್ಯದಲ್ಲಿ ಐದು ಗಾವುದ ವಿಸ್ತಾರವುಳ್ಳ ಪ್ರದೇಶವು ಪೀಠಿಕಾ ಎಂದು ವಿಹಿತವಾಗಿದೆ.

೬. ಅದರ ಮಧ್ಯದಲ್ಲಿರುವ ಗೋಚರ್ಮದಷ್ಟು ಪ್ರದೇಶವು ಕೈಲಾಸಕ್ಕಿಂತಲೂ ಹೆಚ್ಚಿನದು. ಅಲ್ಲಿ ಅತ್ಯಂತ ಮಂಗಳಕರವಾದ ಅರ್ಕಸ್ಥಳವೆಂಬ ಇನ್ನೊಂದು ಪುಣ್ಯತೀರ್ಥವಿದೆ.

೭-೮. ಅಲ್ಲಿ ಸಿದ್ಧೇಶ್ವರ ಮುಂತಾದ ಸಾವಿರಾರು ಲಿಂಗಗಳಿವೆ. ಅಲ್ಲಿ ಭಕ್ತಿಪೂರ್ವಕವಾಗಿ ಸ್ನಾನಮಾಡಿ ಪಿತೃದೇವತೆಗಳಿಗೆ ತರ್ಪಣವನ್ನು ಕೊಟ್ಟು ಲಿಂಗಗಳನ್ನು ಪೂಜಿಸುವ ಮನುಷ್ಯನು ರುದ್ರಸಾಲೋಕ್ಯವನ್ನು ಹೊಂದುವನು.

ತತ್ರ ಸ್ನಾತ್ವಾ ನರೋ ದೇವಿ ವಹ್ನಿಲೋಕಮವಾಪ್ನುಯಾತ್ ।
ತತ್ರ ದೇವಂ ಕಪರ್ದೀಶಂ ಸೋಪವಾಸಃ ಪ್ರಪೂಜ್ಯ ಚ ॥ ೯ ॥

ಶಿವಲೋಕಮವಾಪ್ನೋತಿ ಭುಕ್ತ್ವಾ ಭೋಗಾನಿಹೇಪ್ಸಿತಾನ್ ।
ಕೇದಾರೇಶಂ ತತೋ ಗತ್ವಾ ಸಮಭ್ಯರ್ಚ್ಯ ವಿಧಾನತಃ ॥ ೧೦ ॥

ಸ್ವರ್ಗತಿಂ ಸಮವಾಪ್ನೋತಿ ವಿಮಾನೇನ ಸುರಾರ್ಚಿತಃ ।
ಭೀಮೇಶಂ ಭೈರವೇಶಂ ಚ ಚಂಡೀಶಂ ಭಾಸ್ಕರೇಶ್ವರಂ ॥ ೧೧ ॥

ಅಂಗಾರೇಶಂ ಚ ಗುರ್ವೀಶಂ ಸೋಮೇಶಂ ಭೃಗುಜೇಶ್ವರಂ ।
ಶನಿರಾಹುಶಿಖೀಶಾಂಶ್ಚ ಕ್ರಮಾದ್ಗಚ್ಛೇಚ್ಚತುರ್ದಶ ॥ ೧೨ ॥

---

೮-೯. ದೇವೀ! ಸಮುದ್ರತೀರದ ಅಗ್ನಿತೀರ್ಥವೆಂಬ ಮತ್ತೊಂದ ತೀರ್ಥವಿದೆ. ಅಲ್ಲಿ ಸ್ನಾನಮಾಡುವುದರಿಂದ ಮನುಷ್ಯನು ಅಗ್ನಿಲೋಕವನ್ನು ಹೊಂದುವನು.

೯-೧೦. ಅಲ್ಲಿ ಉಪವಾಸವಿದ್ದು ಕಪರ್ದೀಶ್ವರಸ್ವಾಮಿಯನ್ನು ಪೂಜಿಸಿದರೆ ಈ ಲೋಕದಲ್ಲಿ ಬಯಸಿದ ಭೋಗಗಳನ್ನೆಲ್ಲಾ ಅನುಭವಿಸಿ, ನಂತರ ಶಿವಲೋಕವನ್ನು ಹೊಂದುವನು.

೧೦-೧೧. ಅಲ್ಲಿಂದ ಕೇದಾರೇಶಕ್ಷೇತ್ರಕ್ಕೆ ಹೋಗಿ ಅಲ್ಲಿರುವ ಈಶ್ವರನನ್ನು ವಿಧವತ್ತಾಗಿ ಪೂಜಿಸಿದರೆ ಅವನು ವಿಮಾನಮಾರ್ಗವಾಗಿ ಸ್ವರ್ಗಕ್ಕೆ ಹೋಗಿ ದೇವತೆಗಳಿಂದ ಸತ್ಕರಿಸಲ್ಪಡುವನು.

೧೧-೧೨. ಅನಂತರ ಕ್ರಮವಾಗಿ ಭೀಮೇಶ, ಭೈರವೇಶ, ಚಂಡೀಶ, ಭಾಸ್ಕರೇಶ್ವರ, ಅಂಗಾರೇಶ, ಗುರ್ವೀಶ, ಸೋಮೇಶ, ಭುಜಗೇಶ್ವರ, ಶನಿ, ರಾಹು ಕೇತು ಮತ್ತು ಈಶ ಎಂಬ ಹನ್ನೆರಡು, ಹಿಂದಿನ ಕಪರ್ದೀಶ, ಕೇದಾರೇಶಗಳೆರಡರ ಸಹಿತವಾಗಿ ಒಟ್ಟು ಹದಿನಾಲ್ಕು ದೇವತೆಗಳ ದರ್ಶನಾದಿಗಳನ್ನು ಮಾಡಿ ಸೇವಿಸಬೇಕು.

ಭಕ್ತ್ಯಾ ಪೃಥಕ್ಪೃಥಕ್ತೇಷಾಂ ಪೂಜಾಂ ಕೃತ್ವಾ ವಿಧಾನವಿತ್ ।
ಶಿವಸಾಲೋಕ್ಯಮಾಪ್ನೋತಿ ನಿಗ್ರಹಾನುಗ್ರಹೇ ಕ್ಷಮಃ ॥ ೧೩ ॥

ಸಿದ್ಧೇಶ್ವರಾದಿಪಂಚಾನ್ಯಲಿಂಗಾನಿ ವಿಧಿನಂದಿನಿ ।
ಸಮುಚ್ಯರ್ಲಭತೇ ಸಿದ್ಧಿಮೈಹಿಕಾಮುಷ್ಮಿಕೀಂ ನರಃ ॥ ೧೪ ॥

ವರಾರೋಹಾಮಜಾಪಾಲಾಂ ಮಂಗಲಾಂ ಲಲಿತೇಶ್ವರೀಂ ।
ಸಂಪೂಜ್ಯ ಕ್ರಮತಶ್ಚೈತಾಂ ವಿಪಾಪೋ ಜಾಯತೇ ನರಃ ॥ ೧೫ ॥

ಲಕ್ಷ್ಮೀಶ್ವರಂ ವಾಡವೇಶಂ ಮರ್ಘೀಶಂ ಕಾಮಕೇಶ್ವರಂ ।
ಸಮಭ್ಯರ್ಚ್ಯ ನರೋ ಭಕ್ತ್ಯಾ ಸಾಕ್ಷಾಲ್ಲೋಕೇಶತಾಂ ವ್ರಜೇತ್ ॥ ೧೬ ॥

ಗೌರೀತಪೋವನಂ ಪ್ರಾಪ್ಯ ಗೌರೀಶವರುಣೇಶ್ವರೌ ।
ಉಷೇಶ್ವರಂ ಚ ಸಂಪೂಜ್ಯ ನರಃ ಸ್ವರ್ಗತಿಮಾಪ್ನುಯಾತ್ ॥ ೧೭ ॥

---

೧೩. ವಿಧಾನಜ್ಞನು ಅವರಿಗೆಲ್ಲಾ ಪ್ರತ್ಯೇಕ ಪ್ರತ್ಯೇಕವಾಗಿ ಪೂಜೆಯನ್ನು ಮಾಡಿದರೆ ನಿಗ್ರಹಾನುಗ್ರಹಸಾಮರ್ಥ್ಯವನ್ನು ಹೊಂದಿ ಶಿವಸಾಲೋಕ್ಯವನ್ನು ಪಡೆಯುವನು.

೧೪. ಬ್ರಹ್ಮಕುಮಾರೀ ! ಇವಲ್ಲದೇ ಸಿದ್ಧೇಶ್ವರ ಮುಂತಾದ ಐದು ಲಿಂಗಗಳಿವೆ. ಅವುಗಳನ್ನು ಪೂಜಿಸುವುದರಿಂದ ಮನುಷ್ಯನು ಈ ಲೋಕ ಪರಲೋಕಗಳಲ್ಲಿ ಸಿದ್ಧಿಯನ್ನು ಪಡೆಯುವನು.

೧೫. ವರಾರೋಹಾ, ಅಜಾಪಾಲಾ, ಮಂಗಳಾ ಮತ್ತು ಲಲಿತೇಶ್ವರೀ ಎಂಬೀ ದೇವಿಯರನ್ನು ಕ್ರಮವಾಗಿ ಪೂಜೆಮಾಡುವ ಮನುಷ್ಯನು ಪಾಪಗಳನ್ನು ಕಳೆದುಕೊಳ್ಳುವನು.

೧೬. ಲಕ್ಷ್ಮೀಶ್ವರ, ವಾಡವೇಶ, ಮರ್ಘೀಶ, ಕಾಮಕೇಶ್ವರ ಇವರನ್ನು ಭಕ್ತಿಯಿಂದ ಪೂಜಿಸುವ ಮನುಷ್ಯನು ಲೋಕಕ್ಕೆಲ್ಲಾ ಒಡೆಯನಾಗುವನು.

೧೭. ಗೌರೀತಪೋವನಕ್ಕೆ ಹೋಗಿ ಗೌರೀಶ, ವರುಣೇಶ್ವರ ಮತ್ತು ಉಷೇಶ್ವರರನ್ನು ಪೂಜಿಸಿದರೆ ಮನುಷ್ಯನು ಸ್ವರ್ಗಲೋಕಕ್ಕೆ ಹೋಗುವನು.

ಗಣೇಶಂ ಚ ಕುಮಾರೇಶಂ ಖಾಕಕೇಶಕುಲೇಶ್ವರೌ ।
ಉತ್ತಂಕೇಶಂ ಚ ವಹ್ನೀಶಂ ಗೌತಮಂ ದೈತ್ಯಸೂದನಂ　　॥ ೧೮ ॥

ಸಮಭ್ಯರ್ಚ್ಯ ವಿಧಾನೇನ ನ ನರೋ ದುರ್ಗತಿಂ ವ್ರಜೇತ್ ।
ಚಕ್ರತೀರ್ಥಂ ತತಃ ಪ್ರಾಪ್ಯ ತತ್ರ ಸ್ನಾತ್ವಾ ವಿಧಾನತಃ　　॥ ೧೯ ॥

ಗೌರೀದೇವೀಂ ಸಮಭ್ಯರ್ಚ್ಯ ನರೋಽಭಿಲಷಿತಂ ಲಭೇತ್ ।
ಸಂನಿಹತ್ಯಾಹ್ವಯಂ ತೀರ್ಥಂ ಪ್ರಾಪ್ಯ ತತ್ರ ವರಾನನೇ　　॥ ೨೦ ॥

ಸ್ನಾತ್ವಾ ಸಂತರ್ಪ್ಯ ದೇವಾದೀನ್ ಸಂನಿಹತ್ಯಾಫಲಂ ಲಭೇತ್ ।
ಅಥೈಕಾದಶಲಿಂಗಾನಿ ಭೂತೇಶಾದೀನಿ ಯೋಽರ್ಚಯೇತ್　　॥ ೨೧ ॥

ಸ ಲಬ್ಧ್ವೇಹ ವರಾನ್ ಭೋಗಾನಂತೇ ರುದ್ರಪದಂ ವ್ರಜೇತ್ ।
ಆದಿನಾರಾಯಣಂ ದೇವಂ ಸಮಭ್ಯರ್ಚ್ಯ ನರೋತ್ತಮಃ　　॥ ೨೨ ॥

---

೧೮-೧೯. ಗಣೇಶ, ಕುಮಾರೇಶ, ಖಾಕಕೇಶ, ಕುಲೇಶ್ವರ, ಉತ್ತಂಕೇಶ, ವಹ್ನೀಶ ಮತ್ತು ದೈತ್ಯಸಂಹಾರಕನಾದ ಗೌತಮ ಇವರನ್ನು ವಿಧಾನೋಕ್ತರೀತಿಯಿಂದ ಪೂಜಿಸಿದರೆ ಮನುಷ್ಯನು ದುಃಖಕ್ಕೀಡಾಗುವುದಿಲ್ಲ.

೧೯-೨೦. ಅಲ್ಲಿಂದ ಚಕ್ರತೀರ್ಥಕ್ಕೆ ಹೋಗಿ ಅಲ್ಲಿ ಸ್ನಾನಮಾಡಿ ವಿಧ್ಯುಕ್ತಕ್ರಮದಿಂದ ಗೌರೀದೇವಿಯನ್ನು ಪೂಜಿಸುವ ಮನುಷ್ಯನು ಇಷ್ಟಾರ್ಥವನ್ನು ಹೊಂದುವನು.

೨೦-೨೧. ಆಮೇಲೆ ಸನ್ನಿಹತ್ಯ ಎಂಬ ತೀರ್ಥಕ್ಕೆ ಹೋಗಿ ಅಲ್ಲಿ ಸ್ನಾನ ಮಾಡಿ ದೇವಾದಿಗಳಿಗೆ ತರ್ಪಣಮಾಡುವುದರಿಂದ ಸಂನ್ನಿಹತ್ಯಾ ಫಲವನ್ನು ಹೊಂದುವನು.

೨೧-೨೨. ದೇವಿಯೇ! ಅನಂತರ ಭೂತೇಶ ಮುಂತಾದ ಹನ್ನೊಂದು ಲಿಂಗಗಳನ್ನು ಪೂಜಿಸುವ ಮನುಷ್ಯನು ಈ ಲೋಕದಲ್ಲಿ ಉತ್ತಮ ಭೋಗಗಳನ್ನನುಭವಿಸಿ ಕೊನೆಗೆ ರುದ್ರಲೋಕಕ್ಕೆ ಹೋಗುವನು.

ಮೋಕ್ಷಭಾಗೀ ಭವೇದ್ದೇವಿ ನಾತ್ರ ಕಾರ್ಯಾ ವಿಚಾರಣಾ ।
ತತಶ್ಚಕ್ರಧರಂ ಪ್ರಾಪ್ಯ ಪೂಜಯೇದ್ಯೋ ವಿಧಾನತಃ ॥ ೨೩ ॥

ಸ ತು ಶತ್ರೂಂ ವಿನಿರ್ಜಿತ್ಯ ಭೋಗಾನುಚ್ಚಾವಚಾಂಲ್ಲಭೇತ್ ।
ಸಂವಾದಿತ್ಯಂ ತತಃ ಪ್ರಾಪ್ಯ ಸ್ನಾತ್ವಾ ನಿಯಮಪೂರ್ವಕಂ ॥ ೨೪ ॥

ನೀರೋಗೋ ಧನಧಾನ್ಯಾಢ್ಯೋ ಜಾಯತೇ ಮಾನವೋ ಭುವಿ ।
ತತಸ್ತು ಮನುಜಃ ಪ್ರಾಪ್ಯ ದೇವೀಂ ಕಂಟಕಶೋಧಿನೀಂ ॥ ೨೫ ॥

ಮಹಿಷಘ್ನೀಂ ಚ ಸಂಪೂಜ್ಯ ನಿರ್ಭಯೋ ಜಾಯತೇ ನರಃ ।
ಕಪಾಲೀಶಂ ಚ ಕೋಟೀಶಂ ಸಮಭ್ಯರ್ಚ್ಯ ನರೋತ್ತಮಃ ॥ ೨೬ ॥

ಸುಸೌಭಾಗ್ಯೋ ಭವೇದೇವಂ ಮಧ್ಯಯಾತ್ರಾಂ ಸಮಾಪಯೇತ್ ।
ಬಾಲಬ್ರಹ್ಮಾಭಿಧಂ ಪಶ್ಚಾತ್ಪ್ರಾಪ್ಯ ಮರ್ತ್ಯೋ ನರೇಶ್ವರಿ ॥ ೨೭ ॥

---

೨೨-೨೩. ದೇವೀ! ಆದಿನಾರಾಯಣದೇವನನ್ನು ಪೂಜಿಸುವ ಮನುಷ್ಯೋತ್ತಮನು ಮೋಕ್ಷವನ್ನು ಪಡೆಯುವನು. ಈ ವಿಷಯದಲ್ಲಿ ಸಂದೇಹ ಪಡಬಾರದು.

೨೩-೨೪. ಅಲ್ಲಿಂದ ಚಕ್ರಧರಕ್ಕೆ ಹೋಗಿ ವಿಹಿತಕ್ರಮದಿಂದ ಪೂಜಿಸುವವನು ಶತ್ರುವನ್ನು ಜಯಿಸಿ ಉತ್ತಮಾಧಮ ಭೋಗಗಳನ್ನು ಅನುಭವಿಸುವನು.

೨೪-೨೫. ಅನಂತರ ಸಂವಾದಿತ್ಯತೀರ್ಥಕ್ಕೆ ಹೋಗಿ ನಿಯಮಪೂರ್ವಕವಾಗಿ ಸ್ನಾನಮಾಡಿದರೆ ಆ ಮನುಷ್ಯನು ಈ ಭೂಮಿಯಲ್ಲಿ ಧನಧಾನ್ಯಸಂಪನ್ನನು, ನೀರೋಗನೂ ಆಗುವನು.

೨೫-೨೬. ತರುವಾಯ ಮನುಷ್ಯನು ಮಹಿಷಾಸುರಸಂಹಾರಕಳಾದ ಕಂಟಕಶೋಧಿನೀದೇವಿಯನ್ನು ಪೂಜಿಸಿದರೆ ಅವನು ಭಯರಹಿತನಾಗುವನು.

೨೬-೨೭. ಕಪಾಲೀಶ ಮತ್ತು ಕೋಟೀಶರನ್ನು ಪೂಜಿಸುವ ಮನುಷ್ಯೋತ್ತಮನು ಅತ್ಯಂತ ಸೌಭಾಗ್ಯಶಾಲಿಯಾಗುವನು. ಈ ರೀತಿಯಾಗಿ ಯಾತ್ರಿಕನು ಯಾತ್ರೆಯ ಮಧ್ಯಭಾಗವನ್ನು ಪೂರ್ತಿಗೊಳಿಸಬೇಕು.

ಜಾಯತೇ ಭುಕ್ತಿಮುಕ್ತೀಶಃ ಸರ್ವದೇವಪ್ರಪೂಜಿತಃ ।
ನರಕೇಶಂ ತತಃ ಪ್ರಾಪ್ಯ ಸಂವರ್ತೇಶಂ ನಿಧೀಶ್ವರಂ ॥ ೨೮ ॥

ಬಲಭದ್ರೇಶ್ವರಂ ಪ್ರಾರ್ಚ್ಯ ಜಾಯತೇ ಭುಕ್ತಿಮುಕ್ತಿಮಾನ್ ।
ಗಂಗಾಗಣಪತಿಂ ಪ್ರಾಪ್ಯ ಸಮಭ್ಯರ್ಚ್ಯ ವಿಧಾನತಃ ॥ ೨೯ ॥

ಲಭತೇ ವಾಂಛಿತಾನ್ಕಾಮಾನಿಹ ಲೋಕೇ ಪರತ್ರ ಚ ।
ತತೋ ಜಾಂಬವತೀಂ ಪ್ರಾಪ್ಯ ನದೀಂ ಭಕ್ತ್ಯಾ ಸಮಾಹಿತಃ ॥ ೩೦ ॥

ಸ್ನಾತ್ವಾ ಸುರಾದೀನಭ್ಯರ್ಚ್ಯ ಕೃತಕೃತ್ಯೋ ಭವೇನ್ನರಃ ।
ಪಾಂಡುಕೂಪೇ ತತಃ ಸ್ನಾತ್ವಾ ಪಾಂಡವೇಶ್ವರಮರ್ಚಯೇತ್ ॥ ೩೧ ॥

---

೨೭-೨೮. ನರೇಶ್ವರಿಯೇ! ಅನಂತರ ಬಾಲಬ್ರಹ್ಮನಾಮಕವಾದ ಕ್ಷೇತ್ರಕ್ಕೆ ಹೋಗುವ ಮನುಷ್ಯನು ಸಕಲ ದೇವತೆಗಳಿಂದಲೂ ಸತ್ಕರಿಸಲ್ಪಟ್ಟು ಈ ಲೋಕದಲ್ಲಿ ಸಕಲ ಭೋಗಗಳನ್ನೂ ಪಡೆದು ಬಳಿಕ ಮೋಕ್ಷಭಾಗಿಯಾಗುವನು.

೨೮-೨೯. ಆಮೇಲೆ ನರಕೇಶ್ವರವನ್ನು ಹೊಂದಿ ಅಲ್ಲಿರುವ ಸಂವರ್ತೇಶ, ನಿಧೀಶ್ವರ ಮತ್ತು ಬಲಭದ್ರೇಶ್ವರರನ್ನು ಪೂಜಿಸಿದರೆ ಅವನು ಭೋಗಮೋಕ್ಷಗಳನ್ನು ಪಡೆಯುವನು.

೨೯-೩೦. ಅಲ್ಲಿಂದ ಗಂಗಾಗಣಪತಿಕ್ಷೇತ್ರಕ್ಕೆ ಹೋಗಿ ಆ ಸ್ವಾಮಿಯನ್ನು ವಿಧಾನೋಕ್ತಪ್ರಕಾರವಾಗಿ ಪೂಜಿಸುವುದರಿಂದ ಮನುಜನು ಈ ಲೋಕ ಪರಲೋಕಗಳಲ್ಲಿ ಇಷ್ಟಾರ್ಥಗಳನ್ನು ಪಡೆಯುವನು.

೩೦-೩೧. ತರುವಾಯ ಜಾಂಬವತೀನದಿಗೆ ಹೋಗಿ ಅಲ್ಲಿ ಭಕ್ತಿಯಿಂದ ಸ್ನಾನಮಾಡಿ ಜಿತೇಂದ್ರಿಯನಾಗಿ ದೇವಾದಿಗಳನ್ನು ಪೂಜಿಸುವುದರಿಂದ ಮನುಷ್ಯನು ಕೃತಕೃತ್ಯನಾಗುವನು.

ಸ ನರಃ ಸ್ವರ್ಗಮಾಯಾತಿ ಕ್ರೀಡತೇ ನಂದನಾದಿಷು ।
ಶತಮೇಧಂ ಲಕ್ಷಮೇಧಂ ಕೋಟಿಮೇಧಮನುಕ್ರಮಾತ್ ॥ ೩೨ ॥

ಲಿಂಗತ್ರಯಂ ಸಮಭ್ಯರ್ಚ್ಯ ಮೋದತೇ ದಿವಿ ದೇವವತ್ ।
ದುರ್ವಾಸಾದಿತ್ಯಕಂ ದೃಷ್ಟ್ವಾ ಸಂಪೂಜ್ಯ ಚ ವಿಧಾನತಃ ॥ ೩೩ ॥

ಅಶ್ವಮೇಧಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತ್ಯಸಂಶಯಂ ।
ಯಾದವಸ್ಥಲಮಾಸಾದ್ಯ ವರ್ಷೇಶಂ ಪ್ರಾರ್ಚ್ಯ ಮಾನವಃ ॥ ೩೪ ॥

ಲಭತೇ ವಾಂಛಿತಾಂ ಸಿದ್ಧಿಂ ದೇವರಾಜೇನ ಸತ್ಕೃತಃ ।
ಹಿರಣ್ಯಾಸಂಗಮೇ ಸ್ನಾತ್ವಾ ದದ್ಯಾದ್ಧೇಮರಥಂ ದ್ವಿಜೇ ॥ ೩೫ ॥

---

೩೧-೩೨. ಅನಂತರ ಪಾಂಡುಕೂಪದಲ್ಲಿ ಸ್ನಾನವಮಾಡಿ ಪಾಂಡವೇಶ್ವರನನ್ನು ಪೂಜಿಸುವ ಮನುಷ್ಯನು ಸ್ವರ್ಗಲೋಕಕ್ಕೆ ಹೋಗಿ ನಂದನ ಮುಂತಾದ ವನಗಳಲ್ಲಿ ವಿಹರಿಸುವನು.

೩೨-೩೩. ಮೂರುಲಿಂಗಗಳನ್ನು ಭಕ್ತಿಯಿಂದ ಪೂಜಿಸಿದರೆ ಕ್ರಮವಾಗಿ ಶತಮೇಧ, ಲಕ್ಷಮೇಧ, ಕೋಟಿಮೇಧ ಇವುಗಳ ಫಲಗಳನ್ನು ಹೊಂದಿ ಅಂತರಿಕ್ಷಲೋಕದಲ್ಲಿ ದೇವತೆಯಂತೆ ಆನಂದಿಸುವನು.

೩೩-೩೪. ದುರ್ವಾಸಾದಿತ್ಯನನ್ನು ದರ್ಶನವಮಾಡಿ ವಿಹಿತರೀತಿಯಿಂದ ಪೂಜಿಸಿದರೆ ಅಶ್ವಮೇಧಯಜ್ಞದ ಫಲವು ಲಭಿಸುವುದು, ಸಂದೇಹವಿಲ್ಲ.

೩೪-೩೫. ಯಾದವ ಸ್ಥಳಕ್ಕೆ ಹೋಗಿ ವರ್ಷೇಶನನ್ನು ಭಕ್ತಿಯಿಂದ ಪೂಜಿಸಿದರೆ ಆ ಮನುಷ್ಯನು ದೇವರಾಜನಿಂದ ಸತ್ಕರಿಸಲ್ಪಡುವನು ಮತ್ತು ಬಯಸಿದ ಸಿದ್ಧಿಯನ್ನು ಹೊಂದುವನು.

೩೫-೩೬. ಹಿರಣ್ಯಾಸಂಗಮದಲ್ಲಿ ಸ್ನಾನವಮಾಡಿ ಬ್ರಾಹ್ಮಣನಿಗೆ ಸುವರ್ಣರಥವನ್ನು ಶಿವಪ್ರೀತ್ಯರ್ಥವಾಗಿ ಭಕ್ತಿಯಿಂದ ದಾನವಮಾಡುವವನು ಅಕ್ಷಯ

ಶಿವಮುದ್ದಿಶ್ಯ ಯೋ ಭಕ್ತ್ಯಾ ಸ ಲೋಕಾನಕ್ಷಯಾಂಲ್ಲಭೇತ್ ।
ಮಕರಾರ್ಕಂ ತತಃ ಪ್ರಾರ್ಚ್ಯ ಸೂರ್ಯಲೋಕಮವಾಪ್ನುಯಾತ್ ॥ ೩೬ ॥

ಮಕರಾದಿತ್ಯಪಾರ್ಶ್ವೇ ತು ಬಲಕೃಷ್ಣೌ ಸುಭದ್ರಿಕಾಂ ।
ದೃಷ್ಟ್ವಾ ಸಂಪೂಜ್ಯ ವಿಧಿನಾ ಕೃಷ್ಣಸಾಯುಜ್ಯಮಾಪ್ನುಯಾತ್ ॥ ೩೭ ॥

ಕುಮಾರಿಕಾಂ ತತಃ ಪ್ರಾಪ್ಯ ಸಮಭ್ಯರ್ಚ್ಯ ವಿಧಾನತಃ ।
ಲಭತೇ ವಾಂಛಿತಾನ್ಕಾಮಾಂಜಯೇಚ್ಛಕ್ರಂ ನ ಸಂಶಯಃ ॥ ೩೮ ॥

ಕ್ಷೇತ್ರಪಾಲಂ ಸಮಭ್ಯರ್ಚ್ಯ ಸರ್ವಾನ್ಕಾಮಾನವಾಪ್ನುಯಾತ್ ।
ಬ್ರಹ್ಮೇಶ್ವರಂ ಚ ಸಂಪೂಜ್ಯ ಸರಸ್ವತ್ಯಾಸ್ತಟೇ ಸ್ಥಿತಂ ॥ ೩೯ ॥

ಸರ್ವಪಾಪವಿನಿರ್ಮುಕ್ತೋ ಬ್ರಹ್ಮಲೋಕೇ ಮಹೀಯತೇ ।
ಪಿಂಗಲಾಖ್ಯಾಂ ನದೀಂ ಪ್ರಾಪ್ಯ ಸ್ನಾತ್ವಾ ತತ್ರ ಸುರಾದಿಕಾ ॥ ೪೦ ॥

---

ಲೋಕಗಳನ್ನು ಹೊಂದುವನು. ಅನಂತರ ಮಕರಾರ್ಕನನ್ನು ಪೂಜಿಸಿದರೆ ಅವನು ಸೂರ್ಯಲೋಕವನ್ನು ಹೊಂದುವನು.

೩೭. ಮಕರಾದಿತ್ಯನ ಪಾರ್ಶ್ವದಲ್ಲಿರುವ ಬಲರಾಮ, ಕೃಷ್ಣ ಮತ್ತು ಸುಭದ್ರೆಯರನ್ನು ದರ್ಶನಮಾಡಿ ವಿಧಿವತ್ತಾಗಿ ಪೂಜಿಸಿದರೆ ಕೃಷ್ಣಸಾಯುಜ್ಯವನ್ನು ಪಡೆಯುವನು.

೩೮. ಅಲ್ಲಿಂದ ಕುಮಾರಿಕಾಕ್ಷೇತ್ರಕ್ಕೆ ಹೋಗಿ ವಿಧಿವತ್ತಾಗಿ ಪೂಜಿಸುವುದರಿಂದ ಯಾತ್ರಿಕನು ಬಯಸಿದ ಇಷ್ಟಾರ್ಥಗಳನ್ನೆಲ್ಲಾ ಪಡೆದು ಇಂದ್ರನನ್ನೂ ಜಯಿಸುವಂತಹ ವೀರ್ಯವಂತನಾಗುವನು. ಸಂದೇಹವಿಲ್ಲ.

೩೯-೪೦. ಆಮೇಲೆ ಕ್ಷೇತ್ರಪಾಲನನ್ನು ಪೂಜಿಸಿದರೆ ಸಕಲೇಷ್ಟಾರ್ಥಗಳೂ ಸಂಭವಿಸುವುವು. ಅನಂತರ ಸರಸ್ವತೀನದಿಯ ತೀರದಲ್ಲಿರುವ ಬ್ರಹ್ಮೇಶ್ವರನನ್ನು ಪೂಜಿಸಿದರೆ ಅವನು ಪಾಪಗಳನ್ನೆಲ್ಲಾ ಕಳೆದುಕೊಂಡು ಬ್ರಹ್ಮಲೋಕದಲ್ಲಿ ಆನಂದಿಸುವನು.

ಸಂತರ್ಪ್ಯ ಶ್ರಾದ್ಧಕೃನ್ಮರ್ತ್ಯೋ ನೇಹ ಭೂಯೋಭಿಜಾಯತೇ ।
ಸಂಗಮೇಶಂ ಸಮಭ್ಯರ್ಚ್ಯ ನ ನರೋ ದುರ್ಗತಿಂ ವ್ರಜೇತ್ ॥ ೪೧ ॥

ಸಂಪ್ರಾರ್ಚ್ಯ ಶಂಕರಾದಿತ್ಯಂ ಘಟೇಶಂ ಚ ಮಹೇಶ್ವರಂ ।
ಮಾನವಃ ಸಕಲಾನ್ಕಾಮಾನ್ ಪ್ರಾಪ್ನುಯಾನ್ನಾತ್ರ ಸಂಶಯಃ ॥ ೪೨ ॥

ಋಷಿತೀರ್ಥಂ ತತಃ ಪ್ರಾಪ್ಯ ಸ್ನಾತ್ವಾ ನಿಯತಮಾನಸಃ ।
ಋಷೀಂಸ್ತತ್ರ ಸಮಭ್ಯರ್ಚ್ಯ ಸರ್ವತೀರ್ಥಫಲಂ ಲಭೇತ್ ॥ ೪೩ ॥

ನಂದಾದಿತ್ಯಂ ತತಃ ಪ್ರಾರ್ಚ್ಯ ಮುಚ್ಯತೇ ಸರ್ವರೋಗತಃ ।
ತ್ರಿತಕೂಪಂ ತತಃ ಪ್ರಾಪ್ಯ ಸ್ನಾತ್ವಾ ಯಾತಿ ದಿವಂ ನರಃ ॥ ೪೪ ॥

---

೪೦-೪೧. ಅಲ್ಲಿಂದ ಪಿಂಗಳಾ ಎಂಬ ನದಿಗೆ ಹೋಗಿ ಅಲ್ಲಿ ಸ್ನಾನಮಾಡಿ ದೇವಾದಿಗಳಿಗೆ ತರ್ಪಣಕೊಟ್ಟು ಶ್ರಾದ್ಧಮಾಡುವ ಮನುಷ್ಯನು ಈ ಲೋಕದಲ್ಲಿ ಪುನಃ ಜನ್ಮವನ್ನು ತಾಳುವುದಿಲ್ಲ. ಅಲ್ಲಿರುವ ಸಂಗಮೇಶನನ್ನು ಪೂಜಿಸುವ ಮನುಷ್ಯನು ಎಂದಿಗೂ ದುಃಖಕ್ಕೀಡಾಗಲಾರನು.

೪೨. ಶಂಕರಾದಿತ್ಯ, ಘಟೇಶ, ಮಹೇಶ್ವರ ಇವರನ್ನು ಪೂಜಿಸುವ ಮನುಷ್ಯನು ಇಷ್ಟಾರ್ಥಗಳನ್ನೆಲ್ಲಾ ಹೊಂದುವನು. ಈ ವಿಷಯದಲ್ಲಿ ಸಂದೇಹವಿಲ್ಲ.

೪೩. ಅನಂತರ ಋಷಿತೀರ್ಥಕ್ಕೆ ಹೋಗಿ ಸ್ನಾನಮಾಡಿ ಮನೋನಿಯಮದಿಂದ ಅಲ್ಲಿರುವ ಋಷಿಗಳನ್ನು ಪೂಜಿಸಿದರೆ ಸಕಲ ತೀರ್ಥಗಳ ಫಲವೂ ಬರುವುದು.

೪೪. ಬಳಿಕ ನಂದಾದಿತ್ಯನನ್ನು ಪೂಜಿಸುವುದರಿಂದ ಸಕಲ ರೋಗಗಳೂ ಹೋಗುವುವು. ಆಮೇಲೆ ತ್ರಿತಕೂಪಕ್ಕೆ ಹೋಗಿ ಸ್ನಾನಮಾಡಿದರೆ ಆ ಮನುಷ್ಯನು ಸ್ವರ್ಗಕ್ಕೆ ಹೋಗುವನು.

ಶಶೋಪಾನೇ ನರಃ ಸ್ನಾತ್ವಾ ದೇವಾನ್ ಪಶ್ಯತಿ ಮೋಹಿನಿ ।
ವಾಂಛಿತಾಂಶ್ಚ ಲಭೇತ್ಕಾಮಾನ್ ಸತ್ಯಂ ಸತ್ಯಂ ಮಯೋದಿತಂ ॥ ೪೫ ॥

ಪರ್ಣಾದಿತ್ಯಂ ನರೋ ದೃಷ್ಟ್ವಾ ನೀರೋಗೋ ಭೋಗವಾನ್ ಭವೇತ್ ।
ತತೋ ನ್ಯಂಕುಮತೀಂ ಪ್ರಾಪ್ಯ ಸ್ನಾತ್ವಾ ತತ್ರ ವಿಧಾನತಃ ॥ ೪೬ ॥

ಸಿದ್ಧೇಶ್ವರಂ ಸಮುಚ್ಯಾತ್ರ ಅಣಿಮಾದಿಕಸಿದ್ಧಿಭಾಕ್ ।
ವಾರಾಹಸ್ವಾಮಿನಂ ದೃಷ್ಟ್ವಾ ಮುಚ್ಯತೇ ಭವಸಾಗರಾತ್ ॥ ೪೭ ॥

ಛಾಯಾಲಿಂಗಂ ಸಮಭ್ಯರ್ಚ್ಯ ಮುಚ್ಯತೇ ಸರ್ವಪಾತಕೈಃ ।
ಗುಲ್ಫಂ ದೃಷ್ಟ್ವಾ ನರೋಽಭ್ಯರ್ಚ್ಯ ಚಾಂದ್ರಾಯಣಫಲಂ ಲಭೇತ್ ॥

ದೇವೀಂ ಕನಕನಂದಾಂ ಚ ಸಮಭ್ಯರ್ಚ್ಯ ನರಃ ಸತಿ ।
ಸರ್ವಾನ್ಕಾಮಾನವಾಪ್ನೋತಿ ದೇಹಾಂತೇ ಸ್ವರ್ಗತಿಂ ಲಭೇತ್ ॥ ೪೯ ॥

---

೪೫. ಮೋಹಿನೀ ! ಮನುಷ್ಯನು ಶಶೋಪಾನದಲ್ಲಿ ಸ್ನಾನಮಾಡಿದರೆ ದೇವತೆಗಳ ದರ್ಶನವಾಗಿ ಬಯಸಿದ ಇಷ್ಟಾರ್ಥಗಳೆಲ್ಲವೂ ಲಭಿಸುವುದು. ನಾನು ಹೇಳಿರುವುದು ಸತ್ಯ ! ಸತ್ಯ !

೪೬-೪೭. ಮನುಷ್ಯನು ಪರ್ಣಾದಿತ್ಯನ ದರ್ಶನಮಾಡಿದರೆ ನೀರೋಗಿಯಾಗಿ ಭೋಗಪಡುವನು. ಅನಂತರ ನ್ಯಂಕುಮತೀತೀರ್ಥಕ್ಕೆ ಹೋಗಿ ಅಲ್ಲಿ ಸ್ನಾನಮಾಡಿ ಅಲ್ಲಿರುವ ಸಿದ್ಧೇಶ್ವರನನ್ನು ಪೂಜಿಸುವವನು ಅಣಿಮಾದಿ ಸಿದ್ಧಿಗಳನ್ನು ಹೊಂದುವನು. ಅಲ್ಲಿಯೇ ವರಾಹಸ್ವಾಮಿಯನ್ನು ದರ್ಶನಮಾಡಿದರೆ ಸಂಸಾರಸಾಗರವನ್ನು ದಾಟುವನು.

೪೮. ಛಾಯಾಲಿಂಗವನ್ನು ಪೂಜಿಸಿದರೆ ಸಕಲ ಪಾಪಗಳೂ ಹೋಗುವುವು. ಮನುಷ್ಯನು ಗುಲ್ಫವನ್ನು ನೋಡಿಪೂಜಿಸಿದರೆ ಚಾಂದ್ರಾಯಣ ವ್ರತದ ಫಲವು ಲಭಿಸುವುದು.

೪೯. ಸಾಧ್ವಿಯಾದ ಮೋಹಿನೀ ! ಕನಕನಂದಾದೇವಿಯನ್ನು ಪೂಜಿಸಿದ ಮನುಷ್ಯನು ಈ ಜನ್ಮದಲ್ಲಿಯೇ ಸಕಲೇಷ್ಟಗಳನ್ನೂ ಪೂರೈಸಿಕೊಂಡು ಕೊನೆಯಲ್ಲಿ ಸ್ವರ್ಗಕ್ಕೆ ಹೋಗುವನು.

ಕುಂತೀಶ್ವರಂ ಸಮಭ್ಯರ್ಚ್ಯ ಮುಚ್ಯತೇ ಸರ್ವಪಾತಕೈಃ |
ಗಂಗೇಶ್ವರಂ ಸಮಭ್ಯರ್ಚ್ಯ ಗಂಗಾಯಾಂ ಮನುಜಃ ಪ್ಲುತಃ || ೫೦ ||

ತ್ರಿವಿಧೇಭ್ಯೋಽಪಿ ಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ |
ಚಮಸೋದ್ಭೇದಕೇ ಸ್ನಾತ್ವಾ ಪಿಂಡದಾನಂ ಕರೋತಿ ಯಃ || ೫೧ ||

ಗಯಾಕೋಟಿಗುಣಂ ಪುಣ್ಯಂ ಸ ಲಭೇನ್ನಾತ್ರ ಸಂಶಯಃ |
ತತಸ್ತು ವಿಧಿಜೇ ಗತ್ವಾ ವಿದುರಾಶ್ರಮಮುತ್ತಮಂ || ೫೨ ||

ಲಿಂಗಂ ತ್ರಿಭುವನೇಶಂ ಚ ಸಂಪೂಜ್ಯಾತ್ರ ಸುಖೀಭವೇತ್ |
ಮಂಕಣೇಶ್ವರಮಭ್ಯರ್ಚ್ಯ ಲಭತೇ ಸದ್ಗತಿಂ ನರಃ || ೫೩ ||

ತ್ರೈಪುರಂ ಚ ತ್ರಿಲಿಂಗಂ ತು ಪ್ರಾರ್ಚ್ಯ ಪಾಪೈಃ ಪ್ರಮುಚ್ಯತೇ |
ಷಂಡತೀರ್ಥಂ ತತಃ ಪ್ರಾಪ್ಯ ಸ್ನಾತ್ವಾ ಸ್ವರ್ಣಪ್ರದೋ ನರಃ || ೫೪ ||

---

೫೦-೫೧. ಕುಂತೀಶ್ವರನನ್ನು ಪೂಜಿಸಿದರೆ ಸಕಲ ಪಾಪಗಳೂ ಹೋಗುವುವು. ಗಂಗೇಶ್ವರನನ್ನು ಪೂಜಿಸಿ ಗಂಗೆಯಲ್ಲಿ ಸ್ನಾನಮಾಡಿದ ಮನುಷ್ಯನು ಮೂರುವಿಧ (ವಾಚಿಕ, ಮಾನಸಿಕ, ಕಾಯಿಕ) ಪಾಪಗಳನ್ನೂ ಕಳೆದುಕೊಳ್ಳುವನು. ಈ ವಿಷಯದಲ್ಲಿ ಸಂಶಯವಿಲ್ಲ.

೫೧-೫೨. ಚಮಸೋದ್ಭೇದಕತೀರ್ಥದಲ್ಲಿ ಸ್ನಾನಮಾಡಿ ಪಿಂಡಪ್ರದಾನ ಮಾಡುವವನು ಗಯಾಶ್ರಾದ್ಧಕ್ಕಿಂತಲೂ ಕೋಟಿಯಷ್ಟು ಹೆಚ್ಚು ಪುಣ್ಯವನ್ನು ಹೊಂದುವನು. ಈ ವಿಷಯದಲ್ಲಿ ಸಂಶಯವಿಲ್ಲ.

೫೨-೫೩. ವಿಧಿಜಾತೇ! ಅಲ್ಲಿಂದ ಉತ್ತಮವಾದ ವಿದುರಾಶ್ರಮಕ್ಕೆ ಹೋಗಿ ತ್ರಿಭುವನೇಶ್ವರಲಿಂಗವನ್ನು ಪೂಜಿಸುವವನು ಇಲ್ಲಿಯೇ ಸುಖಿಯಾಗುವನು. ಮಂಕಣೇಶ್ವರನನ್ನು ಪೂಜಿಸುವ ಮನುಷ್ಯನು ಸದ್ಗತಿಯನ್ನು ಪಡೆಯುವನು.

೫೪-೫೫. ತ್ರಿಪುರಸಂಬಂಧಿಯಾದ ಮೂರು ಲಿಂಗಗಳನ್ನು ಪೂಜಿಸಿದರೆ ಪಾಪಗಳು ಹೋಗುವುವು. ಅನಂತರ ಷಂಡತೀರ್ಥಕ್ಕೆ ಹೋಗಿ ಸ್ನಾನಮಾಡಿ

ಸರ್ವಪಾಪವಿಶುದ್ಧಾತ್ಮಾ ಶೈವಂ ಪದಮವಾಪ್ನುಯಾತ್ |
ಸೂರ್ಯಪ್ರಾಚ್ಯಾಂ ನರಃ ಸ್ನಾತ್ವಾ ವಿಪಾಪ್ಮಾ ಭೋಗವಾನ್ಭವೇತ್ ||೫೫||
ತ್ರಿಲೋಚನೇ ನರಃ ಸ್ನಾತ್ವಾ ರುದ್ರಲೋಕಮವಾಪ್ನುಯಾತ್ |
ದೇವಿಕಾಯಾಮುಮಾನಾಥಂ ಸಮರ್ಚ್ಯ ಮನುಜೋತ್ತಮಃ || ೫೬ ||
ಲಭತೇ ವಾಂಛಿತಾನ್ಕಾಮಾ ದೇಹಾಂತೇ ಸ್ವರ್ಗಮಾಪ್ನುಯಾತ್ |
ಭೂದ್ವಾರಂ ತು ಸಮಭ್ಯರ್ಚ್ಯ ಲಭತೇ ವಾಂಛಿತಂ ಫಲಂ || ೫೭ ||
ಶೂಲಸ್ಥಾನೇ ತು ವಾಲ್ಮೀಕಿಂ ನಮಸ್ಕೃತ್ಯ ಕವಿರ್ಭವೇತ್ |
ಚ್ಯವನಾರ್ಕಂ ತತಃ ಪ್ರಾರ್ಚ್ಯ ಸರ್ವಕಾಮಸಮೃದ್ಧಿಮಾ || ೫೮ ||
ಸವನೇಶಂ ಚ ಮಾರ್ತಂಡಂ ಶಿವಸ್ಯಾನುಚರೋ ಭವೇತ್ |
ಪ್ರಜಾಪಾಲೇಶಮಭ್ಯರ್ಚ್ಯ ಧನಧಾನ್ಯಾನ್ವಿತೋ ಭವೇತ್ || ೫೯ ||

---

ಸುವರ್ಣದಾನಮಾಡುವ ಮನುಷ್ಯನು ಸಕಲ ಪಾಪಗಳನ್ನೂ ಕಳೆದುಕೊಂಡು ಪರಿಶುದ್ಧಾತ್ಮನಾಗಿ ಶಿವಲೋಕವನ್ನು ಹೊಂದುವನು. ಬಳಿಕ ಸೂರ್ಯಪ್ರಾಚಿಯಲ್ಲಿ ಸ್ನಾನಮಾಡುವ ಮನುಷ್ಯನು ಪಾಪಗಳನ್ನು ಹೋಗಲಾಡಿಸಿಕೊಂಡು ಭೋಗಿಯಾಗುವನು.

೫೬-೫೭. ತ್ರಿಲೋಚನತೀರ್ಥದಲ್ಲಿ ಸ್ನಾನಮಾಡಿದರೆ ರುದ್ರಲೋಕವಾಸವು ಲಭಿಸುವುದು. ದೇವಿಕಾಕ್ಷೇತ್ರದಲ್ಲಿ ಉಮಾಪತಿಯನ್ನು ಪೂಜಿಸುವ ಮನುಷ್ಯಶ್ರೇಷ್ಠನು ಈ ಜನ್ಮದಲ್ಲಿ ಬಯಸಿದ ಕಾಮಗಳನ್ನೆಲ್ಲಾ ಅನುಭವಿಸಿ ಅನಂತರ ಸ್ವರ್ಗವನ್ನು ಹೊಂದುವನು. ಭೂದ್ವಾರವನ್ನು ಪೂಜಿಸಿದರೆ ಇಷ್ಟ ಫಲವು ಲಭಿಸುವುದು.

೫೮. ಶೂಲಸ್ಥಾನಕ್ಕೆ ಹೋಗಿ ಅಲ್ಲಿರುವ ವಾಲ್ಮೀಕಿಮುನಿಯನ್ನು ನಮಸ್ಕರಿಸಿದರೆ ಕವಿಯಾಗುವನು. ಆಮೇಲೆ ಚ್ಯವನಾರ್ಕನನ್ನು ಪೂಜಿಸಿದರೆ ಇಷ್ಟಾರ್ಥಗಳೆಲ್ಲಾ ಸಮೃದ್ಧಿಯಾಗುವುವು.

೫೯. ಸವನೇಶ ಮತ್ತು ಮಾರ್ತಂಡರನ್ನು ಪೂಜಿಸಿದರೆ ಶಿವಭೃತ್ಯನಾಗುವನು. ಪ್ರಜಾಪತೀಶ್ವರನನ್ನು ಪೂಜಿಸಿದರೆ ಧನಧಾನ್ಯಸಮೃದ್ಧಿಯುಂಟಾಗುವುದು.

ಬಾಲಾರ್ಕಪೂಜಕೋ ಮರ್ತ್ಯೋ ವಿದ್ಯಾವಾನ್ ಧನವಾನ್ ಭವೇತ್ ।
ಕುಬೇರಸ್ಥಾನಕೇ ಸ್ನಾತ್ವಾ ನಿಧಿಂ ಪ್ರಾಪ್ನೋತಿ ನಿಶ್ಚಿತಂ ॥ ೬೦ ॥

ಋಷಿತೋಯನದೀಂ ಪ್ರಾಪ್ಯ ಸ್ನಾತ್ವಾ ತತ್ರ ನರಃ ಶುಚಿಃ ।
ದತ್ವಾ ಸುವರ್ಣಂ ವಿಪ್ರಾಯ ಮುಚ್ಯತೇ ಸರ್ವಪಾತಕೈಃ ॥ ೬೧ ॥

ಸಂಗೋಲೇಶ್ವರಮಭ್ಯರ್ಚ್ಯ ರುದ್ರಲೋಕೇ ಮಹೀಯತೇ ।
ನಾರದಾದಿತ್ಯಮಭ್ಯರ್ಚ್ಯ ತ್ರಿಕಾಲಜ್ಞಾನವಾನ್ ಭವೇತ್ ॥ ೬೨ ॥

ತತೋ ನಾರಾಯಣಂ ಪ್ರಾರ್ಚ್ಯ ಮುಕ್ತಿಭಾಗೀ ನರೋ ಭವೇತ್ ।
ತಪ್ತಕುಂಡೋದಕೇ ಸ್ನಾತ್ವಾ ಮೂಲಚಂಡೀಶಮರ್ಚಯೇತ್ ॥ ೬೩ ॥

ಸರ್ವಪಾಪವಿನಿರ್ಮುಕ್ತೋ ವಾಂಛಿತಾರ್ಥಂ ಲಭೇನ್ನರಃ ।
ವಿನಾಯಕಂ ಚತುರ್ವಕ್ತ್ರಮಭ್ಯರ್ಚ್ಯಾಪ್ನೋತಿ ಕಾಮಿತಂ ॥ ೬೪ ॥

---

೬೦. ಬಾಲಾರ್ಕನನ್ನು ಪೂಜಿಸುವ ಮನುಷ್ಯನು ವಿದ್ಯಾವಂತನು, ಧನವಂತನೂ ಆಗುವನು. ಬಳಿಕ ಕುಬೇರಸ್ಥಾನದಲ್ಲಿ ಸ್ನಾನಮಾಡುವವನು ಖಂಡಿತವಾಗಿಯೂ ನಿಧಿಯನ್ನು ಹೊಂದುವನು.

೬೧. ಅಲ್ಲಿಂದ ಋಷಿತೋಯ ನದಿಗೆ ಹೋಗಿ ಅಲ್ಲಿ ಸ್ನಾನಮಾಡಿ ಪರಿಶುದ್ಧನಾದ ಮನುಷ್ಯನು ಬ್ರಾಹ್ಮಣನಿಗೆ ಸುವರ್ಣದಾನಮಾಡಿದರೆ ಸಕಲ ಪಾಪಗಳೂ ಹೋಗುವುವು.

೬೨. ಸಂಗೋಲೇಶ್ವರನನ್ನು ಪೂಜಿಸುವುದರಿಂದ ರುದ್ರಲೋಕವು ಲಭಿಸುವುದು. ನಾರದಾದಿತ್ಯನನ್ನು ಪೂಜಿಸಿದರೆ ತ್ರಿಕಾಲಜ್ಞಾನಿಯಾಗುವನು.

೬೩-೬೪. ಬಳಿಕ ನಾರಾಯಣನನ್ನು ಪೂಜಿಸುವುದರಿಂದ ಮನುಷ್ಯನು ಮುಕ್ತಿಯನ್ನು ಹೊಂದುವನು. ತಪ್ತಕುಂಡದ ನೀರಿನಲ್ಲಿ ಸ್ನಾನಮಾಡಿ ಮೂಲ ಚಂಡೀಶನನ್ನು ಪೂಜಿಸಿದರೆ ಅವನು ಸಕಲ ಪಾಪಗಳನ್ನೂ ನೀಗಿಕೊಂಡು ಇಷ್ಟಾರ್ಥವನ್ನು ಹೊಂದುವನು. ನಾಲ್ಕು ಮುಖಗಳುಳ್ಳ ವಿನಾಯಕನನ್ನು ಪೂಜಿಸಿದರೆ ಇಷ್ಟವು ಲಭಿಸುವುದು.

ಕಲಂಬೇಶ್ವರಮಭ್ಯರ್ಚ್ಯ ಧನಧಾನ್ಯಸಮೃದ್ಧಿಮಾನ್ ।
ಗೋಪಾಲಸ್ವಾಮಿಪೂಜಾತೋ ಗೋಮಾನ್ಸ್ಯಾ ಧನವಾನ್ಕವಿಃ ॥ ೬೫ ॥

ಬಕುಲಸ್ವಾಮಿನೋಭ್ಯರ್ಚಾ ನೃಣಾಂ ಸ್ವರ್ಗತಿದಾಯಿನೀ ।
ಸಂಪೂಜ್ಯ ಮಾರುತಾಂ ದೇವೀಂ ಸರ್ವಕಾಮಫಲಂ ಲಭೇತ್ ॥ ೬೬ ॥

ಕ್ಷೇಮಾದಿತ್ಯಾರ್ಚನಾನ್ಮರ್ತ್ಯಃ ಕ್ಷೇಮೀ ಸಿದ್ಧಾರ್ಥಸತ್ಯಭಾಕ್ ।
ಉನ್ನತಾಖ್ಯಂ ವಿಘ್ನರಾಜಂ ಪ್ರಾರ್ಚ್ಯ ವಿಘ್ನೈರ್ನ ಹನ್ಯತೇ ॥ ೬೭ ॥

ಜಲಸ್ವಾಮೀ ಕಾಲಮೇಘಃ ಪೂಜಿತೌ ಸರ್ವಸಿದ್ಧಿದೌ ।
ರುಕ್ಮಿಣೀ ಪೂಜಿತಾ ದೇವೀ ವಾಂಛಿತಾರ್ಥಪ್ರದಾ ನೃಣಾಂ ॥ ೬೮ ॥

ದುರ್ವಾಸೇಶಂ ಚ ಪಿಂಗೇಶಂ ಪ್ರಾರ್ಚ್ಯ ಪಾಪೈರ್ವಿಮುಚ್ಯತೇ ।
ಭದ್ರಾಯೋಃ ಸಂಗಮೇ ಸ್ನಾತ್ವಾ ನರೋ ಭದ್ರಾಣಿ ಪಶ್ಯತಿ ॥ ೬೯ ॥

---

೬೫. ಕಲಂಬೇಶ್ವರನನ್ನು ಪೂಜಿಸಿದರೆ ಧನಧಾನ್ಯಸಮೃದ್ಧಿ ಹೊಂದುವನು. ಗೋಪಾಲಸ್ವಾಮಿ ಪೂಜೆಯಿಂದ ಗೋಮಂತನು, ಧನವಂತನು, ಕವಿಯೂ ಆಗುವನು.

೬೬. ಬಕುಲಸ್ವಾಮಿಯ ಪೂಜೆಯನ್ನು ಮಾಡುವ ಮನುಷ್ಯರಿಗೆ ಅದು ಸ್ವರ್ಗಗತಿಯನ್ನು ಕೊಡುವುದು. ಮಾರುತಾದೇವಿಯನ್ನು ಪೂಜೆಮಾಡುವುದರಿಂದ ಬಯಸಿದ ಫಲವೆಲ್ಲವೂ ದೊರೆಯುವುದು.

೬೭. ಕ್ಷೇಮಾದಿತ್ಯಸ್ವಾಮಿಯ ಪೂಜೆಯಿಂದ ಮನುಷ್ಯನು ಕ್ಷೇಮವಂತನಾಗಿ ಇಷ್ಟಾರ್ಥಸಿದ್ಧಿಯನ್ನು ಹೊಂದುವನು. ಉನ್ನತ ಎಂಬ ವಿಘ್ನರಾಜನನ್ನು ಪೂಜಿಸಿದರೆ ವಿಘ್ನಗಳಿಂದ ತಡೆಯಾಗದೆ ಕಾರ್ಯಸಿದ್ಧಿಯಾಗುವುದು.

೬೮. ಜಲಸ್ವಾಮಿ, ಕಾಲಮೇಘ ಇವರಿಬ್ಬರೂ ಸಕಲಸಿದ್ಧಿದಾಯಕರು. ರುಗ್ಮಿಣಿದೇವಿಯನ್ನು ಪೂಜಿಸುವುದರಿಂದ ಇಷ್ಟಾರ್ಥಗಳೆಲ್ಲವೂ ಲಭಿಸುತ್ತದೆ.

೬೯. ದುರ್ವಾಸೇಶ, ಪಿಂಗೇಶ ಇವರಿಬ್ಬರನ್ನೂ ಪೂಜಿಸಿದರೆ ಪಾಪಪರಿಹಾರವಾಗುವುದು. ಭದ್ರಾಸಂಗಮದಲ್ಲಿ ಸ್ನಾನಮಾಡುವುದರಿಂದ ಮನುಷ್ಯನು ಶ್ರೇಯಸ್ಸುಗಳನ್ನು ಕಾಣುವನು.

ಶಂಖಾವರ್ತೇ ನರಃ ಸ್ನಾತ್ವಾ ಸರ್ವಸಿದ್ಧೀಶ್ವರೋ ಭವೇತ್ ।
ಮೋಕ್ಷತೀರ್ಥೇ ನರಃ ಸ್ನಾತ್ವಾ ಭವೇನ್ಮುಕ್ತೋ ಭವಾರ್ಣವಾತ್ ॥ ೭೦ ॥

ಗೋಷ್ಪದಸ್ನಾನಮಾತ್ರೇಣ ಸರ್ವಸೌಖ್ಯಮವಾಪ್ನುಯಾತ್ ।
ನಾರಾಯಣಗೃಹೇ ಗತ್ವಾ ನರೋ ಭೂಯೋ ನ ಶೋಚತಿ ॥ ೭೧ ॥

ಜಾಲೇಶ್ವರಾರ್ಚನಾತ್ಪುಂಸಾಂ ಸಿದ್ಧಯಃ ಸ್ಯುರಭೀಪ್ಸಿತಾಃ ।
ಸ್ನಾತೋ ಹುಂಕಾರಕೂಪೇ ತು ಗರ್ಭವಾಸಂ ನ ಚಾಪ್ನುಯಾತ್ ॥ ೭೨ ॥

ತಥಾ ಚಂಡೀಶಮಭ್ಯರ್ಚ್ಯ ಸರ್ವತೀರ್ಥಫಲಂ ಲಭೇತ್ ।
ವಿಘ್ನೇಶಮಾಶಾಪುರಗಂ ಪ್ರಾರ್ಚ್ಯ ವಿಘ್ನಂ ನ ಚಾಪ್ನುಯಾತ್ ॥ ೭೩ ॥

ಕಲಾಕುಂಡಾಪ್ಲುತೋ ಮರ್ತ್ಯೋ ಮುಕ್ತಿಭಾಗೀ ನ ಸಂಶಯಃ ।
ಕಪಿಲೇಶಂ ಸಮಭ್ಯರ್ಚ್ಯ ಕಪಿಲಾಯೂಥಮಾಪ್ನುಯಾತ್ ॥ ೭೪ ॥

---

೭೦- ಮನುಷ್ಯನು ಶಂಖಾವರ್ತದಲ್ಲಿ ಸ್ನಾನಮಾಡಿದರೆ ಸಕಲ ಸಿದ್ಧೀಶ್ವರನಾಗುವನು. ಮೋಕ್ಷತೀರ್ಥದಲ್ಲಿ ಸ್ನಾನಮಾಡುವುದರಿಂದ ಸಂಸಾರಸಾಗರದಿಂದ ಮುಕ್ತನಾಗುವನು.

೭೧. ಗೋಷ್ಪದದಲ್ಲಿ ಸ್ನಾನಮಾಡುವುದರಿಂದ ಸಕಲಸೌಖ್ಯವನ್ನೂ ಹೊಂದುವನು. ನಾರಾಯಣಾಲಯಕ್ಕೆ ಹೋಗಿ ಸೇವಿಸುವುದರಿಂದ ಮನುಷ್ಯನು ಪುನಃ ದುಃಖಕ್ಕೀಡಾಗುವುದಿಲ್ಲ.

೭೨. ಜಾಲೇಶ್ವರಪೂಜೆಯಿಂದ ಮನುಷ್ಯರಿಗೆ ಅಪೇಕ್ಷಿಸಿದ ಸಿದ್ಧಿಗಳೆಲ್ಲವೂ ದೊರೆಯುವುವು. ಹುಂಕಾರಕೂಪದಲ್ಲಿ ಸ್ನಾನಮಾಡಿದವನು ಪುನಃ ಗರ್ಭವಾಸವನ್ನು ಹೊಂದುವುದಿಲ್ಲ.

೭೩. ಚಂಡೀಶನನ್ನು ಪೂಜಿಸಿದರೆ ಸಕಲತೀರ್ಥಗಳ ಫಲವೂ ಲಭಿಸುವುದು. ಆಶಾಪುರದಲ್ಲಿರುವ ವಿಘ್ನೇಶ್ವರನನ್ನು ಪೂಜಿಸುವುದರಿಂದ ವಿಘ್ನಪರಿಹಾರವಾಗುವುದು.

೭೪. ಕಲಾಕುಂಡದಲ್ಲಿ ಸ್ನಾನಮಾಡಿದ ಮನುಷ್ಯನು ಮೋಕ್ಷವನ್ನು ಹೊಂದುವನು, ಸಂದೇಹವಿಲ್ಲ. ಕಪಿಲೇಶ್ವರಸ್ವಾಮಿಯನ್ನು ಪೂಜಿಸುವುದರಿಂದ ಕಪಿಲಗೋದಾನದ ಫಲವು ಬರುವುದು.

ಜರದ್ಗವೇಶ್ವರಂ ಪ್ರಾರ್ಚ್ಯ ಜರಸಾ ನಾಭಿಭೂಯತೇ ।
ಸಕಲೇಶ್ವರಾರ್ಚಕೋ ಭೋಗೀ ಕರ್ಕೋಟೇಶಾರ್ಚಕೋ ಧನೀ ॥ ೭೫ ॥

ಹಾಟಕೇಶ್ವರಪೂಜಾತಃ ಪೂರ್ಯಂತೇ ಸರ್ವಕಾಮನಾಃ ।
ನಾರದೇಶಾರ್ಚಕೋ ಭಕ್ತಿಂ ಲಭೇದ್ವಿಷ್ಣೌ ಚ ಶಂಕರೇ ॥ ೭೬ ॥

ಸ್ವರ್ಗಾರ್ಹೋ ಜಾಯತೇಭ್ಯರ್ಚ್ಯ ದೇವೀಂ ಮಂತ್ರವಿಭೂಷಣಾಂ ।
ದುರ್ಗಕೂಟಂ ಗಣಪತಿಂ ಪೂಜಯಿತ್ವಾ ಸುಖೀ ಭವೇತ್ ॥ ೭೭ ॥

ಧನಧಾನ್ಯಯುತೋ ಭೂಯಾತ್ಪೂಜಯನ್ಕೌರವೇಶ್ವರೀಂ ।
ಸುಪರ್ಣೇಲಾಂ ಭೈರವೀಂ ಚ ಪೂಜಯಿತ್ವಾ ಸುಖೀಭವೇತ್ ॥ ೭೮ ॥

ಭಿಕ್ಷುತೀರ್ಥೇ ನರಃ ಸ್ನಾತ್ವಾ ಮುಚ್ಯತೇ ಸರ್ವಕಿಲ್ಬಿಷೈಃ ।
ಕರ್ದಮಾಲೇ ನರಃ ಸ್ನಾತ್ವಾ ಪಾತಕೈರ್ವಿಪ್ರಯುಜ್ಯತೇ ॥ ೭೯ ॥

---

೭೫. ಜರದ್ಗವೇಶ್ವರನನ್ನು ಪೂಜಿಸುವುದರಿಂದ ಮುಪ್ಪುಬಾರದಂತಾಗುವುದು- ಸಕಲೇಶ್ವರಾರ್ಚಕನು ಭೋಗಿಯೂ, ಕರ್ಕೋಟೇಶಪೂಜಕನು ಧನವಂತನೂ ಆಗುವರು.

೭೬. ಹಾಟಕೇಶ್ವರಪೂಜೆಯಿಂದ ಕಾಮನೆಗಳೆಲ್ಲವೂ ಪೂರೈಸುವುವು. ನಾರದೇಶಾರ್ಚಕನು ವಿಷ್ಣು ಮತ್ತು ಶಂಕರರಲ್ಲಿ ಭಕ್ತಿಯನ್ನು ಹೊಂದುವನು.

೭೭. ಮಂತ್ರವಿಭೂಷಣಾದೇವಿಯನ್ನು ಪೂಜಿಸಿದರೆ ಸ್ವರ್ಗಕ್ಕೆ ಹೋಗುವುದಕ್ಕರ್ಹನಾಗುವನು. ದುರ್ಗಕೂಟ ಗಣಪತಿಯನ್ನು ಪೂಜಿಸಿದರೆ ಸುಖಿಯಾಗುವನು.

೭೮. ಕೌರವೇಶ್ವರಿಯನ್ನು ಪೂಜಿಸುವವನು ಧನಧಾನ್ಯಪರಿಪೂರ್ಣನಾಗುವನು. ಸುಪರ್ಣೇಲಾ ಮತ್ತು ಭೈರವೀದೇವಿಯರನ್ನು ಪೂಜಿಸಿದರೆ ಸುಖಿಯಾಗುವನು.

೭೯. ಮನುಷ್ಯನು ಭಿಕ್ಷುತೀರ್ಥದಲ್ಲಿ ಸ್ನಾನಮಾಡುವುದರಿಂದ ಸಕಲಪಾಪಗಳಿಂದಲೂ ಮುಕ್ತನಾಗುವನು. ಕರ್ದಮಾಲತೀರ್ಥದಲ್ಲಿ ಸ್ನಾನಮಾಡುವ ಮನುಷ್ಯನು ಪಾತಕಗಳನ್ನು ಕಳೆದುಕೊಳ್ಳುವನು.

**ಗುಪ್ತಸೋಮೇಶ್ವರಂ ದೃಷ್ಟ್ವಾ ನ ಭೂಯೋಽರ್ಹತಿ ಶೋಚಿತುಂ |**
**ಬಹುಸ್ವರ್ಣೇಶ್ವರಂ ದೃಷ್ಟ್ವಾ ಸ್ವರ್ಗತಿಂ ಸಮವಾಪ್ನುಯಾತ್ || ೮೦ ||**

**ಶೃಂಗೇಶ್ವರಾರ್ಚಕೋ ಮರ್ತ್ಯೋ ನ ದುಃಖೈರಭಿಭೂಯತೇ |**
**ತೀರ್ಥೇ ನಾರಾಯಣೇ ಸ್ನಾತ್ವಾ ಮುಕ್ತಿಮಾಪ್ನೋತಿ ಮಾನವಃ || ೮೧ ||**

**ಮಾರ್ಕಂಡೇಶ್ವರಮಭ್ಯರ್ಚ್ಯ ದೀರ್ಘಾಯುರ್ಜಾಯತೇ ನರಃ |**
**ತಥಾ ಕೋಟೀಹ್ರದೇ ಸ್ನಾತ್ವಾಭ್ಯರ್ಚ್ಯ ಕೋಟೀಶ್ವರಂ ಸುಖೀ || ೮೨ ||**

**ಸಿದ್ಧಸ್ಥಾನೇ ನರಃ ಸ್ನಾತ್ವಾ ತತ್ರ ಲಿಂಗಾನಿ ಪೂಜಯೇತ್ |**
**ಅಸಂಖ್ಯಾತಾನಿ ಯೋ ಮರ್ತ್ಯಃ ಸ ಸಿದ್ಧೋ ಜಾಯತೇ ಭುವಿ || ೮೩ ||**

**ದಾಮೋದರಗೃಹಂ ದೃಷ್ಟ್ವಾ ಸುಖಮಾಪ್ನೋತ್ಯನುತ್ತಮಂ |**
**ವಸ್ತ್ರಾಪಥಂ ಪ್ರಭಾಸಸ್ಯ ನಾಭಿಸ್ಥಾನೇ ಸ್ಥಿತಂ ಶುಭೇ || ೮೪ ||**

---

೮೦. ಗುಪ್ತ ಸೋಮೇಶ್ವರನ ದರ್ಶನ ಮಾಡುವುದರಿಂದ ಪುನಃ ದುಃಖಕ್ಕೆ ಸಿಲುಕುವುದಿಲ್ಲ. ಬಹುಸ್ವರ್ಣೇಶ್ವರ ದರ್ಶನದಿಂದ ಸ್ವರ್ಗಲೋಕವನ್ನು ಹೊಂದುವನು.

೮೧. ಶೃಂಗೇಶ್ವರಸ್ವಾಮಿಯನ್ನು ಪೂಜಿಸುವ ಮನುಷ್ಯನು ದುಃಖಗಳಿಗೀಡಾಗಲಾರನು. ನಾರಾಯಣತೀರ್ಥದಲ್ಲಿ ಸ್ನಾನಮಾಡುವ ಮನುಷ್ಯನು ಮೋಕ್ಷವನ್ನು ಪಡೆಯುವನು.

೮೨. ಮಾರ್ಕಂಡೇಶ್ವರನನ್ನು ಪೂಜಿಸುವುದರಿಂದ ಮನುಷ್ಯನು ದೀರ್ಘಾಯುಷ್ಮಂತನಾಗುವನು. ಹಾಗೆಯೇ ಕೋಟಿಹ್ರದದಲ್ಲಿ ಸ್ನಾನಮಾಡಿ ಕೋಟೀಶ್ವರನನ್ನು ಪೂಜಿಸಿದರೆ ಸುಖಭಾಗಿಯಾಗುವನು.

೮೩. ಸಿದ್ಧಸ್ಥಾನದಲ್ಲಿ ಸ್ನಾನಮಾಡಿ ಅಲ್ಲಿರುವ ಅಸಂಖ್ಯಾಕ ಲಿಂಗಗಳನ್ನು ಪೂಜಿಸುವ ಮನುಷ್ಯನು ಭೂಲೋಕದಲ್ಲಿ ಸಿದ್ಧಪುರುಷನಾಗುವನು.

೮೪-೮೫. ದಾಮೋದರಗೃಹದರ್ಶನದಿಂದ ಸರ್ವೋತ್ಕೃಷ್ಟವಾದ ಸುಖವನ್ನು ಪಡೆಯುವನು. ಮಂಗಳಾಂಗಿಯೇ! ನಾಭಿಸ್ಥಾನದಲ್ಲಿರುವ ಪ್ರಭಾಸ

ಕೃತ್ವಾಭ್ಯರ್ಚ್ಯ ಭವಂ ಸಾಕ್ಷಾದ್ಭವೇದ್ಭವಸಮಃ ಸ್ವಯಂ |
ದಾಮೋದರೇ ಸ್ವರ್ಣರೇಖಾ ಬ್ರಹ್ಮಕುಂಡಂ ಚ ರೈವತೇ || ೮೫ ||

ಕುಂತೀಶ ಉಜಯಂತೇ ತು ಭೀಮೇಶಶ್ಚ ಮಹಾಪ್ರಭಃ |
ಮೃಗೀಕುಂಡಂ ಚ ಸರ್ವಸ್ವಂ ಕ್ಷೇತ್ರೇ ವಸ್ತ್ರಾಪಥೇ ಸ್ಮೃತಂ || ೮೬ ||

ಏತೇಷು ಕ್ರಮಶಃ ಸ್ನಾತ್ವಾ ದೇವಾನಭ್ಯರ್ಚ್ಯ ಯತ್ನತಃ |
ಪಿತ್ರ್ನ್ ಸಂತರ್ಪ್ಯ ತೋಯೇನ ಸರ್ವತೀರ್ಥಫಲಂ ಲಭೇತ್ || ೮೭ ||

ದುನ್ನಾಬಿಲೇ ನರಃ ಸ್ನಾತ್ವಾ ಭುಕ್ತಭೋಗೋ ದಿವಂ ವ್ರಜೇತ್ |
ಭೋಗೇಶ್ವರಂ ತತೋಭ್ಯರ್ಚ್ಯ ಗಂಗಾಸ್ನಾನಫಲಂ ಲಭೇತ್ || ೮೮ ||

ಗಿರೌ ರೈವತಕೇ ದೇವಿ ಸಂತಿ ತೀರ್ಥಾನ್ಯನೇಕಶಃ |
ತೇಷು ಸ್ನಾತ್ವಾ ನರೋ ಭಕ್ತ್ಯಾ ಬ್ರಹ್ಮವಿಷ್ಣುಮಹೇಶ್ವರಾನ್ || ೮೯ ||

---

ಕ್ಷೇತ್ರದ ವಸ್ತ್ರಾಪಥಕ್ಕೆ ಹೋಗಿ ಅಲ್ಲಿರುವ ಈಶ್ವರನನ್ನು ಪೂಜಿಸಿದರೆ ಅವನು ಸಾಕ್ಷಾದೀಶ್ವರನಿಗೆ ಸಮನಾಗುವನು.

೮೫-೮೬. ದಾಮೋದರ ಕ್ಷೇತ್ರದಲ್ಲಿ ಸ್ವರ್ಣರೇಖೆಯು, ರೈವತದಲ್ಲಿ ಬ್ರಹ್ಮಕುಂಡವು, ಉಜ್ಜಯಂತದಲ್ಲಿ ಕುಂತೀಶ ಮತ್ತು ಮಹಾತೇಜಸ್ವಿಯಾದ ಭೀಮೇಶ ಇವರು ಮತ್ತು ವಸ್ತ್ರಾಪಥಕ್ಷೇತ್ರದಲ್ಲಿ ಮೃಗೀಕುಂಡವೂ ಸಹ ಕ್ಷೇತ್ರದ ಜೀವಾಳವೆಂದು ಉಕ್ತವಾಗಿದೆ.

೮೭. ಕ್ರಮವಾಗಿ ಈ ತೀರ್ಥಗಳಲ್ಲಿ ಸ್ನಾನಮಾಡಿ ಪ್ರಯತ್ನಪೂರ್ವಕವಾಗಿ ದೇವತೆಗಳನ್ನು ಪೂಜಿಸಿ ಪಿತೃಗಳ ಪ್ರೀತ್ಯರ್ಥವಾಗಿ ಜಲತರ್ಪಣಮಾಡಿದರೆ ಸಕಲ ತೀರ್ಥಗಳ ಫಲವೂ ಲಭಿಸುವುದು.

೮೮. ದುನ್ನಾಬಿಲದಲ್ಲಿ ಸ್ನಾನಮಾಡಿದ ಮನುಷ್ಯನು ಭೋಗಗಳನ್ನೆಲ್ಲಾ ಅನುಭವಿಸಿ ಸ್ವರ್ಗಕ್ಕೆ ಹೋಗಿ ಸುಖಪಡುವನು. ಅನಂತರ ಭೋಗೇಶ್ವರನನ್ನು ಪೂಜಿಸುವುದರಿಂದ ಗಂಗಾಸ್ನಾನದ ಫಲವು ಬರುವುದು.

೮೯-೯೦. ದೇವೀ! ರೈವತಗಿರಿಯಲ್ಲಿ ಅನೇಕ ತೀರ್ಥಗಳಿವೆ. ಅವುಗಳಲ್ಲಿ ಸ್ನಾನಮಾಡಿ ಭಕ್ತಿಯಿಂದ ಬ್ರಹ್ಮ, ವಿಷ್ಣು, ಮಹೇಶ್ವರ ಮತ್ತು

ಇಂದ್ರಾದಿಲೋಕಪಾನ್ ಪ್ರಾರ್ಚ್ಯ ಭುಕ್ತಿಂ ಮುಕ್ತಿಂ ಚ ವಿಂದತಿ |
ಏತಾನ್ಯುದ್ದೇಶತಸ್ತೀರ್ಥಾನ್ಯುಕ್ತಾನಿ ತವ ಸುಂದರಿ || ೯೦ ||

ಅವಾಂತರಾಣ್ಯಸಂಖ್ಯಾನಿ ತಾನಿ ವಕ್ತುಂ ನ ಶಕ್ಯತೇ |
ಏಕೈಕಸ್ಯಾಪಿ ತೀರ್ಥಸ್ಯ ಸಂತಿ ವಿಸ್ತಾರತಃ ಕಥಾಃ || ೯೧ ||

ಅತಃ ಸಂಕ್ಷಿಪ್ಯ ಗದಿತಂ ಮಯಾ ಪುಣ್ಯಂ ಪ್ರಭಾಸಜಂ |
ನ ಪ್ರಭಾಸಸಮಂ ತೀರ್ಥಂ ತ್ರಿಷು ಲೋಕೇಷು ಮೋಹಿನಿ || ೯೨ ||

ಯತ್ರ ಸ್ನಾತೋಽಪಿ ಮನುಜಃ ಸ್ವರ್ಗಿಣಾ ಸ್ಪರ್ಧತೇ ಶುಭೇ |
ಮಾಹಾತ್ಮ್ಯಂ ಚ ಪ್ರಭಾಸಸ್ಯ ಲಿಖಿತಂ ವರ್ತತೇ ಗೃಹೇ || ೯೩ ||

---

ಇಂದ್ರಾದಿ ಲೋಕಪಾಲಕರು ಇವರನ್ನು ಪೂಜಿಸಿದ ಮನುಷ್ಯನು ಭೋಗಮೋಕ್ಷ ಗಳನ್ನು ಹೊಂದುವನು.

೯೦-೯೧. ಸುಂದರಾಂಗಿಯೇ! ಈ ತೀರ್ಥಗಳನ್ನು ಉದ್ದೇಶಪೂರ್ವಕ ವಾಗಿ ನಿನಗೆ ಹೇಳಿರುವೆನು. ಅವಾಂತರ (ಅದರೊಳಗಡಗಿರುವ) ತೀರ್ಥಗಳು ಅಸಂಖ್ಯಾತವಾಗಿವೆ. ಅವುಗಳನ್ನೆಲ್ಲಾ ಪ್ರತ್ಯೇಕವಾಗಿ ಹೇಳಲು ಸಾಧ್ಯವಿಲ್ಲ. ಒಂದೊಂದು ತೀರ್ಥದ ವಿಷಯದಲ್ಲಿಯೂ ವಿಸ್ತಾರವಾದ ಕಥೆಗಳಿವೆ.

೯೨. ಮೋಹಿನೀ! ಆದಕಾರಣ ಪ್ರಭಾಸತೀರ್ಥದಲ್ಲಿ ಬರುವ ಪುಣ್ಯ ವನ್ನು ಸಂಕ್ಷೇಪವಾಗಿ ನಿನಗೆ ತಿಳಿಸಿರುವೆನು. ಮೂರು ಲೋಕಗಳಲ್ಲಿಯೂ ಪ್ರಭಾಸಕ್ಕೆ ಸಮಾನವಾದ ತೀರ್ಥವು ದೊರೆಯಲಾರದು.

೯೩-೯೪. ಆ ಪ್ರಭಾಸತೀರ್ಥದಲ್ಲಿ ಸ್ನಾನಮಾಡಿದ ಮನುಷ್ಯನು ಸ್ವರ್ಗ ಲೋಕದಲ್ಲಿರುವ ಸುಖಪುರುಷನೊಂದಿಗೆ ಸ್ಪರ್ಧಿಸುವನು ಪ್ರಭಾಸಮಾಹಾತ್ಮ್ಯ ಯನ್ನು ಬರೆದಿರುವ ಪುಸ್ತಕವಿರುವೆಡೆಯಲ್ಲಿ ಭೂತ, ಚೋರ, ಸರ್ಪ, ಶತ್ರು ಇವರ ಭಯವಿರುವುದಿಲ್ಲ.

ಯತ್ರ ತತ್ರ ನ ಭೀತಿಃ ಸ್ಯಾದ್ಭೂತಚೋರಾಹಿಶತ್ರುಜಾ ।
ಯಃ ಶೃಣೋತಿ ನರೋ ಭಕ್ತ್ಯಾ ಶ್ರಾವಯೇದ್ವಾ ಸಮಾಹಿತಃ ॥ ೯೪ ॥

ಪ್ರಭಾಸತೀರ್ಥಮಾಹಾತ್ಮ್ಯಂ ಸೋಽಪಿ ಸದ್ಗತಿಮಾಪ್ನುಯಾತ್ ॥ ೯೫ ॥

ಇತಿ ಶ್ರೀನಾರದೀಯಪುರಾಣೋತ್ತರಭಾಗೇ ವಸುಮೋಹಿನೀಸಂವಾದೇ
ಪ್ರಭಾಸತೀರ್ಥಮಾಹಾತ್ಮ್ಯಂ ನಾಮ ಸಪ್ತತಿತಮೋಽಧ್ಯಾಯಃ
ಇತಿ ಪ್ರಭಾಸಕ್ಷೇತ್ರಮಾಹಾತ್ಮ್ಯಂ ಸಮಾಪ್ತಂ

---

೯೪-೯೫. ಇಂತಹ ಪ್ರಭಾಸತೀರ್ಥಮಾಹಾತ್ಮ್ಯೆಯನ್ನು ಸಮಾಧಾನಚಿತ್ತನಾಗಿ ಭಕ್ತಿಯಿಂದ ಕೇಳುವವನು ಮತ್ತು ಇತರರಿಗೆ ಶ್ರವಣಮಾಡಿಸುವವನೂ ಸಹ ಸದ್ಗತಿಯನ್ನು ಪಡೆಯುವನು.

ಇಂತು ಶ್ರೀನಾರದೀಯಪುರಾಣೋತ್ತರಭಾಗದೊಳು ವಸುಮೋಹಿನೀ
ಸಂವಾದದಲ್ಲಿ ಪ್ರಭಾಸತೀರ್ಥಮಾಹಾತ್ಮ್ಯೆಯೆಂಬ ಎಪ್ಪತ್ತನೆಯ
ಅಧ್ಯಾಯವು ಮುಗಿದುದು.



# ಏಕಸಪ್ತತಿತಮೋಽಧ್ಯಾಯಃ

---

ಮೋಹಿನ್ಯುವಾಚ

ಶ್ರುತಂ ಪ್ರಭಾಸಮಾಹಾತ್ಮ್ಯಂ ದ್ವಿಜಶ್ರೇಷ್ಠಾತಿಪುಣ್ಯದಂ ।
ಅಧುನಾ ಶ್ರೋತುಮಿಚ್ಛಾಮಿ ಮಾಹಾತ್ಮ್ಯಂ ಪುಷ್ಕರೋದ್ಭವಂ ॥ ೧ ॥

ಯದಾದ್ಯಂ ಸರ್ವತೀರ್ಥಾನಾಂ ಪವಿತ್ರಂ ಪಾಪನಾಶನಂ ।
ಮತ್ಪಿತುರ್ಯಜ್ಞಸದನಂ ತನ್ಮಮಾಖ್ಯಾಹಿ ವಿಸ್ತರಾತ್ ॥ ೨ ॥

ವಸುರುವಾಚ

ಶೃಣು ಭದ್ರೇ ಪ್ರವಕ್ಷ್ಯಾಮಿ ನರಾಣಾಂ ಕಾಮದಂ ಸದಾ ।
ಪುಣ್ಯಂ ಪುಷ್ಕರಮಾಹಾತ್ಮ್ಯಂ ಬಹುತೀರ್ಥಸಮನ್ವಿತಂ ॥ ೩ ॥

---

## ಎಪ್ಪತ್ತೊಂದನೆಯ ಅಧ್ಯಾಯ.

೧. ಮೋಹಿನಿಯು ಹೇಳಿದಳು :-ದ್ವಿಜವರ್ಯನಾದ ವಸುವೇ! ಬಹು ಪುಣ್ಯದಾಯಕವಾದ ಪ್ರಭಾಸಮಾಹಾತ್ಮ್ಯೆಯನ್ನು ಶ್ರವಣಮಾಡಿದೆನು. ಈಗ ಪುಷ್ಕರತೀರ್ಥದ ಮಾಹಾತ್ಮ್ಯೆಯನ್ನು ಕೇಳಲಿಚ್ಛಿಸುವೆನು.

೨. ಅದು ಸಕಲ ತೀರ್ಥಗಳಿಗೂ ಮೊದಲನೆಯದು, ಪವಿತ್ರವು, ಪಾಪ ನಾಶಕವು ಮತ್ತು ನನ್ನ ತಂದೆಯು ಯಜ್ಞಮಾಡಿದ ಕ್ಷೇತ್ರವೂ ಆಗಿದೆ. ಅದರ ಮಹಿಮೆಯನ್ನು ನನಗೆ ವಿಸ್ತಾರವಾಗಿ ಹೇಳು ಎಂಬುದಾಗಿ ಮೋಹಿನಿಯು ವಸುವನ್ನು ಕೇಳಿದಳು.

೩. ವಸುವು ಹೇಳಿದನು :—ಭದ್ರೇ! ಯಾವಾಗಲೂ ಮನುಷ್ಯರಿಗೆ ಇಷ್ಟಾರ್ಥಪ್ರದವು, ಪುಣ್ಯಕರವು, ಬಹುತೀರ್ಥಗಳನ್ನೊಳಗೊಂಡಿರುವುದೂ ಆಗಿ ರುವ ಪುಷ್ಕರಮಾಹಾತ್ಮ್ಯೆಯನ್ನು ಹೇಳುವೆನು ಕೇಳು,

ವಿಷ್ಣುನಾ ಸಹಿತಾ ದೇವಾ ಯತ್ರೇಂದ್ರಾದ್ಯಾ ವ್ಯವಸ್ಥಿತಾಃ ।
ಗಜವಕ್ತ್ರಃ ಕುಮಾರಶ್ಚ ರೇವತಶ್ಚ ದಿವಾಕರಃ ॥ ೪ ॥

ಶಿವದೂತೀ ತಥಾ ದೇವೀ ಕ್ಷೇತ್ರಕ್ಷೇಮಂಕರೀ ಸದಾ ।
ಜ್ಯೇಷ್ಠೇ ತು ಪುಷ್ಕರಾರಣ್ಯೇ ಯಸ್ತಿಷ್ಠತಿ ನಿರುದ್ಯಮೀ ॥ ೫ ॥

ಅಷ್ಟಾಂಗಯೋಗಜಂ ಪುಣ್ಯಂ ಸ ಲಭೇನ್ನಾತ್ರ ಸಂಶಯಃ ।
ನಾತಃ ಪರತರಂ ಕಿಂಚಿತ್ ಕ್ಷೇತ್ರಮಸ್ತೀಹ ಭೂತಲೇ ॥ ೬ ॥

ತಸ್ಮಾತ್ಸರ್ವಪ್ರಯತ್ನೇನ ಸೇವ್ಯಮೇತನ್ನರೋತ್ತಮೈಃ ।
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾ ವಾ ಕ್ಷೇತ್ರವಾಸಿನಃ ॥ ೭ ॥

ಸರ್ವಾತ್ಮನಾ ಬ್ರಹ್ಮಭಕ್ತಾ ಭೂತಾನುಗ್ರಹಕಾರಿಣಃ ।
ತೇ ಯಾಂತಿ ಬ್ರಹ್ಮಣೋ ಲೋಕಂ ಯತ್ರ ಗಚ್ಛಂತಿ ಯೋಗಿನಃ ॥ ೮ ॥

---

೪-೫. ಆ ಕ್ಷೇತ್ರದಲ್ಲಿ ಇಂದ್ರಾದಿ ದೇವತೆಗಳು, ಗಜಮುಖನು, ಕುಮಾರಸ್ವಾಮಿಯು, ರೇವತ, ಶಿವದೂತಿ, ಕ್ಷೇತ್ರಕ್ಷೇಮಕಳಾದ ದೇವಿ ಇವರುಗಳೊಡನೆ ವಿಷ್ಣುವು ಯಾವಾಗಲೂ ಸನ್ನಿಹಿತನಾಗಿರುವನು.

೫-೬. ಹಿರಿಯದಾದ ಪುಷ್ಕರಾರಣ್ಯದಲ್ಲಿ ಸುಮ್ಮನೆ ವಾಸಮಾಡುವವನೂ ಸಹ ಅಷ್ಟಾಂಗಯೋಗದಿಂದ ಬರುವ ಪುಣ್ಯವನ್ನು ಹೊಂದುವನು. ಈ ವಿಷಯದಲ್ಲಿ ಸಂದೇಹವಿಲ್ಲ.

೬-೭. ಈ ಭೂಮಂಡಲದಲ್ಲಿ ಇದಕ್ಕಿಂತ ಉತ್ತಮವಾದ ಯಾವ ಕ್ಷೇತ್ರವೂ ಇಲ್ಲ. ಆದಕಾರಣ ನರೋತ್ತಮರು ಸಕಲ ಪ್ರಯತ್ನದಿಂದಲೂ ಈ ಕ್ಷೇತ್ರವನ್ನು ಸೇವಿಸಬೇಕು.

೭-೮. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಶೂದ್ರ ಇವರು ಸರ್ವವಿಧದಿಂದಲೂ ಬ್ರಹ್ಮಭಕ್ತರಾಗಿ ಪ್ರಾಣಿಗಳಿಗೆ ಉಪಕಾರಮಾಡುತ್ತ ಈ ಕ್ಷೇತ್ರವಾಸಮಾಡಿದರೆ ಅವರು ಯೋಗಿಗಳಿಗೆ ಆವಾಸಸ್ಥಾನವಾದ ಬ್ರಹ್ಮಲೋಕಕ್ಕೆ ಹೋಗುವರು.

ಯೋ ನರಃ ಸರ್ವತೀರ್ಥೇಷು ಯತ್ಫಲಂ ಲಭತೇ ಪ್ಲುತಃ ।
ತತ್ಸರ್ವಂ ಸ ಲಭೇನ್ಮರ್ತ್ಯೋ ಜ್ಯೇಷ್ಠಕುಂಡೇ ಸಕೃತ್ಪ್ಲುತಃ ॥ ೯ ॥

ಪುಷ್ಕರಾರಣ್ಯಮಾಸಾದ್ಯ ಯತ್ರ ಪ್ರಾಚೀ ಸರಸ್ವತೀ ।
ಮತಿಃ ಸ್ಮೃತಿರ್ದಯಾ ಪ್ರಜ್ಞಾ ಮೇಧಾ ಬುದ್ಧಿಸಮಾಹ್ವಯಾ ॥ ೧೦ ॥

ತತ್ರಸ್ಥಂ ತಜ್ಜಲಂ ಪೇಯಂ ಯೇ ಪಶ್ಯಂತಿ ತಟೇ ಸ್ಥಿತಾಃ ।
ತೇಪ್ಯಶ್ವಮೇಧಯಜ್ಞಸ್ಯ ಫಲಂ ಪ್ರಾಪ್ಯ ವ್ರಜಂತಿ ಕಂ ॥ ೧೧ ॥

ತ್ರೀಣಿ ಶೃಂಗಾಣಿ ಶುಭ್ರಾಣಿ ತ್ರೀಣಿ ಪ್ರಸ್ರವಣಾನಿ ಚ ।
ಜ್ಯೇಷ್ಠಮಧ್ಯಕನಿಷ್ಠಾನಿ ತ್ರೀಣಿ ತತ್ರ ಸರಾಂಸಿ ಚ ॥ ೧೨ ॥

ತತ್ರಾನ್ಯತ್ಸುಮಹತ್ತೀರ್ಥಂ ನಂದಾ ನಾಮ ಸರಸ್ವತೀ ।
ಯತ್ರ ಪಶ್ಚಿಮದಿಶ್ಯಾಸ್ತೇ ಸರಸೋ ಯೋಜನೇ ಸತಿ ॥ ೧೩ ॥

---

೯. ಸಕಲ ತೀರ್ಥಗಳಲ್ಲಿಯೂ ಸ್ನಾನಮಾಡಿದ ಮನುಷ್ಯನು ಗಳಿಸುವ ಪುಣ್ಯಫಲವೆಲ್ಲವನ್ನೂ ಜ್ಯೇಷ್ಠಕುಂಡದಲ್ಲಿ ಒಂದಾವರ್ತಿ ಸ್ನಾನಮಾಡಿದ ಮನುಷ್ಯನು ಗಳಿಸುವನು.

೧೦. ಪೂರ್ವದಿಕ್ಕಿನ ಸರಸ್ವತೀನದಿಯು ಪುಷ್ಕರಾರಣ್ಯದಲ್ಲಿ ಹರಿಯುವಾಗ ಮತಿ, ಸ್ಮೃತಿ, ದಯಾ, ಪ್ರಜ್ಞಾ, ಮೇಧೆ, ಬುದ್ಧಿ ಎಂಬ ನಾಮಧೇಯಗಳನ್ನು ಹೊಂದಿದೆ.

೧೧. ಅದರ ದಡದಲ್ಲಿ ನಿಂತು ಆ ಸ್ಥಳದಲ್ಲಿರುವ ಜಲವನ್ನು ನೋಡುವವರೂ ಸಹ ಅಶ್ವಮೇಧಯಜ್ಞದ ಫಲಕ್ಕೆ ಭಾಗಿಗಳಾಗಿ ಸ್ವರ್ಗಕ್ಕೆ ಹೋಗುವರು.

೧೨. ಅಲ್ಲಿ ಮೂರು ಶಿಖರಗಳು, ಪರಿಶುದ್ಧವಾದ ಮೂರು ಝರಿಗಳು ಮತ್ತು ಜ್ಯೇಷ್ಠ, ಮಧ್ಯ, ಕನಿಷ್ಠ ಎಂಬ ಮೂರು ಸರೋವರಗಳೂ ಸಹ ಇವೆ.

೧೩. ಸಾಧ್ವೀ! ಸರೋವರದ ಪಶ್ಚಿಮದ ಕಡೆ ಒಂದು ಗಾವುದ ದೂರದಲ್ಲಿ ಸರಸ್ವತೀನದಿಯು ನಂದಾ ಎಂಬ ನಾಮಧೇಯದಿಂದ ಇನ್ನೊಂದು ಮಹಾತೀರ್ಥವಾಗಿದೆ.

ತತ್ರ ಸ್ನಾತ್ವಾ ವಿಧಾನೇನ ಗಾಂ ಚ ದತ್ವಾ ಪಯಸ್ವಿನೀಂ |
ವಿಪ್ರಾಯ ವೇದವಿದುಷೇ ವ್ರಜೇದ್ಬ್ರಹ್ಮಕ್ಷಯಂ ನರಃ || ೧೪ ||
ಕೋಟಿತೀರ್ಥಂ ತಥಾತ್ರಾಸ್ತಿ ಯತ್ರರ್ಷಿಕೋಟಿರಾಗತಾ |
ತತ್ರ ಸ್ನಾತ್ವಾ ದ್ವಿಜಾನ್ ಪ್ರಾರ್ಚ್ಯ ಮುಚ್ಯತೇ ಸರ್ವಪಾತಕೈಃ || ೧೫ ||
ಅಗಸ್ತ್ಯಾಶ್ರಮಮಾಸಾದ್ಯ ಸ್ನಾತ್ವಾ ಸಂಪೂಜ್ಯ ಕುಂಭಜಂ |
ದೀರ್ಘಾಯುರ್ಜಾಯತೇ ಭೋಗೀ ದೇಹಾಂತೇ ಸ್ವರ್ಗತಿಂ ಲಭೇತ್ ||
ಸಪ್ತರ್ಷೀಣಾಂ ತಥಾ ಪ್ರಾಪ್ಯ ತತ್ರಾಶ್ರಮಮನನ್ಯಧೀಃ |
ಸ್ನಾತ್ವಾ ಸಂಪೂಜ್ಯ ಭಕ್ತ್ಯಾ ತಾಂಲ್ಲಭತೇ ತತ್ಸಲೋಕತಾಂ || ೧೭ ||
ಮನೂನಾಮಾಶ್ರಮೇ ಸ್ನಾತ್ವಾ ಪೂಜಾಮಾಪ್ನೋತಿ ಸರ್ವತಃ |
ಗಂಗಾವಿನಿರ್ಗಮೇ ಸ್ನಾತ್ವಾ ಗಂಗಾಸ್ನಾನಫಲಂ ಲಭೇತ್ || ೧೮ ||

---

೧೪. ಅಲ್ಲಿ ವಿಧಿವತ್ತಾಗಿ ಸ್ನಾನಮಾಡಿ ಹಾಲುಕರೆಯುವ ಗೋವನ್ನು ವೇದವಿದ್ವಾಂಸನಾದ ಬ್ರಾಹ್ಮಣನಿಗೆ ದಾನಮಾಡಿದ ಮನುಷ್ಯನು ಬ್ರಹ್ಮಲೋಕಕ್ಕೆ ಹೋಗುವನು.

೧೫ ಅಲ್ಲಿಯೇ ಕೋಟಿ ಋಷಿಗಳು ಬಂದು ಸನ್ನಿಹಿತರಾಗಿರುವ ಕೋಟಿ ತೀರ್ಥವೆಂಬ ಮತ್ತೊಂದು ತೀರ್ಥವಿದೆ. ಅಲ್ಲಿ ಸ್ನಾನಮಾಡಿ ದ್ವಿಜರನ್ನು ಪೂಜಿಸಿದರೆ ಪಾಪಗಳೆಲ್ಲಾ ಹೋಗುವುದು.

೧೬. ಅಲ್ಲಿಂದ ಅಗಸ್ತ್ಯಾಶ್ರಮಕ್ಕೆ ಹೋಗಿ ಅಲ್ಲಿ ಸ್ನಾನಮಾಡಿ ಅಗಸ್ತ್ಯ ಮುನಿಯನ್ನು ಪೂಜಿಸಿದರೆ ದೀರ್ಘಾಯುಷ್ಮಂತನು, ಭೋಗಿಯೂ ಆಗಿ ಮೃತನಾದಮೇಲೆ ಸ್ವರ್ಗಕ್ಕೆ ಹೋಗುವನು.

೧೭. ಆಮೇಲೆ ಸಪ್ತರ್ಷಿಗಳ ಆಶ್ರಮಕ್ಕೆ ಹೋಗಿ ಸ್ನಾನಮಾಡಿ ಒಂದೇ ಮನಸ್ಸಿನಿಂದ ಭಕ್ತಿಪೂರ್ವಕವಾಗಿ ಸಪ್ತರ್ಷಿಗಳನ್ನು ಪೂಜಿಸಿದರೆ ಆ ಋಷಿ ಲೋಕವನ್ನು ಹೊಂದುವನು.

೧೮. ಮನುಗಳ ಆಶ್ರಮದಲ್ಲಿ ಸ್ನಾನಮಾಡುವುದರಿಂದ ಎಲ್ಲಾ ಕಡೆ ಯಲ್ಲಿಯೂ ಸತ್ಕಾರವನ್ನು ಪಡೆಯುವನು. ಗಂಗಾವಿನಿರ್ಗಮಸ್ಥಾನದಲ್ಲಿ ಸ್ನಾನ

ಜ್ಯೇಷ್ಠೇ ತು ಪುಷ್ಕರೇ ಸ್ನಾತ್ವಾ ಗಾಂ ಚ ದತ್ವಾ ದ್ವಿಜಾತಯೇ |
ಭುಕ್ತ್ವೇಹ ಭೋಗಾನಖಿಲಾನ್ ಬ್ರಹ್ಮಲೋಕೇ ಮಹೀಯತೇ || ೧೯ ||

ಮಧ್ಯಮೇ ಪುಷ್ಕರೇ ಸ್ನಾತ್ವಾ ಬ್ರಾಹ್ಮಣಾಯ ಮಹೀಂ ದದತ್ |
ವಿಷ್ಣುಲೋಕಮವಾಪ್ನೋತಿ ವಿಮಾನವರಮಾಸ್ಥಿತಃ || ೨೦ ||

ಕನಿಷ್ಠೇ ತು ನರಃ ಸ್ನಾತ್ವಾ ದತ್ವಾ ವಿಪ್ರಾಯ ಕಾಂಚನಂ |
ಸರ್ವಾನ್ಕಾಮಾನವಾಪ್ಯಾಂತೇ ರುದ್ರಲೋಕೇ ಮಹೀಯತೇ || ೨೧ ||

ತತೋ ವಿಷ್ಣುಪದೇ ಸ್ನಾತ್ವಾ ದತ್ವಾ ಕಿಂಚಿದ್ದ್ವಿಜಾತಯೇ |
ಲಭತೇ ಸಕಲಾನ್ಕಾಮಾನ್ ವಿಷ್ಣೋಶ್ಚೈವ ಪ್ರಸಾದತಃ || ೨೨ ||

ನಾಗತೀರ್ಥೇ ತತಃ ಸ್ನಾತ್ವಾ ನಾಗಾನಭ್ಯರ್ಚ್ಯ ಮಾನವಃ |
ದತ್ವಾ ದಾನಂ ದ್ವಿಜಾತಿಭ್ಯೋ ಮೋದತೇ ತ್ರಿದಿವೇ ಯುಗಂ || ೨೩ ||

---

೧೯. ಜ್ಯೇಷ್ಠಪುಷ್ಕರದಲ್ಲಿ ಸ್ನಾನಮಾಡಿ ಬ್ರಾಹ್ಮಣರಿಗೆ ಗೋದಾನ ಮಾಡುವವನು ಇಲ್ಲಿ ಸಮಸ್ತ ಭೋಗಗಳನ್ನೂ ಅನುಭವಿಸಿ ಬ್ರಹ್ಮಲೋಕದಲ್ಲಿಯೂ ಭೋಗಿಸುವನು.

೨೦. ಮಧ್ಯಮಪುಷ್ಕರದಲ್ಲಿ ಸ್ನಾನಮಾಡಿ ಬ್ರಾಹ್ಮಣರಿಗೆ ಗೋದಾನ ಮಾಡುವುದರಿಂದ ಉತ್ತಮವಿಮಾನದಲ್ಲಿ ಕುಳಿತು ವಿಷ್ಣುಲೋಕಕ್ಕೆ ಹೋಗುವನು.

೨೧. ಕನಿಷ್ಠಪುಷ್ಕರದಲ್ಲಿ ಸ್ನಾನಮಾಡಿ ಬ್ರಾಹ್ಮಣನಿಗೆ ಸುವರ್ಣದಾನ ಮಾಡುವ ಮನುಷ್ಯನು ಸಕಲೇಷ್ಟಾರ್ಥಗಳನ್ನೂ ಪೂರೈಸಿಕೊಂಡು ಕೊನೆಗೆ ರುದ್ರಲೋಕದಲ್ಲಿ ಭೋಗಿಸುವನು.

೨೨. ಅನಂತರ ವಿಷ್ಣುಪದತೀರ್ಥದಲ್ಲಿ ಸ್ನಾನಮಾಡಿ ದ್ವಿಜರಿಗೆ ಸ್ವಲ್ಪವಾಗಿ ದಾನಮಾಡಿದರೂ ಸಹ ವಿಷ್ಣುವಿನ ಅನುಗ್ರಹವುಂಟಾಗಿ ಸಕಲೇಷ್ಟಾರ್ಥಗಳನ್ನೂ ಪಡೆಯುವನು.

೨೩. ಆಮೇಲೆ ನಾಗತೀರ್ಥದಲ್ಲಿ ಸ್ನಾನಮಾಡಿ ನಾಗಗಳನ್ನರ್ಚಿಸಿ ಬ್ರಾಹ್ಮಣರಿಗೆ ತನ್ನ ಶಕ್ತ್ಯನುಸಾರವಾಗಿ ದಾನಮಾಡಿದರೆ ಅವನು ಒಂದು ಯುಗಕಾಲ ಸ್ವರ್ಗದಲ್ಲಿ ಆನಂದಿಸುವನು.

ಪಿಶಾಚತೀರ್ಥಕೇ ಸ್ನಾತ್ವಾ ದತ್ವಾ ವಿಪ್ರಾಯ ಭೋಜನಂ ।
ನ ಕದಾಚಿತ್ಪಿಶಾಚತ್ವಂ ಪ್ರಾಪ್ನೋತಿ ತ್ರಿದಿವಂ ವ್ರಜೇತ್ || ೨೪ ||
ಶಿವದೂತೀಹ್ರದೇ ಸ್ನಾತ್ವಾ ತತ್ರ ಶಂಭುಂ ಸಮರ್ಚ್ಯ ಚ ।
ವಿಪ್ರಾನ್ ಸಂಭೋಜ್ಯ ಮಿಷ್ಟಾನ್ನಂ ಸ್ವರ್ಗಲೋಕೇ ಮಹೀಯತೇ || ೨೫ ||
ಆಕಾಶಪುಷ್ಕರೇ ಸ್ನಾತ್ವಾ ಮಂತ್ರಯೋಗಫಲಪ್ರದೇ ।
ನರೋ ಮುಕ್ತಿಮವಾಪ್ನೋತಿ ಸತ್ಯಂ ಸತ್ಯಂ ತವೋದಿತಂ || ೨೬ ||
ಆಪೋಹಿಷ್ಠಾದಿಭಿರ್ಮಂತ್ರೈರಾಕಾಶಸ್ಥಂ ವಿಚಿಂತ್ಯ ತತ್ ।
ಸ್ನಾಯಾದ್ಯಃ ಪುಷ್ಕರಾರಣ್ಯೇ ಸ ಲಭೇಚ್ಛಾಶ್ವತಂ ಪದಂ || ೨೭ ||
ಆಗ್ನೇಯಂ ತು ಯದಾ ಋಕ್ಷಂ ಕಾರ್ತಿಕ್ಯಾಂ ಭವತಿ ಕ್ವಚಿತ್ ।
ಮಹತೀ ಸಾ ತಿಥಿಸ್ತತ್ರ ಸ್ನಾನಮಾಕಾಶಪುಷ್ಕರೇ || ೨೮ ||

---

೨೪. ಪಿಶಾಚತೀರ್ಥದಲ್ಲಿ ಸ್ನಾನಮಾಡಿ ಬ್ರಾಹ್ಮಣರಿಗೆ ಭೋಜನ ಮಾಡಿಸಿದರೆ ಯಾವಾಗಲೂ ಪಿಶಾಚಜನ್ಮ ಬರುವುದಿಲ್ಲ. ಅವನು ಸ್ವರ್ಗಕ್ಕೆ ಹೋಗುವನು.

೨೫. ಶಿವದೂತೀಹ್ರದದಲ್ಲಿ ಸ್ನಾನಮಾಡಿ ಅಲ್ಲಿರುವ ಶಂಭುಲಿಂಗವನ್ನು ಪೂಜಿಸಿ ಬ್ರಾಹ್ಮಣರಿಗೆ ಮೃಷ್ಟಾನ್ನಭೋಜನ ಮಾಡಿಸುವುದರಿಂದ ಸ್ವರ್ಗಲೋಕ ದಲ್ಲಿ ಸುಖಪಡುವನು.

೨೬. ಮಂತ್ರ, ಯೋಗ ಇವುಗಳ ಫಲವನ್ನು ಕೊಡುವಂತಹ ಆಕಾಶ ಪುಷ್ಕರದಲ್ಲಿ ಸ್ನಾನಮಾಡಿದ ಮನುಷ್ಯನು ಮೋಕ್ಷವನ್ನು ಪಡೆಯುವನು. ನಿನಗೆ ಹೇಳಿರುವುದು ಸತ್ಯ ! ಸತ್ಯ !

೨೭. "ಆಪೋಹಿಷ್ಠಾ" ಮುಂತಾದ ಮಂತ್ರಗಳನ್ನು ಹೇಳುತ್ತಾ ಆಕಾಶಸ್ಥಿತವಾದ ಅದನ್ನು ಧ್ಯಾನಿಸಿ ಪುಷ್ಕರಾರಣ್ಯದಲ್ಲಿ ಸ್ನಾನಮಾಡುವವನು ಶಾಶ್ವತಪದವಿಯನ್ನು ಹೊಂದುವನು.

೨೮. ಕಾರ್ತಿಕಶುಕ್ಲ ಪೂರ್ಣಿಮಾದಿನ ಅಗ್ನಿದೇವತಾಕವಾದ ನಕ್ಷತ್ರ (ಕೃತ್ತಿಕಾ) ವು ಬಂದಾಗ ಆ ತಿಥಿಯು ಮಹಾಪರ್ವಕಾಲವಾಗುವುದು. ಆ ಪುಣ್ಯ

ಯಾಮ್ಯರ್ಕ್ಷಯೋಗೇ ಕಾರ್ತಿಕ್ಯಾಂ ಮಧ್ಯಮೇ ಸ್ನಾನಕೃನ್ನರಃ |
ತತ್ಫಲಂ ಸಮವಾಪ್ನೋತಿ ಯನ್ನಭಃಪುಷ್ಕರೋದ್ಭವಂ || ೨೯ ||

ಪ್ರಾಜಾಪತ್ಯರ್ಕ್ಷಯುಕ್ತಾಯಾಂ ಕಾರ್ತಿಕ್ಯಾಂ ತು ಕನಿಷ್ಠಕೇ |
ಸ್ನಾತಸ್ತತ್ಫಲಮಾಪ್ನೋತಿ ಯದ್ವಿಯತ್ಪುಷ್ಕರೋದ್ಭವಂ || ೩೦ ||

ನಂದಾ ಚಾರ್ಕೇ ಗುರೌ ಸೋಮೇ ಯಾಮ್ಯೇ ವಹ್ನೌ ವಿಧೌ ಕ್ರಮಾತ್ |
ಯದಾ ನಭಃಪುಷ್ಕರೋತ್ಥಂ ತದಾ ಸ್ಯಾತ್ಸಕಲಂ ಫಲಂ || ೩೧ ||

ವಿಶಾಖಾಯಾಂ ಯದಾ ಭಾನುಃ ಕೃತ್ತಿಕಾಯಾಂ ಚ ಚಂದ್ರಮಾಃ |
ತದಾ ನಭಃಪುಷ್ಕರಾಖ್ಯೇ ಯೋಗೇ ಸ್ನಾತೋ ದಿವಂ ವ್ರಜೇತ್ || ೩೨ ||

---

೨೯. ಕಾರ್ತಿಕ ಪೂರ್ಣಿಮಾದಿನ ಯಾಮ್ಯನಕ್ಷತ್ರಯೋಗವು ಬಂದಾಗ ಮಧ್ಯಮ ಪುಷ್ಕರದಲ್ಲಿ ಸ್ನಾನಮಾಡುವ ಮನುಷ್ಯನು ಆಕಾಶಪುಷ್ಕರ ಸ್ನಾನಫಲವನ್ನು ಹೊಂದುವನು.

೩೦. ಪ್ರಜಾಪತಿದೇವತಾಕನಕ್ಷತ್ರಯುಕ್ತವಾದ ಕಾರ್ತಿಕ ಪೂರ್ಣಿಮೆಯಲ್ಲಿ ಕನಿಷ್ಠ ಪುಷ್ಕರದಲ್ಲಿ ಸ್ನಾನಮಾಡಿದವನೂ ಸಹ ಆಕಾಶಪುಷ್ಕರ ಸ್ನಾನಫಲವನ್ನು ಹೊಂದುವನು.

೩೧. ಭಾನು, ಗುರು, ಸೋಮ ಈ ವಾರಗಳಲ್ಲಿ ಕ್ರಮವಾಗಿ ಯಾಮ್ಯ, ಆಗ್ನೇಯ, ಪ್ರಾಜಾಪತ್ಯ ನಕ್ಷತ್ರಗಳು ನಂದಾತಿಥಿಯಲ್ಲಿ ಸೇರಿದಾಗ ಮಾಡುವ ಸ್ನಾನಾದಿಗಳಿಂದ ಆಕಾಶಪುಷ್ಕರಸ್ನಾನಾದಿಗಳ ಫಲವು ಸಂಪೂರ್ಣವಾಗಿ ಬರುವುದು.

೩೨. ವಿಶಾಖಾನಕ್ಷತ್ರದಲ್ಲಿ ರವಿಯೂ, ಕೃತ್ತಿಕಾನಕ್ಷತ್ರದಲ್ಲಿ ಚಂದ್ರನೂ ಇರುವಾಗ ನಭಃಪುಷ್ಕರವೆಂಬ ಯೋಗವು ಸಂಭವಿಸುವುದು. ಆ ಯೋಗಕಾಲದಲ್ಲಿ ಸ್ನಾನಮಾಡಿದವನು ಸ್ವರ್ಗಕ್ಕೆ ಹೋಗುವನು.

ಅಂತರಿಕ್ಷಾವತೀರ್ಣೇಸ್ಮಿಂಸ್ತೀರ್ಥೇ ಪೈತಾಮಹೇ ಶುಭೇ ।
ಕುರ್ವಂತಿ ಯೇ ನರಾಃ ಸ್ನಾನಂ ತೇಷಾಂ ಲೋಕಾ ಮಹೋದಯಾಃ ॥

ಪಂಚಸ್ರೋತಃಸರಸ್ವತ್ಯಾಂ ಪುಷ್ಕರಾರಣ್ಯಕೇ ಸತಿ ।
ಕೃತಾನಿ ಮುನಿಭಿಃ ಸಿದ್ಧೈಸ್ತೀರ್ಥಾನ್ಯಾಯತನಾನಿ ಚ ॥ ೩೪ ॥

ತೇಷು ಸರ್ವೇಷು ವಿಜ್ಞೇಯಾ ಧರ್ಮಹೇತುಃ ಸರಸ್ವತೀ ।
ಹಾಟಕಕ್ಷಿತಿಗೌರೀಣಾಂ ದಾನಂ ತೇಷು ಮಹಾಫಲಂ ॥ ೩೫ ॥

ಧಾನ್ಯಾನ್ಯಪಿ ತಿಲಾಂಶ್ಚಾಪಿ ಯೋತ್ರ ದದ್ಯಾದ್ದ್ವಿಜೋತ್ತಮೇ ।
ಸ ನರೋ ಲಭತೇ ಭೋಗಾನಿಹಾಮುತ್ರ ಪರಾಂ ಗತಿಂ ॥ ೩೬ ॥

ಸಂಗೇ ಗಂಗಾಸರಸ್ವತ್ಯೋರ್ಯಃ ಸ್ನಾತ್ವಾ ಪೂಜಯೇದ್ದ್ವಿಜಾನ್ ।
ಸ ಪ್ರಾಪ್ನೋತಿ ಗತಿಂ ಚಾಗ್ರ್ಯಂ ಭುಕ್ತ್ವಾ ಭೋಗಾನಿಹೇಪ್ಸಿತಾನ್ ॥೩೭॥

---

೩೩. ಚತುರ್ಮುಖಬ್ರಹ್ಮನ ಸಂಬಂಧಿಯಾದ, ಅಂತರಿಕ್ಷದಿಂದಿಳಿದು ಬಂದಿರುವ, ಮಂಗಳಕರವಾದ ಈ ತೀರ್ಥದಲ್ಲಿ ಸ್ನಾನಮಾಡುವ ಮನುಷ್ಯರಿಗೆ ಮಹಾಶ್ರೇಯಸ್ಕರ ಲೋಕಗಳು ಲಭಿಸುವುವು.

೩೪. ಸಾಧ್ವಿಯೇ! ಪುಷ್ಕರಾರಣ್ಯದಲ್ಲಿ ಹರಿಯುತ್ತಿರುವ ಪಂಚಸ್ರೋತಸ್ಸೆಂಬ ಸರಸ್ವತಿಯ ತೀರದಲ್ಲಿ ಸಿದ್ಧಮುನಿಗಳು ತೀರ್ಥ ಮತ್ತು ಆಯತನಗಳನ್ನು ರಚಿಸಿರುವರು.

೩೫. ಆ ತೀರ್ಥಗಳಲ್ಲೆಲ್ಲಾ ಸರಸ್ವತಿಯೇ ಧರ್ಮಸಾಧನವೆಂದು ತಿಳಿಯಬೇಕು. ಆ ತೀರ್ಥಗಳಲ್ಲಿ ಸುವರ್ಣ, ಭೂಮಿ, ಗೋವು ಇವುಗಳನ್ನು ದಾನ ಮಾಡಿದರೆ ಮಹಾಫಲವು ಬರುವುದು.

೩೬. ಈ ಕ್ಷೇತ್ರದಲ್ಲಿ ದ್ವಿಜೋತ್ತಮನಿಗೆ ಧಾನ್ಯ ಮತ್ತು ತಿಲಗಳನ್ನು ದಾನಮಾಡುವ ಮನುಷ್ಯನು ಇಲ್ಲಿ ಭೋಗಗಳನ್ನೂ ಪರಲೋಕದಲ್ಲಿ ಉತ್ತಮ ಗತಿಯನ್ನೂ ಪಡೆಯುವನು.

೩೭. ಗಂಗಾಸರಸ್ವತೀನದಿಗಳ ಸಂಗಮದಲ್ಲಿ ಸ್ನಾನಮಾಡಿ ದ್ವಿಜರನ್ನು ಪೂಜಿಸುವ ಮನುಷ್ಯನು ಇಲ್ಲಿ ತಾನು ಬಯಸಿದ ಭೋಗಗಳನ್ನೆಲ್ಲಾ ಅನುಭವಿಸಿ ಪರಲೋಕದಲ್ಲಿ ಉತ್ತಮಗತಿಯನ್ನು ಹೊಂದುವನು.

ಅವಿಯೋಗಾಭಿಧಾಯಾಂ ತು ವಾಪ್ಯಾಂ ಸ್ನಾತ್ವಾ ನರಃ ಸುಧೀಃ |
ಪಿಂಡಂ ದತ್ವಾ ವಿಧಾನೇನ ಪಿತೄನ್ನಯತಿ ವೈ ದಿವಂ || ೩೮ ||

ತಥಾ ಸೌಭಾಗ್ಯಕೂಪೇ ತು ಸ್ನಾತ್ವಾ ಸಂತರ್ಪ್ಯ ಪೂರ್ವಜಾನ್ |
ಸದ್ಗತಿಂ ಲಭತೇ ಮರ್ತ್ಯೋ ಸೌಭಾಗ್ಯಂ ಚಾತುಲಂ ಭುವಿ || ೩೯ ||

ಮರ್ಯಾದಾಪರ್ವತೌ ದ್ವೌ ತು ಸ್ನಾತ್ವಾ ಸ್ಪೃಷ್ಟ್ವಾ ಸಮರ್ಚ್ಯ ಚ |
ವಾಂಛಿತಾಂಲ್ಲಭತೇ ಲೋಕಾನ್ ಸಾಂಗಯಾತ್ರಾಫಲಂ ತಥಾ || ೪೦ ||

ಅಜಗಂಧಂ ಶಿವಂ ಪ್ರಾಪ್ಯ ಸಮಭ್ಯರ್ಚ್ಯ ವಿಧಾನತಃ |
ಲಭತೇ ವಾಂಛಿತಾನ್ಕಾಮಾನಿಹ ಲೋಕೇ ಪರತ್ರ ಚ || ೪೧ ||

ಸರಸೋ ದಕ್ಷಿಣೇ ಭಾಗೇ ಸಾವಿತ್ರೀಂ ಪರ್ವತೋಪರಿ |
ಸಂಸ್ಥಿತಾಂ ಯಃ ಸಮಭ್ಯರ್ಚ್ಯೇತ್ಸೋಽಪಿ ವೇದಸ್ಯ ತತ್ವವಿತ್ || ೪೨ ||

---

೩೮. ಅವಿಯೋಗವೆಂಬ ಸರೋವರದಲ್ಲಿ ಸ್ನಾನಮಾಡಿ ಜ್ಞಾನಿಯಾದ ಮನುಷ್ಯನು ವಿಧಾನೋಕ್ತಪ್ರಕಾರವಾಗಿ ಪಿಂಡಪ್ರದಾನಮಾಡಿದರೆ ಅವನು ತನ್ನ ಪಿತೃಗಳನ್ನು ಸ್ವರ್ಗಕ್ಕೆ ಒಯ್ಯುವನು.

೩೯. ಹಾಗೆಯೇ ಸೌಭಾಗ್ಯಕೂಪದಲ್ಲಿ ಸ್ನಾನಮಾಡಿ ಪಿತೃಗಳಿಗೆ ತರ್ಪಣಕೊಡುವ ಮನುಷ್ಯನು ಈ ಭೂಲೋಕದಲ್ಲಿ ಅಸದೃಶವಾದ ಸೌಭಾಗ್ಯವನ್ನು ಅನುಭವಿಸಿ ಅನಂತರ ಸದ್ಗತಿಯನ್ನು ಹೊಂದುವನು.

೪೦. ಅಲ್ಲಿ ಎರಡು ಮರ್ಯಾದಾ ಪರ್ವತಗಳಿವೆ. ಸ್ನಾನಮಾಡಿದಮೇಲೆ ಅವನ್ನು ಸ್ಪರ್ಶಮಾಡಿ ಪೂಜಿಸುವುದರಿಂದ ತಾನು ಬಯಸಿದ ಲೋಕಗಳನ್ನು ಹೊಂದುವನು ಮತ್ತು ಅವನ ಯಾತ್ರೆಯು ಸಫಲವಾಗುವುದು.

೪೧. ಅಜಗಂಧಶಿವನನ್ನು ದರ್ಶನಮಾಡಿ ವಿಧಿವತ್ತಾಗಿ ಪೂಜೆಮಾಡಿದರೆ ಇಲ್ಲಿ ಇಷ್ಟಾರ್ಥಗಳು ಲಭಿಸಿ ಪರಲೋಕದಲ್ಲಿಯೂ ಸಹ ಅವನ ಕಾಮಗಳು ಪೂರ್ಣವಾಗುವುವು.

೪೨. ಆ ಸರೋವರದ ದಕ್ಷಿಣಭಾಗದಲ್ಲಿ ಪರ್ವತದ ಮೇಲಿರುವ ಸಾವಿತ್ರೀದೇವಿಯನ್ನು ಪೂಜಿಸುವವನೂ ಸಹ ವೇದತತ್ವಜ್ಞಾನಿಯಾಗುವನು.

ವಾರಾಹಸ್ಯ ನೃಸಿಂಹಸ್ಯ ಬ್ರಹ್ಮಣಶ್ಚ ಹರೇಸ್ತಥಾ ।
ಶಿವಸ್ಯ ಚಾಪಿ ಸೂರ್ಯಸ್ಯ ಸೋಮಸ್ಯ ಚ ಗುಹಸ್ಯ ಚ ॥ ೪೩ ॥

ಪಾರ್ವತ್ಯಾ ಜ್ವಲನಸ್ಯಾಪಿ ತತ್ರ ತೀರ್ಥಾನಿ ಮೋಹಿನಿ ।
ಪೃಥಕ್ತೇಷು ಮಹಾಭಾಗೇ ನರಃ ಸ್ನಾತ್ವಾ ಸಮಾಹಿತಃ ॥ ೪೪ ॥

ದಾನಂ ಚ ದತ್ವಾ ವಿಪ್ರೇಭ್ಯೋ ಲಭತೇ ಗತಿಮುತ್ತಮಾಂ ।
ಪುಷ್ಕರೇ ದುರ್ಲಭಂ ಸ್ನಾನಂ ಪುಷ್ಕರೇ ದುರ್ಲಭಂ ತಪಃ ॥ ೪೫ ॥

ಪುಷ್ಕರೇ ದುರ್ಲಭಂ ದಾನಂ ಪುಷ್ಕರೇ ದುರ್ಲಭಾ ಸ್ಥಿತಿಃ ।
ಶತಯೋಜನಸಂಸ್ಥೋಽಪಿ ಸ್ನಾನಕಾಲೇ ತು ಯೋ ನರಃ ॥ ೪೬ ॥

ಪುಷ್ಕರಂ ಚಿಂತಯೇದ್ಭಕ್ತ್ಯಾ ಸ ತತ್ಸ್ನಾನಫಲಂ ಲಭೇತ್ ।
ಮಂಕಣಾದ್ಯಾಸ್ತಪಃಸಿದ್ಧಾಃ ಸೇವಂತೇ ಪುಷ್ಕರಂ ಮುದಾ ॥ ೪೭ ॥

---

೪೩-೪೫. ವಾರಾಹ, ನರಸಿಂಹ, ಬ್ರಹ್ಮ, ಹರಿ, ಶಿವ, ಸೂರ್ಯ, ಚಂದ್ರ, ಗುರು, ಪಾರ್ವತೀ ಮತ್ತು ಅಗ್ನಿ ಈ ದೇವತೆಗಳ ತೀರ್ಥಗಳು ಅಲ್ಲಿ ಪ್ರತ್ಯೇಕವಾಗಿವೆ. ಮೋಹಿನೀ! ಅವುಗಳಲ್ಲಿ ಒಂದೊಂದರಲ್ಲಿಯೂ ಸ್ನಾನಮಾಡಿ ಮನುಷ್ಯನು ಸಮಾಧಾನಚಿತ್ತನಾಗಿ ಬ್ರಾಹ್ಮಣರಿಗೆ ದಾನಮಾಡಿದರೆ ಅವನು ಉತ್ತಮ ಗತಿಯನ್ನು ಹೊಂದುವನು.

೪೫-೪೭. ಪುಷ್ಕರತೀರ್ಥದಲ್ಲಿ ಸ್ನಾನ, ತಪಸ್ಸು, ದಾನ ಮತ್ತು ವಾಸ ಇವೆಲ್ಲವೂ ದುರ್ಲಭವು. ನೂರು ಗಾವುದ ದೂರದಲ್ಲಿದ್ದರೂ ಸ್ನಾನಮಾಡುವ ಕಾಲದಲ್ಲಿ ಮನುಷ್ಯನು ಭಕ್ತಿಯಿಂದ ಪುಷ್ಕರವನ್ನು ಧ್ಯಾನಿಸಿದರೆ ಅವನು ಪುಷ್ಕರದಲ್ಲಿ ಸ್ನಾನಮಾಡಿದ ಫಲವನ್ನು ಹೊಂದುವನು.

೪೭-೪೮. ತಪಸ್ಸಿದ್ಧಿಯನ್ನು ಹೊಂದಿದ ಮಂಕಣ ಮುಂತಾದ ಮುನಿಗಳು ಆನಂದದಿಂದ ಪುಷ್ಕರತೀರ್ಥವನ್ನು ಸೇವಿಸಿದೆಡೆಗೆ ಅದೃಷ್ಟದಿಂದ ಹೋದದ್ದೇ ಆದರೆ ಅವನೂ ಸಹ ಇಷ್ಟಸಿದ್ಧಿಯನ್ನು ಪಡೆಯುವನು,

ಯತ್ರ ತತ್ರ ಗತೋ಻ ಭಾಗ್ಯಾತ್ಕಾಮಿತಾಂ ಸಿದ್ಧಿಮಾಪ್ನುಯಾತ್ ।
ಪುಷ್ಕರೇತಿ ಚ ನಾಮಾಪಿ ಯೇನೋಕ್ತಂ ವಿಧಿನಂದಿನಿ ॥ ೪೮ ॥

ಪುಷ್ಕರಸ್ನಾನಜಂ ಪುಣ್ಯಂ ಲಭೇತ್ ಸೋ಻ಪಿ ನ ಸಂಶಯಃ ।
ಯಃ ಶೃಣೋತಿ ನರೋ ಭಕ್ತ್ಯಾ ಮಾಹಾತ್ಮ್ಯಂ ಪುಷ್ಕರಸ್ಯ ಚ ॥ ೪೯ ॥

ಸೋ಻ಪಿ ಸ್ನಾನಫಲಂ ಪ್ರಾಪ್ಯ ಮೋದತೇ ದಿವಿ ದೇವವತ್ ॥ ೫೦ ॥

ಇತಿ ಶ್ರೀನಾರದೀಯಪುರಾಣೋತ್ತರಭಾಗೇ ವಸುಮೋಹಿನೀಸಂವಾದೇ
ಪುಷ್ಕರಮಾಹಾತ್ಮ್ಯಂ ನಾಮೈಕಸಪ್ತತಿತಮೋ಻ಧ್ಯಾಯಃ
ಇತಿ ಪುಷ್ಕರಮಾಹಾತ್ಮ್ಯಂ ಸಮಾಪ್ತಂ

---

೪೮-೪೯. ಬ್ರಹ್ಮನಂದನೇ ! ಪುಷ್ಕರ ಎಂಬ ಹೆಸರನ್ನು ಹೇಳುವವನೂ ಸಹ ಪುಷ್ಕರಸ್ನಾನದಿಂದುಂಟಾಗುವ ಪುಣ್ಯವನ್ನು ಹೊಂದುವನು. ಈ ವಿಷಯ ದಲ್ಲಿ ಸಂದೇಹವಿಲ್ಲ.

೪೯-೫೦. ಈ ತೆರನಾದ ಪುಷ್ಕರಮಾಹಾತ್ಮ್ಯೆಯನ್ನು ಭಕ್ತಿಪೂರ್ವಕವಾಗಿ ಕೇಳುವ ಮನುಷ್ಯನೂ ಸಹ ಸ್ನಾನಫಲವನ್ನು ಪಡೆದು ದೇವಲೋಕದಲ್ಲಿ ದೇವತೆ ಯಂತೆ ಸುಖಪಡುವನು.

ಇಂತು ಶ್ರೀನಾರದೀಯಪುರಾಣೋತ್ತರಭಾಗದಲ್ಲಿ ವಸುಮೋಹಿನೀ
ಸಂವಾದದೊಳು ಪುಷ್ಕರ ಮಾಹಾತ್ಮ್ಯೆಯೆಂಬ
ಎಪ್ಪತ್ತೊಂದನೆಯ ಅಧ್ಯಾಯವು
ಮುಗಿದುದು.



# ದ್ವಾಸಪ್ತತಿತಮೋಽಧ್ಯಾಯಃ

## ಗೌತಮಾಶ್ರಮಮಾಹಾತ್ಮ್ಯಂ ಪ್ರಾರಭ್ಯತೇ

ಮೋಹಿನ್ಯುವಾಚ

ಶ್ರುತಂ ಪುಷ್ಕರಮಾಹಾತ್ಮ್ಯಂ ವಸೋ ಪಾಪಪ್ರಣಾಶನಂ ।
ಗೌತಮಾಶ್ರಮಮಾಹಾತ್ಮ್ಯಮಧುನಾ ಕೀರ್ತಯ ಪ್ರಭೋ ॥ ೧ ॥

ವಸುರುವಾಚ

ಶೃಣು ದೇವಿ ಪ್ರವಕ್ಷ್ಯಾಮಿ ಗೌತಮಾಶ್ರಮಮುತ್ತಮಂ ।
ಯತ್ರ ಗತ್ವಾ ನರೋ ಭಕ್ತ್ಯಾ ನ ಭೂಯೋಽರ್ಹತಿ ಯಾತನಾಃ ॥ ೨ ॥

ಗೌತಮಸ್ಯಾಶ್ರಮಂ ಪುಣ್ಯಂ ದೇವರ್ಷಿಗಣಸೇವಿತಂ ।
ಸರ್ವಪಾಪಪ್ರಶಮನಂ ಸರ್ವೋಪದ್ರವಶಾಂತಿದಂ ॥ ೩ ॥

---

## ಎಪ್ಪತ್ತೆರಡನೆಯ ಅಧ್ಯಾಯ

೧. ವಸುವೇ! ಪಾಪಪರಿಹಾರಕವಾದ ಪುಷ್ಕರಮಾಹಾತ್ಮ್ಯೆಯನ್ನು ಕೇಳಿದೆನು. ಸ್ವಾಮೀ! ಈಗ ಗೌತಮಾಶ್ರಮ ಮಾಹಾತ್ಮ್ಯೆಯನ್ನು ಹೇಳಬೇಕು ಎಂಬುದಾಗಿ ಮೋಹಿನಿಯು ವಸುವನ್ನು ಕೇಳಿದಳು.

೨. ವಸುವು ಹೇಳಿದನು :—ದೇವೀ! ಉತ್ತಮವಾದ ಗೌತಮಾಶ್ರಮ ಮಹಿಮೆಯನ್ನು ಹೇಳುವೆನು ; ಕೇಳು. ಆ ಆಶ್ರಮಕ್ಕೆ ಹೋದ ಮನುಷ್ಯನು ಪುನಃ ಕಷ್ಟಕ್ಕೀಡಾಗವುದಿಲ್ಲ.

೩-೪. ಪುಣ್ಯಕರವಾದ, ದೇವತೆ ಮತ್ತು ಋಷಿಗಣಗಳಿಂದ ಸೇವಿಸಲ್ಪಡುತ್ತಿರುವ, ಸಕಲ ಪಾಪಪರಿಹಾರಕವಾದ, ಸಕಲೋಪದ್ರವಗಳನ್ನೂ ಶಮನಮಾ

ಸೇವತೇ ದ್ವಾದಶಾಬ್ದಂ ಯೋ ಭಕ್ತಿಭಾವಸಮನ್ವಿತಃ ।
ಸ ಶೈವಂ ಲಭತೇ ಧಾಮ ಯತ್ರ ಗತ್ವಾ ನ ಶೋಚತಿ ॥ ४ ॥

ಮಾಯಾದೇವೀಸುತೋ ಯತ್ರ ತಪಸ್ಯುಗ್ರೇ ಸಮಾಸ್ಥಿತಃ ।
ತತ್ರ ಗೋದಾವರೀ ಗಂಗಾ ಸರ್ವಪಾತಕನಾಶಿನೀ ॥ ೫ ॥

ತಪಸ್ಯತೋ ಮುನೇಸ್ತಸ್ಯ ದ್ವಾದಶಾಬ್ದಮವರ್ಷಣಂ ।
ಬಭೂವ ಘೋರಂ ವಿಧಿಜೇ ಸರ್ವಸತ್ವಕ್ಷಯಂಕರಂ ॥ ೬ ॥

ತಸ್ಮಿನ್ನುಗ್ರೇ ತು ದುರ್ಭಿಕ್ಷೇ ಕ್ಷುತ್‌ಕ್ಷಾಮಾ ಮುನಯೋಽಖಿಲಾಃ ।
ನಾನಾದೇಶೇಭ್ಯ ಆಯಾತಾ ಗೌತಮಸ್ಯಾಶ್ರಮಂ ಶುಭೇ ॥ ೭ ॥

ಚಕ್ರುರ್ವಿಜ್ಞಾಪನಂ ತಸ್ಯ ಗೌತಮಸ್ಯ ತಪಸ್ಯತಃ ।
ದೇಹಿ ನೋ ಭೋಜನಂ ಯೇನ ಪ್ರಾಣಾಸ್ತಿಷ್ಠಂತಿ ವರ್ಷ್ಮಸು ॥ ೮ ॥

---

ಡುವ ಗೌತಮಾಶ್ರಮವನ್ನು ಹನ್ನೆರಡು ವರ್ಷಗಳಕಾಲ ಭಕ್ತಿಭಾವಯುಕ್ತನಾಗಿ ಸೇವಿಸುವ ಮನುಷ್ಯನು ಶೋಕಸಂಪರ್ಕವಿಲ್ಲದ ಶೈವಸ್ಥಾನವನ್ನು ಹೊಂದುವನು.

೫. ಅಲ್ಲಿ ಬುದ್ಧನು ಘೋರತಪಸ್ಸಿನಲ್ಲಿ ತೊಡಗಿರುವನು. ಅಲ್ಲಿಯೇ ಸಕಲ ಪಾಪನಾಶಕವಾದ ವೃದ್ಧಗಂಗೆಯೆನಿಸಿದ ಗೋದಾವರೀ ನದಿಯಿದೆ.

೬. ವಿಧಿಜಾತೇ! ಆ ಗೌತಮಮುನಿಯು ತಪಸ್ಸುಮಾಡುತ್ತಿರುವಾಗ ಸಕಲಪ್ರಾಣಿಗಳನ್ನೂ ನಾಶಮಾಡುವಂತಹ ಹನ್ನೆರಡು ವರ್ಷಗಳಕಾಲ ಭಯಂಕರವಾದ ಅನಾವೃಷ್ಟಿಯು ಸಂಭವಿಸಿತು.

೭. ಶೋಭನೇ! ಅಂತಹ ಘೋರಕ್ಷಾಮಗಾಲದಲ್ಲಿ ಮುನಿಗಳೆಲ್ಲರೂ ಹಸಿವಿನಿಂದ ಪೀಡಿತರಾಗಿ ನಾನಾದೇಶಗಳಿಂದ ಗೌತಮಾಶ್ರಮಕ್ಕೆ ಬಂದರು.

೮. ಅಲ್ಲಿ ತಪೋನಿರತರಾಗಿದ್ದ ಗೌತಮರ ಸನ್ನಿಧಿಯಲ್ಲಿ ಅವರೆಲ್ಲರೂ "ಹಸಿವಿನಿಂದ ನಮ್ಮ ಪ್ರಾಣಗಳು ಹೋಗುವಂತಿವೆ. ಪ್ರಾಣವುಳಿಸಿಕೊಳ್ಳುವುದಕ್ಕೆ ಅನುಕೂಲವಾಗುವಷ್ಟು ನಮಗೆ ಆಹಾರವನ್ನು ಕೊಡಬೇಕು" ಎಂಬುದಾಗಿ ವಿಜ್ಞಾಪನೆ ಮಾಡಿದರು.

ಏವಂ ವಿಜ್ಞಾಪಿತಸ್ತೈಸ್ತು ಮುನಿಭಿರ್ಗೌತಮೋ ಮುನಿಃ ।
ಜಾತಾನುಕಂಪಸ್ತಾನಾಹ ವಿಶ್ವಸ್ತಾಂಸ್ತಪಸೋ ಬಲಾತ್ ॥ ೯ ॥

ಗೌತಮ ಉವಾಚ

ತಿಷ್ಠಧ್ವಂ ಮುನಯಃ ಸರ್ವೇ ಮಮಾಶ್ರಮಸಮೀಪತಃ ।
ಭೋಜನಂ ವಃ ಪ್ರದಾಸ್ಯಾಮಿ ಯಾವದ್ದುರ್ಭಿಕ್ಷಮಾದೃತಾಃ ॥ ೧೦ ॥

ವಿಶ್ವಾಸ್ಯೈವಮೃಷೀನ್ ಸರ್ವಾನ್ ಗೌತಮಸ್ತಪಸೋ ಬಲಾತ್ ।
ದಧ್ಯೌ ಪ್ರಸನ್ನಮನಸಾ ಗಂಗಾಂ ಸರ್ವಾರ್ಥಸಾಧಿನೀಂ ॥ ೧೧ ॥

ಸ್ಮೃತಮಾತ್ರಾ ತು ಸಾ ದೇವೀ ತತ್ರೋದ್ಭೂತಾ ಧರಾತಲಾತ್ ।
ತಾಂ ತು ದೃಷ್ಟ್ವಾ ಮುನಿರ್ಗಂಗಾಂ ಸಂಪ್ಲಾವಿತಧರಾತಲಾಂ ॥ ೧೨ ॥

---

೯. ಮುನಿಗಳು ಆ ವಿಜ್ಞಾಪನೆಯನ್ನು ಲಾಲಿಸಿ ಗೌತಮರು ಅವರಲ್ಲಿ ದಯೆಮಾಡಿದವರಾಗಿ ತಮ್ಮನ್ನು ನಂಬಿ ಬಂದ ಆ ಋಷಿಗಳನ್ನು ಕುರಿತು ಹೀಗೆ ಹೇಳಿದರು.

೧೦. ಮುನಿಗಳಿರಾ! ನೀವೆಲ್ಲರೂ ನಮ್ಮಾಶ್ರಮದಲ್ಲಿಯೇ ನಿಲ್ಲಿರಿ! ಈ ದುರ್ಭಿಕ್ಷವು ಹೋಗುವವರೆಗೂ ನಿಮಗೆ ಆದರದಿಂದ ಭೋಜನವನ್ನು ಮಾಡಿಸುವೆನು!

೧೧. ಈ ರೀತಿಯಾಗಿ ಗೌತಮಮುನಿಯು ಸಕಲಋಷಿಗಳನ್ನೂ ಸಮಾಧಾನಮಾಡಿ ಪ್ರಶಾಂತಚಿತ್ತನಾಗಿ ತನ್ನ ತಪೋಬಲದಿಂದ ಸರ್ವಾರ್ಥಸಾಧಕವಾದ ಗಂಗೆಯನ್ನು ಧ್ಯಾನಿಸಿದನು.

೧೨-೧೩. ಗೌತಮಮುನಿಯು ಸ್ಮರಿಸಿದಕೂಡಲೇ ಆ ಗಂಗಾದೇವಿಯು ಅಲ್ಲಿಯೇ ಭೂಮಿಯಿಂದ ಉದ್ಭವಿಸಿದಳು. ಮುನಿಯು ಹೀಗೆ ಉದ್ಭವಿಸಿ ಭೂತಲದಲ್ಲಿ ಹರಿಯಲಾರಂಭಿಸಿದ ಆ ಗಂಗೆಯನ್ನು ನೋಡಿ ಬೆಳಗ್ಗೆ ಭೂಮಿಯಲ್ಲಿ ಬೀಜ

ಪ್ರಾತರುಪ್ತ್ವಾ ಕ್ಷಿತೌ ಶಾಲೀನ್ ಪಕ್ವಾನ್ಮಧ್ಯಾಹ್ನಕೇವಲಾನ್ |
ಶಾಲ್ಯನ್ನೇನ ತತಸ್ತೇನ ತಾನೃಷೀನ್ ಸಮಭೋಜಯತ್ || ೧೩ ||

ತತಸ್ತೇ ಮುನಯಃ ಪ್ರೀತಾ ಭುಕ್ತ್ವಾನ್ನಂ ತೃಪ್ತಿಮಾಗತಾಃ |
ನಿವಾಸಂ ಚಕ್ರಿರೇ ತತ್ರ ಗೌತಮಾಶ್ರಮಕೇ ಮುದಾ || ೧೪ ||

ಏವಂ ಪ್ರತಿದಿನಂ ಭದ್ರೇ ಶಾಲಿಭಿಃ ಪಕ್ವತಾಂ ಗತೈಃ |
ಆತಿಥ್ಯಂ ವಿದಧೇ ತೇಷಾಂ ಭಕ್ತಿಭಾವಸಮನ್ವಿತಃ || ೧೫ ||

ಸತಸ್ತಸ್ಯ ಮುನೀಂದ್ರಸ್ಯ ದ್ವಿಜಾನ್ ಭೋಜಯತೋಽನ್ವಹಂ |
ವ್ಯತೀಯಾಯ ಚ ದುರ್ಭಿಕ್ಷಂ ದ್ವಾದಶಾಬ್ದಾಂತಕಾಲತಃ || ೧೬ ||

ತತಸ್ತೇ ಮುನಯಃ ಸರ್ವೇ ಸುಭಿಕ್ಷೇ ಕಾಲ ಆಗತೇ |
ವಿಜ್ಞಾಪ್ಯ ತಂ ಮುನಿಶ್ರೇಷ್ಠಂ ಜಗ್ಮುರ್ದೇಶಾನ್ ಸ್ವಕಾನ್ ಪುನಃ || ೧೭ ||

---

ವನ್ನು ನಟ್ಟು ತಪಶ್ಶಕ್ತಿಯಿಂದ ಮಧ್ಯಾಹ್ನದೊಳಗೆ ಬತ್ತವನ್ನು ಬೆಳೆಯಿಸಿ ಅದರ ಅಕ್ಕಿಯಿಂದ ಅನ್ನಮಾಡಿ ಆ ಋಷಿಗಳಿಗೆ ಭೋಜನ ಮಾಡಿಸಿದನು.

೧೪. ಆ ಭೋಜನದಿಂದ ಆ ಮುನಿಗಳು ಸಂತೋಷಪಟ್ಟು ಅನ್ನವನ್ನು ಭೋಜನಮಾಡಿ ತೃಪ್ತಿಹೊಂದಿದರು. ಆಮೇಲೆ ಸಂತೋಷವಾಗಿ ಗೌತಮಾಶ್ರಮದಲ್ಲಿ ವಾಸಮಾಡುತ್ತಿದ್ದರು.

೧೫. ಭದ್ರೆ! ಈರೀತಿಯಾಗಿ ಗೌತಮಮುನಿಯು ಭಕ್ತಿಭಾವಯುಕ್ತನಾಗಿ ಪ್ರತಿದಿನವೂ ಪಕ್ವವಾದ ಶಾಲ್ಯನ್ನದಿಂದ ಅವರಿಗೆ ಆತಿಥ್ಯವನ್ನು ನಡೆಯಿಸುತ್ತಿದ್ದನು.

೧೬. ಹಾಗೆಯೇ ಮುನೀಂದ್ರನು ಪ್ರತಿದಿನವೂ ಮುನಿಗಳಿಗೆ ಭೋಜನ ಮಾಡಿಸುತ್ತ ಹನ್ನೆರಡುವರ್ಷಗಳ ಕಾಲವನ್ನು ಕಳೆದನು. ಆಮೇಲೆ ದುರ್ಭಿಕ್ಷವು ಹೋಗಿ ದೇಶದಲ್ಲಿ ಸುಭಿಕ್ಷವುಂಟಾಯಿತು.

೧೭. ತರುವಾಯ ಸುಭಿಕ್ಷಕಾಲವು ಬರಲಾಗಿ ಆ ಮುನಿಗಳೆಲ್ಲರೂ ಆ ಮುನಿಶ್ರೇಷ್ಠನಿಗೆ ವಿಜ್ಞಾಪಿಸಿ ತಮ್ಮ ತಮ್ಮ ದೇಶಕ್ಕೆ ತೆರಳಿದರು.

ಏವಂ ಪ್ರಭಾವಃ ಸ ಮುನಿರ್ಗೌತಮಸ್ತತ್ರ ಮೋಹಿನಿ ।
ತಪಸ್ತೇಪೇ ಬಹುತಿಥಂ ಕಾಲಂ ನಿಯಮಿತೇಂದ್ರಿಯಃ ॥ ೧೮ ॥

ತತಸ್ತತ್ತಪಸಾ ತುಷ್ಟೋ ಭಗವಾನಂಬಿಕಾಪತಿಃ ।
ಸಗಣೋ ದರ್ಶನಂ ಯಾತೋ ವರಂ ಬ್ರೂಹೀತ್ಯುವಾಚ ಹ ॥ ೧೯ ॥

ತತೋ ಮುನಿವರೋ ದೃಷ್ಟ್ವಾ ದೇವದೇವಮುಮಾಪತಿಂ ।
ತ್ರ್ಯಂಬಕಂ ಸ ನಮಶ್ಚಕ್ರೇ ನಿಪತ್ಯ ಭುವಿ ತತ್ಪುರಃ ॥ ೨೦ ॥

ತತ ಉತ್ಥಾಯ ಸಹಸಾ ಕೃತಾಂಜಲಿರುಪಸ್ಥಿತಃ ।
ಪ್ರೋವಾಚ ದೇಹಿ ಮೇ ಭಕ್ತಿಂ ಪಾದಯೋಸ್ತವ ನಿತ್ಯದಾ ॥ ೨೧ ॥

ಮಮಾಶ್ರಮಸಮೀಪೇತ್ರ ಪರ್ವತೋಪರಿ ಶಂಕರ ।
ತ್ವಾಮೇವಂ ಸಂಸ್ಥಿತಂ ಪಶ್ಯಾಮ್ಯೇಷ ಏವ ವರೋ ಮಮ ॥ ೨೨ ॥

---

೧೮. ಮೋಹಿನೀ! ಈವಿಧ ಸಾಮರ್ಥ್ಯವುಳ್ಳ ಆ ಗೌತಮಮುನಿಯು ಜಿತೇಂದ್ರಿಯನಾಗಿ ಅಲ್ಲಿ ಬಹುಕಾಲ ತಪಸ್ಸುಮಾಡುತ್ತಿದ್ದನು.

೧೯. ಬಳಿಕ ಆ ತಪಸ್ಸಿಗೆ ಮೆಚ್ಚಿ ಅಂಬಿಕಾಪತಿಯಾದ ಭಗವಂತನು ತನ್ನ ಪರಿವಾರಗಣಸಹಿತವಾಗಿ ಬಂದು ಗೌತಮಮುನಿಗೆ ದರ್ಶನಕೊಟ್ಟು "ನಾನು ಪ್ರಸನ್ನನಾಗಿರುವೆನು ವರವನ್ನು ಕೇಳು" ಎಂದು ಹೇಳಿದನು.

೨೦. ತರುವಾಯ ಮುನಿವರನು ದೇವದೇವನು, ಪಾರ್ವತೀಪತಿಯು ಆದ ತ್ರ್ಯಂಬಕದೇವನನ್ನು ನೋಡಿ ಅವನ ಇದಿರಿಗೆ ನೆಲದಮೇಲೆ ಸಾಷ್ಟಾಂಗ ನಮಸ್ಕಾರಮಾಡಿದನು.

೨೧. ಬಳಿಕ ಮೇಲಕ್ಕೆದ್ದು ಕೈಮುಗಿದು ನಿಂತು "ದೇವಾ! ಯಾವಾಗಲೂ ನಿನ್ನ ಪಾದಗಳಲ್ಲಿ ಭಕ್ತಿಯು ಅವಿಚ್ಛಿನ್ನವಾಗಿರುವಂತೆ ಅನುಗ್ರಹಿಸು" ಎಂಬುದಾಗಿ ಪ್ರಾರ್ಥನೆ ಮಾಡಿದನು.

೨೨. ಶಂಕರಸ್ವಾಮಿಯೇ! ನಮ್ಮ ಆಶ್ರಮಸಮೀಪದಲ್ಲಿರುವ ಈ ಪರ್ವತದಮೇಲೆ ಈಗ ನೀನಿರುವರೂಪದಿಂದಲೇ ಸನ್ನಿಹಿತನಾಗಿರುವುದನ್ನು ನಾನು ನೋಡಬೇಕು. ಇದೇ ನಾನು ಪ್ರಾರ್ಥಿಸುವ ವರವು ಎಂದು ಹೇಳಿದನು.

ಇತ್ಯುಕ್ತಃ ಪಾರ್ವತೀನಾಥೋ ಭಕ್ತಾನಾಂ ವಾಂಛಿತಪ್ರದಃ ।
ತತ್ರ ದತ್ವಾ ಸ್ವಸಾನ್ನಿಧ್ಯಂ ಸದ್ಯಃ ಪ್ರೀತಂ ಚಕಾರ ತಂ ॥ ೨೩ ॥

ತೇನ ರೂಪೇಣ ತತ್ರೈವ ನ್ಯವಸತ್ತ್ರ್ಯಂಬಕಃ ಸತಿ ।
ಸ ಗಿರಿಸ್ತ್ರ್ಯಂಬಕಾಖ್ಯಸ್ತು ತತಃ ಪ್ರಭೃತಿ ಕೀರ್ತ್ಯತೇ ॥ ೨೪ ॥

ಯೇ ತು ಗೋದಾವರೀಂ ಗಂಗಾಂ ಪ್ರಾಪ್ಯ ಭಕ್ತಿಯುತಾ ನರಾಃ ।
ಸ್ನಾನಂ ಕುರ್ವಂತಿ ಸುಭಗೇ ತೇ ಸ್ಯುರ್ಮುಕ್ತಾ ಭವಾರ್ಣವಾತ್ ॥ ೨೫ ॥

ಸ್ನಾತ್ವಾ ಗೋದಾವರೀತೋಯೇ ತ್ರ್ಯಂಬಕಂ ಯೇ ಗಿರಿಸ್ಥಿತಂ ।
ಉಪಚಾರೈಃ ಪೂಜಯಂತಿ ತೇ ಸ್ಯುಃ ಸಾಕ್ಷಾನ್ಮಹೇಶ್ವರಾಃ ॥ ೨೬ ॥

ತ್ರ್ಯಂಬಕಸ್ಯ ತು ಮಾಹಾತ್ಮ್ಯಂ ಸಂಕ್ಷೇಪಾದ್ವರ್ಣಿತಂ ಮಯಾ ।
ಬ್ರಹ್ಮಾಪಿ ವಿಸ್ತರಾದ್ವಕ್ತುಂ ತವ ತಾತಃ ಕ್ಷಮೋ ನ ಹಿ ॥ ೨೭ ॥

---

೨೩. ಭಕ್ತರ ಇಷ್ಟಾರ್ಥದಾಯಕನಾದ ಪಾರ್ವತೀನಾಥನು ಮುನಿವರನ ಪ್ರಾರ್ಥನೆಯನ್ನು ಲಾಲಿಸಿ ಆ ಪರ್ವತದಲ್ಲಿ ಕೂಡಲೇ ತನ್ನ ಸಾನ್ನಿಧ್ಯವನ್ನಿಟ್ಟು ಅವನನ್ನು ಸಂತೋಷಪಡಿಸಿದನು.

೨೪. ಸಾಧ್ವಿಯೇ ! ತ್ರ್ಯಂಬಕೇಶ್ವರನು ಆ ರೂಪದಿಂದಲೇ ಅಲ್ಲಿ ವಾಸಿಸಿದನು. ಆಗಿನಿಂದ ಆ ಪರ್ವತವು ತ್ರ್ಯಂಬಕಾದ್ರಿ ಎಂಬ ನಾಮಧೇಯದಿಂದ ಪ್ರಸಿದ್ಧವಾಯಿತು.

೨೫. ಸುಂದರೀ ! ಗೋದಾವರಿ ಮತ್ತು ಗಂಗಾನದಿಗಳಿಗೆ ಹೋಗಿ ಭಕ್ತಿಯಿಂದ ಸ್ನಾನಮಾಡುವ ಮನುಷ್ಯರು ಸಂಸಾರಸಾಗರದಿಂದ ಬಿಡುಗಡೆಯನ್ನು ಹೊಂದಿ ಮುಕ್ತರಾಗುವರು

೨೬. ಗೋದಾವರೀ ಜಲದಲ್ಲಿ ಸ್ನಾನಮಾಡಿ ಪರ್ವತದ ಮೇಲಿರುವ ತ್ರ್ಯಂಬಕಸ್ವಾಮಿಯನ್ನು ಉಪಚಾರಗಳಿಂದ ಪೂಜಿಸುವ ಮನುಜರು ಸಾಕ್ಷಾನ್ಮಹೇಶ್ವರನ ಸಾರೂಪ್ಯವನ್ನು ಹೊಂದುವರು.

೨೭. ಮೋಹಿನೀ ! ತ್ರ್ಯಂಬಕನ ಮಹಿಮೆಯನ್ನು ಸಂಕ್ಷೇಪವಾಗಿ ನಿನಗೆ ಹೇಳಿರುವೆನು. ಅವನ ಮಹಿಮೆಯು ಅಪಾರವಾದುದು. ಅದನ್ನು ವಿಸ್ತಾರವಾಗಿ ಹೇಳಲು ನಿನ್ನ ತಂದೆಯಾದ ಬ್ರಹ್ಮನೂ ಸಹ ಸಮರ್ಥನಲ್ಲ.

ತತೋ ಗೋದಾವರೀ ಯಾವತ್ಸಾಕ್ಷಾದ್ದರ್ಶನತಾಂ ಗತಾ ।
ತಾವದಸ್ಯಾಶ್ರಮಾಃ ಪುಣ್ಯಾಸ್ತತ್ರ ಸಂತಿ ಹ್ಯನೇಕಶಃ ॥ ೨೮ ॥

ತೇಷು ಸ್ನಾತ್ವಾ ವಿಧಾನೇನ ಸಂತರ್ಪ್ಯ ಪಿತೃದೇವತಾಃ ।
ನರೋಽಭಿಲಷಿತಾನ್ಕಾಮಾನ್ ಪ್ರಾಪ್ನುಯಾನ್ನಾತ್ರ ಸಂಶಯಃ ॥ ೨೯ ॥

ಪ್ರಕಾಶಾ ತು ಕ್ವಚಿದ್ಭದ್ರೇ ಕ್ವಚಿದ್ಗುಪ್ತಾ ತತಃ ಪರಂ ।
ಪ್ಲಾವಯಾಮಾಸ ಧರಣೀಂ ಪುಣ್ಯಾ ಗೋದಾವರೀ ನದೀ ॥ ೩೦ ॥

ಯತ್ರ ಪ್ರಕಟತಾಂ ಯಾತಾ ನೃಣಾಂ ಭಕ್ತ್ಯಾ ಮಹೇಶ್ವರಿ ।
ತತ್ರ ತೀರ್ಥಂ ಮಹತ್ಪುಣ್ಯಂ ಸ್ನಾನಮಾತ್ರಾದಘಾಪಹಂ ॥ ೩೧ ॥

ತತಃ ಪಂಚವಟೀಂ ಪ್ರಾಪ್ಯ ಸಾ ದೇವೀ ನಿಯತವ್ರತಾ ।
ಸುಪ್ರಕಾಶಮನುಪ್ರಾಪ್ತಾ ಲೋಕಾನಾಂ ಗತಿದಾಯಿನೀ ॥ ೩೨ ॥

---

೨೮. ಅಲ್ಲಿಂದ ಗೋದಾವರಿಯು ಕಾಣಿಸುವವರೆಗೂ ಅನೇಕ ಆಶ್ರಮಗಳಿವೆ. ಅವುಗಳೆಲ್ಲವೂ ಅತ್ಯಂತ ಪುಣ್ಯಕರಗಳು.

೨೯. ಅವುಗಳಲ್ಲಿ ಸ್ನಾನಮಾಡಿ ವಿಧಿವತ್ತಾಗಿ ಪಿತೃದೇವತೆಗಳಿಗೆ ತರ್ಪಣಮಾಡುವ ಮನುಷ್ಯನು ಇಷ್ಟಾರ್ಥಗಳೆಲ್ಲವನ್ನೂ ಪಡೆಯುವನು. ಸಂದೇಹವಿಲ್ಲ.

೩೦. ಮಂಗಳಾಂಗಿಯೇ ! ಪುಣ್ಯಕರವಾದ ಗೋದಾವರೀನದಿಯು ಕೆಲವೆಡೆಗಳಲ್ಲಿ ಪ್ರಕಾಶವಾಗಿಯೂ ಇನ್ನು ಕೆಲವೆಡೆಗಳಲ್ಲಿ ಗುಪ್ತವಾಗಿಯೂ ಭೂಮಿಯನ್ನು ಪಾವನಮಾಡುತ್ತಿರುವುದು.

೩೧. ಮಹೇಶ್ವರಿಯೇ ! ಗೋದಾವರೀನದಿಯು ಪ್ರಕಟವಾಗಿ ಹರಿಯುವ ಸ್ಥಳವು ಮಹಾಪುಣ್ಯಕರವಾದ ತೀರ್ಥವು. ಅದರಲ್ಲಿ ಸ್ನಾನಮಾಡುವ ಮಾತ್ರದಿಂದ ಪಾಪಪರಿಹಾರವಾಗುವುದು.

೩೨. ಆ ಗೋದಾವರೀದೇವಿಯು ಪಂಚವಟೀಕ್ಷೇತ್ರಕ್ಕೆ ಬಂದು ವ್ರತವನ್ನು ಕೈಗೊಂಡು ಬಹಿರಂಗವಾಗಿ ವ್ಯಕ್ತಳಾಗಿ ಲೋಕಗಳಿಗೆಲ್ಲಾ ಸದ್ಗತಿದಾಯಕಳಾಗಿರುವಳು.

ಗೋದಾವರ್ಯಾಂ ಪಂಚವಟ್ಯಾಂ ಯಃ ಸ್ನಾಯಾನ್ನಿಯತವ್ರತಃ ।
ಸ ಸರ್ವಾಃ ಪ್ರಾಪ್ನುಯಾತ್ಕಾಮಾನಭೀಷ್ಟಾನ್ ವಿಧಿನಂದಿನಿ ॥ ೩೩ ॥

ಯದಾ ತ್ರೇತಾಯುಗೇ ರಾಮಃ ಪಂಚವಟ್ಯಾಮುಪಾಗತಃ ।
ಸಭಾರ್ಯಸ್ಸಾನುಜಸ್ತತ್ರ ವಸನ್ಪುಣ್ಯತರಾಂ ವ್ಯಧಾತ್ ॥ ೩೪ ॥

ಇತ್ಯೇತತ್ಸರ್ವಮಾಖ್ಯಾತಂ ಗೌತಮಾಶ್ರಮಜಂ ಶುಭೇ ।
ಶೃಣ್ವತಾಂ ಪಠತಾಂ ಪುಣ್ಯಂ ಪಾಪಘ್ನಂ ವಾಂಛಿತಪ್ರದಂ ॥ ೩೫ ॥

ಇತಿ ಶ್ರೀನಾರದೀಯಮಹಾಪುರಾಣೋತ್ತರಭಾಗೇ ವಸುಮೋಹಿನೀ ಸಂವಾದೇ ಗೌತಮಾಶ್ರಮಮಾಹಾತ್ಮ್ಯೇ ಗೌತಮತಪಸ್ಯಯೋಃ ಪ್ರಭಾವವರ್ಣನಂ ನಾಮ ದ್ವಾಸಪ್ತತಿತಮೋಽಧ್ಯಾಯಃ

---

೩೩. ಬ್ರಹ್ಮಕುಮಾರಿಯೇ! ಪಂಚವಟೀಕ್ಷೇತ್ರದಲ್ಲಿ ಗೋದಾವರೀ ನದಿಯಲ್ಲಿ ಸ್ನಾನಮಾಡಿ ವ್ರತಪರನಾಗುವ ಮನುಷ್ಯನು ಅಪೇಕ್ಷಿತವಾದ ಫಲಗಳೆಲ್ಲವನ್ನೂ ಪಡೆಯುವನು.

೩೪. ತ್ರೇತಾಯುಗದಲ್ಲಿ ಶ್ರೀರಾಮನು ಪತ್ನಿಯಾದ ಸೀತಾದೇವಿ, ತಮ್ಮನಾದ ಲಕ್ಷ್ಮಣ ಇವರೊಡನೆ ಪಂಚವಟೀಕ್ಷೇತ್ರಕ್ಕೆಬಂದು ಅಲ್ಲಿ ವಾಸಮಾಡಿ ಅದನ್ನು ಅತ್ಯಂತಪುಣ್ಯಕರವನ್ನಾಗಿ ಮಾಡಿದನು.

೩೫. ಶೋಭನೇ! ಗೌತಮಾಶ್ರಮ ಮಾಹಾತ್ಮ್ಯೆಯೆಲ್ಲವನ್ನೂ ಸಂಪೂರ್ಣವಾಗಿ ನಿನಗೆ ಹೇಳಿರುವೆನು. ಇದನ್ನು ಶ್ರವಣ, ಪಠನೆ ಮಾಡುವವರಿಗೆ ಪಾಪಪರಿಹಾರವಾಗಿ ಪುಣ್ಯವು ಲಭಿಸುತ್ತದೆ. ಮತ್ತು ಇದು ಇಷ್ಟಾರ್ಥದಾಯಕವೂ ಆಗಿದೆ!

ಇಂತು ಶ್ರೀನಾರದೀಯಪುರಾಣೋತ್ತರಭಾಗದಲ್ಲಿ ವಸು ಮೋಹಿನೀ ಸಂವಾದ ದೊಳು ಗೌತಮಾಶ್ರಮ ಮಾಹಾತ್ಮ್ಯೆಯ ಪ್ರಕರಣದಲ್ಲಿ ಗೌತಮ ಮುನಿಯ ತಪಸ್ಸಿನ ಪ್ರಭಾವವರ್ಣನೆಯೆಂಬ ಎಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.



# ತ್ರಿಸಪ್ತತಿತಮೋಽಧ್ಯಾಯಃ

## ಅಥ ತ್ರ್ಯಂಬಕಮಾಹಾತ್ಮ್ಯಂ ಪ್ರಾರಭ್ಯತೇ

ಮೋಹಿನ್ಯುವಾಚ

ಶ್ರುತಂ ಗುರೋ ತ್ವಯಾ ಪ್ರೋಕ್ತಂ ಪುಣ್ಯಾಖ್ಯಾನಂ ಚ ಗೌತಮಂ ।
ತ್ರ್ಯಂಬಕಸ್ಯ ಚ ಮಾಹಾತ್ಮ್ಯಂ ಗೋದಾಪಂಚವಟೀಭವಂ ॥ ೧ ॥

ಅಧುನಾ ಶ್ರೋತುಮಿಚ್ಛಾಮಿ ಪುಂಡರೀಕಪುರೋದ್ಭವಂ ।
ಯಥಾ ತತ್ರ ಮಹಾದೇವಸ್ತಾಂಡವಂ ನೃತ್ಯಮಾಚರತ್ ॥ ೨ ॥

ತಥಾ ವದ ಮಹೀದೇವ ಪುಣ್ಯಾತ್ಪುಣ್ಯತರಂ ಮಮ ।

ವಸುರುವಾಚ

ಭಕ್ತವಶ್ಯೋ ಮಹಾದೇವಃ ಸದ್ಯೋ ವರದ ಏವ ಚ ॥ ೩ ॥

---

## ಎಪ್ಪತ್ತಮೂರನೆಯ ಅಧ್ಯಾಯ

೧-೨. ಮೋಹಿನಿಯು ಹೇಳಿದಳು :—ಗುರುಗಳೇ ! ತಾವು ಹೇಳಿದ ಪುಣ್ಯಕರವಾದ ಗೌತಮಾಶ್ರಮ ಮಾಹಾತ್ಮ್ಯೆಯನ್ನು ಕೇಳಿದೆನು. ಗೋದಾಪಂಚ ವಟೀಕ್ಷೇತ್ರದಲ್ಲಿರುವ ಪುಂಡರೀಕಪುರದ ಮಾಹಾತ್ಮ್ಯೆಯನ್ನು ಈಗ ಕೇಳ ಬಯಸುವೆನು.

೨-೩. ಬ್ರಾಹ್ಮಣನೇ ! ಆ ಕ್ಷೇತ್ರದಲ್ಲಿ ಮಹಾದೇವನು ತಾಂಡವನೃತ್ಯ. ವನ್ನು ಹೇಗೆ ಆಚರಿಸಿದನು ? ಅದನ್ನು ಕೇಳುವುದು ಅತ್ಯಂತ ಪುಣ್ಯಕರವು. ಅದನ್ನೂ ನನಗೆ ಹೇಳು.

೩-೪. ವಸುವು ಹೇಳಿದನು :—ಭಕ್ತಪರಾಧೀನನೂ, ಕ್ಷಿಪ್ರವರದಾಯಿ ಕನೂ ಆದ ಮಹಾದೇವನು ಭಕ್ತರಿಗೆ ಪ್ರತ್ಯಕ್ಷನಾಗುವನು. ಮತ್ತು ಅವನ ಇಚ್ಛಾನುಸಾರವಾಗಿ ನರ್ತನಾದಿಗಳನ್ನೂ ಸಹ ಮಾಡುವನು.

ಪ್ರಾಕಟ್ಯಂ ಯಾತಿ ಭಕ್ತಾನಾಂ ಕರೋತಿ ಚ ತದಿಚ್ಛಯಾ |
ಏಕದಾ ಜೈಮಿನಿರ್ನಾಮ್ನಾ ವ್ಯಾಸಶಿಷ್ಯೋ ಮುನೀಶ್ವರಃ ॥ ೪ ॥

ಅಗ್ನಿಕೇಶಾದಿಭಿಃ ಶಿಷ್ಯೈಃ ಸಾರ್ಧಂ ತೀರ್ಥಾನ್ಯಟನ್ನಗಾತ್ |
ಪುಂಡರೀಕಪುರಂ ಸಾಕ್ಷಾದ್ದೇವರಾಜಪುರೋಪಮಂ ॥ ೫ ॥

ಸರ್ವತೋಽಲಂಕೃತಂ ಶ್ರೀಮತ್ಸರ್ವರ್ತುಕುಸುಮದ್ರುಮೈಃ |
ಶೋಭಿತಂ ಶೀತಲಚ್ಛಾಯೈಃ ಶುಭ್ರವಾರಿಜಲಾಶಯೈಃ ॥ ೬ ॥

ನಾನಾವಯಃಕುಲಾಕೀರ್ಣೈಃ ಸುರಮ್ಯೈಃ ಕಮಲಾಕರೈಃ |
ನಾರೀಭಿರಪ್ಸರೋಭಿಶ್ಚ ನೃಭಿರ್ವಿದ್ಯಾಧರದ್ಯುಭಿಃ ॥ ೭ ॥

ವಿಲಸದ್ಭವನೈಃ ಶುಭ್ರೈರ್ವಿಮಾನಮಿವ ರಾಜತೇ |
ದೃಷ್ಟ್ವೈವ ಶೋಭಾಂ ಮುನಿಸ್ತಸ್ಯ ಪುರಸ್ಯ ಪ್ರೀತಿಮಾನಭೂತ್ ॥ ೮ ॥

---

೪-೫. ವೇದವ್ಯಾಸರ ಶಿಷ್ಯನಾದ ಜೈಮಿನಿಯೆಂಬ ಮುನೀಶ್ವರನು ಒಂದು ದಿನ ಅಗ್ನಿಕೇಶ ಮುಂತಾದ ಶಿಷ್ಯರ ಸಹಿತನಾಗಿ ತೀರ್ಥಯಾತ್ರೆಗಾಗಿ ಹೊರಟು ಸಾಕ್ಷಾದಿಂದ್ರಪಟ್ಟಣಕ್ಕೆ ಸಮಾನವಾದ ಪುಂಡರೀಕಪುರಕ್ಕೆ ಬಂದನು.

೬. ಆ ಪಟ್ಟಣವು ಎಲ್ಲಾ ಋತುಗಳಲ್ಲಿಯೂ ಬೆಳೆಯುವ ಪುಷ್ಪ ಮತ್ತು ವೃಕ್ಷಗಳಿಂದ ಅಲಂಕೃತವಾಗಿದ್ದಿತು. ಮತ್ತು ಶೀತಲವಾದ ನೆರಳು, ನಿರ್ಮಲೋದಕವುಳ್ಳ ಸರೋವರ ಇವುಗಳಿಂದ ಶೋಭಿಸುತ್ತಿದ್ದಿತು.

೭-೮. ಆ ಸರೋವರಗಳು ನಾನಾವಿಧ ಪಕ್ಷಿಸಂಘಗಳಿಂದ ತುಂಬಿ ಅತ್ಯಂತ ಮನೋಹರವಾಗಿ ಕಾಣುತ್ತಿದ್ದುವು. ಆ ಪಟ್ಟಣದಲ್ಲಿ ಅಪ್ಸರಸ್ತ್ರೀಯರು, ವಿದ್ಯಾಧರರಂತೆ ವಿರಾಜಮಾನರಾದ ಪುರುಷರು ಇವರಿಂದ ಅಲಂಕೃತವಾದ ಶುಭ್ರವಿಮಾನದಂತೆ ಹೊಳೆಯುತ್ತಿರುವ ಮಂದಿರಗಳು ವಿರಾಜಿಸುತ್ತಿದ್ದುವು. ಜೈಮಿನಿಮುನಿಯು ಆ ಪಟ್ಟಣದ ಸೌಂದರ್ಯವನ್ನು ನೋಡಿ ಬಹಳ ಸಂತೋಷಪಟ್ಟನು.

ಭೃಶಂ ನ ಚ ಮನಶ್ಚಕ್ರೇ ಸ್ನಾತುಂ ತತ್ರ ಸರೋವರೇ ।
ಸ್ನಿಗ್ಧಛಾಯೈರ್ದ್ರುಮೈರ್ಯುಕ್ತೇ ನಾನಾಪುಷ್ಪಸುಗಂಧಿತೇ ॥ ೯ ॥

ವಿಶ್ರಮ್ಯ ತರುಛಾಯಾಢ್ಯೇ ತಟೇ ತಸ್ಯ ಕ್ಷಣಂ ಮುನಿಃ ।
ಸ್ನಾತ್ವಾ ನಿತ್ಯಾಃ ಕ್ರಿಯಾಶ್ಚಕ್ರೇ ದೇವರ್ಷಿಪಿತೃತರ್ಪಣಂ ॥ ೧೦ ॥

ನಿರ್ಮಾಯ ಪಾರ್ಥಿವಂ ಲಿಂಗಂ ವಿವಿಧೈರುಪಚಾರಕೈಃ ।
ಪೂಜಯಾಮಾಸ ವಿಧಿವತ್ಪಾದ್ಯಾರ್ಘ್ಯಾದ್ಯೈರನಾಕುಲಃ ॥ ೧೧ ॥

ಗಂಧೈರ್ಧೂಪೈಸ್ತಥಾ ದೀಪೈರ್ನೈವೇದ್ಯೈರ್ವಿವಿಧೈರಪಿ ।
ಪುಷ್ಪೈಃ ಸುಗಂಧಿಭಿಃ ಪ್ರಾರ್ಚ್ಯ ಸ್ಥಿತೋ ಯಾವದಭೂನ್ಮುನಿಃ ॥ ೧೨ ॥

ತಾವತ್ಪ್ರಸನ್ನೋ ಭಗವಾನ್ ಸಾಕ್ಷಾತ್ಕಾರಮುಪಾಗತಃ ।
ತಸ್ಮಿನ್ನೇವ ಚ ಮೃಲ್ಲಿಂಗೇ ನಾನಾರತ್ನಪ್ರಭೋದ್ಗಮೇ ॥ ೧೩ ॥

---

೯. ಆದರೆ ಮುನಿಯು ದಟ್ಟವಾದ ಛಾಯೆಯುಳ್ಳ ವೃಕ್ಷಗಳಿಂದ ಕೂಡಿದ, ನಾನಾವಿಧ ಪುಷ್ಪಗಳ ಸುವಾಸನೆಯಿಂದ ಯುಕ್ತವಾದ ಆ ಸರೋವರದಲ್ಲಿ ಕೂಡಲೇ ಸ್ನಾನಮಾಡಲು ಮನಸ್ಸುಮಾಡಲಿಲ್ಲ.

೧೦. ವೃಕ್ಷಗಳ ನೆಳಲಿನಿಂದ ತುಂಬಿದ ಆ ಸರೋವರದ ದಡದಲ್ಲಿ ಒಂದು ಕ್ಷಣಕಾಲ ಮುನಿಯು ವಿಶ್ರಾಂತಿಯನ್ನು ಹೊಂದಿ ಬಳಿಕ ಸರೋವರದಲ್ಲಿ ಸ್ನಾನಮಾಡಿ ನಿತ್ಯಕರ್ಮಗಳನ್ನೂ ದೇವರ್ಷಿ ಪಿತೃತರ್ಪಣವನ್ನೂ ಸಹ ಮಾಡಿದನು

೧೧. ಬಳಿಕ ಪಾರ್ಥಿವ ಲಿಂಗವನ್ನು ರಚಿಸಿ ಪಾದ್ಯ, ಅರ್ಘ್ಯ ಮುಂತಾದ ನಾನಾವಿಧೋಪಚಾರಗಳನ್ನರ್ಪಿಸಿ ವಿಧಿವತ್ತಾಗಿ ಪೂಜಿಸಿದನು.

೧೨-೧೩. ಗಂಧ, ಧೂಪ, ದೀಪ, ನೈವೇದ್ಯ, ನಾನಾವಿಧ ಸುಗಂಧ ಪುಷ್ಪಗಳು ಇವುಗಳನ್ನು ಭಕ್ತಿಯಿಂದ ಸಮರ್ಪಿಸಿ ಮುನಿಯು ಧ್ಯಾನಮಾಡುವಷ್ಟರಲ್ಲಿಯೇ ಭಗವಂತನು ನಾನಾರತ್ನಪ್ರಭೆಗಳನ್ನು ಬೀರುತ್ತಿದ್ದ, ಆ ಮಣ್ಣಿನ ಲಿಂಗದಲ್ಲಿಯೇ ಆ ಮುನಿಗೆ ಪ್ರತ್ಯಕ್ಷವಾಗಿ ಗೋಚರಿಸಿದನು.

ತತಃ ಸ ಜೈಮಿನಿರ್ದೃಷ್ಟ್ವಾ ಸಾಕ್ಷಾದ್ದೇವಮುಮಾಪತಿಂ ।
ಪಪಾತ ದಂಡವದ್ಭೂಮೌ ಪುನರುತ್ಥಾಯ ಸಾಂಜಲಿಃ ॥ ೧೪ ॥
ಪ್ರಾಹ ಪ್ರಪನ್ನಾರ್ತಿಹರಂ ಹರಾರ್ಧಾಂಗಂ ಹರಂ ವಿಭುಂ ।

ಜೈಮಿನಿರುವಾಚ

ಧನ್ಯೋಽಸ್ಮಿ ಕೃತಕೃತ್ಯೋಽಸ್ಮಿ ದೇವದೇವ ಜಗತ್ಪತೇ ॥ ೧೫ ॥
ಯಸ್ತ್ವಂ ಬ್ರಹ್ಮಾದಿಭಿರ್ಧ್ಯೇಯಃ ಸಾಕ್ಷಾನ್ಮದ್ದೃಷ್ಟಿಗೋಚರಃ ।
ತತಃ ಪ್ರಸನ್ನಃ ಸ ವಿಭುರ್ಗಿರೀಶೋಽಸ್ಯ ನಿಜಂ ಕರಂ ॥ ೧೬ ॥
ಶಿರಸ್ಯಾಧಾಯೋಗದತ್ತ್ವಂ ಬ್ರೂಹಿ ಪುತ್ರ ಕಿಮಿಚ್ಛಸಿ ।
ತಚ್ಛ್ರುತ್ವಾ ವಚನಂ ಶಂಭೋರ್ಜೈಮಿನಿಃ ಪ್ರತ್ಯುವಾಚ ಹ ॥ ೧೭ ॥
ದೇವಂ ಸಾಂಬಂ ಸವಿಘ್ನೇಶಂ ಸಕುಮಾರಂ ವಿಲೋಕಯೇ ।
ತತಃ ಸಾಂಬಃ ಸಪುತ್ರೋಽಸ್ಯ ಶಂಕರೋ ದರ್ಶನಂ ಗತಃ ॥ ೧೮ ॥

---

೧೪-೧೫. ಆ ಜೈಮಿನಿಯು ಸಾಕ್ಷಾದುಮಾಪತಿಯಾದ ಈಶ್ವರದೇವನನ್ನು ನೋಡಿದ ಕೂಡಲೇ ಸಾಷ್ಟಾಂಗ ನಮಸ್ಕಾರಮಾಡಿ ಎದ್ದು ಪುನಃ ಕೈಮುಗಿದುಕೊಂಡು ಶರಣಾಗತರ ಮನೋವ್ಯಥೆಯನ್ನು ಪರಿಹರಿಸುವ ಅರ್ಧನಾರೀಶ್ವರಸ್ವಾಮಿಯಾದ ಈಶ್ವರನನ್ನು ಕುರಿತು ಮಾತನಾಡಿದನು.

೧೫-೧೬. ಜೈಮಿನಿಯು ಹೇಳಿದನು :—ಜಗದೊಡೆಯನಾದ ದೇವದೇವನೇ! ಬ್ರಹ್ಮಾದಿಗಳಿಂದ ಧ್ಯೇಯನಾದ ನೀನು ನನ್ನ ದೃಷ್ಟಿಗೆ ಸಾಕ್ಷಾತ್ತಾಗಿ ಗೋಚರಿಸಿರುವೆ! ಇದರಿಂದ ನಾನು ಧನ್ಯನು, ಕೃತಕೃತ್ಯನೂ ಆಗಿರುವೆನು!

೧೬,೧೭. ಅನಂತರ ಪ್ರಸನ್ನನಾದ ಗಿರೀಶಸ್ವಾಮಿಯು ತನ್ನ ಹಸ್ತವನ್ನು ಜೈಮಿನಿಯ ತಲೆಯಮೇಲಿಟ್ಟು "ಕುಮಾರ! ನೀನು ಏನನ್ನು ಅಪೇಕ್ಷಿಸುವೆ? ಹೇಳು" ಎಂದನು. ಆದನ್ನುಕೇಳಿ ಜೈಮಿನಿಯು ಈಶ್ವರನನ್ನು ಹೀಗೆ ಕೇಳಿದನು.

೧೮. ಸ್ವಾಮಿಯೇ! ಅಂಬಿಕೆ, ವಿಘ್ನೇಶ್ವರ, ಕುಮಾರ ಇವರ ಸಹಿತನಾಗಿ ನಿನ್ನನ್ನು ದರ್ಶನಮಾಡಬೇಕೆಂದು ಬಯಸುವೆನು ಎಂದು ಜೈಮಿನಿಯು ಹೇಳಲು ಕೂಡಲೇ ಶಂಕರನು ಅಂಬಿಕೆ ಮತ್ತು ಪುತ್ರರಿಂದ ಸಹಿತವಾಗಿ ಅವನಿಗೆ ದರ್ಶನಕೊಟ್ಟನು.

ಪುನಃ ಪ್ರಾಹ ಪ್ರಸನ್ನಾತ್ಮಾ ಬ್ರೂಹಿ ಪುತ್ರ ಕಿಮಿಚ್ಛಸಿ ।
ಅಥಾಸ್ಯ ಜೈಮಿನಿರ್ವೀಕ್ಷ್ಯಂ ಕೃಪಾಲುತ್ವ ಜಗದ್ಗುರೋಃ ॥ ೧೯ ॥

ಸ್ಮಿತ್ವೋವಾಚ ಸಮೀಕ್ಷೇ ತ್ವಾಂ ತಾಂಡವಂ ನಟನಂ ಗತಂ ।
ಅಥ ತದ್ವಾಂಛಿತಂ ಕರ್ತುಂ ಭಗವಾನಂಬಿಕಾಪತಿಃ ॥ ೨೦ ॥

ಸಸ್ಮಾರ ಪ್ರಮಥಾನ್ ಸರ್ವಾನ್ನಾನಾಕ್ರೀಡಾವಿಶಾರದಾನ್ ।
ಸ್ಮೃತಮಾತ್ರಾಸ್ತು ತೇ ಸರ್ವೇ ನಂದಿಭೃಂಗಿಪುರೋಗಮಾಃ ॥ ೨೧ ॥

ಸಮಾಜಗ್ಮುಃ ಪ್ರಜಲ್ಪಂತಃ ಕೌತೂಹಲಸಮನ್ವಿತಾಃ ।
ಸವಿಘ್ನೇಶಕುಮಾರಾಂಬಂ ತೇ ನಮಸ್ಕೃತ್ಯ ವಾಗ್ಯತಾಃ ।
ತಸ್ಥುಃ ಪ್ರಾಂಜಲಯೋ ದೇವದೇವಸ್ಯಾಜ್ಞಾಸಮೀಕ್ಷಕಾಃ ॥ ೨೨ ॥

---

೧೯. ಬಳಿಕ ಸಂತುಷ್ಟಚಿತ್ತನಾದ ಈಶ್ವರನು "ಪುತ್ರಾ! ನೀನು ಇನ್ನೇನನ್ನು ಬಯಸುವೆ? ಹೇಳು" ಎಂಬುದಾಗಿ ಪುನಃ ಕೇಳಲು ಜಗದ್ಗುರುವಾದ ಈ ದೇವನ ದಯಾಳುತನವನ್ನು ನೋಡಿ ಸಂತೋಷಾತಿಶಯದಿಂದ ನಗುತ್ತಾ ಸ್ವಾಮೀ! ತಾಂಡವನರ್ತನಗಳನ್ನು ಮಾಡುತ್ತಿರುವ ನಿನ್ನನ್ನು ನೋಡಬೇಕೆಂದು ಬಯಸುವೆನು ಎಂಬುದಾಗಿ ಹೇಳಿದನು.

೨೦-೨೧. ಅನಂತರ ಪಾರ್ವತೀಪತಿಯಾದ ಭಗವಂತನು ಮುನಿಯ ಇಷ್ಟಾರ್ಥವನ್ನೀಡೇರಿಸಲು ನಾನಾವಿಧ ಕ್ರೀಡೆಗಳಲ್ಲಿ ಕುಶಲರಾದ ಪ್ರಮಥಗಣಗಳನ್ನೆಲ್ಲಾ ಸ್ಮರಿಸಿದನು.

೨೧-೨೨. ಸ್ಮರಿಸಿದ ಕೂಡಲೇ ಕುತೂಹಲಯುಕ್ತರಾಗಿ ಪರಸ್ಪರ ಮಾತನಾಡಿಕೊಳ್ಳುತ್ತ ನಂದಿ, ಭೃಂಗಿ ಮುಂತಾದವರೆಲ್ಲರೂ ಈಶ್ವರನಬಳಿಗೆ ಬಂದು ವಿಘ್ನೇಶ್ವರ, ಕುಮಾರ ಮತ್ತು ಅಂಬಿಕಾದೇವಿಯರಿಂದ ಸಹಿತನಾದ ದೇವನನ್ನು ನಮಸ್ಕರಿಸಿ ಕೈಮುಗಿದು ದೇವದೇವನ ಅಪ್ಪಣೆಯನ್ನು ನಿರೀಕ್ಷಿಸುವವರಾಗಿ ಮೌನದಿಂದ ನಿಂತರು.

ತತೋ ಹರೋ ಹರಾಜ್ಞಯಾ ವಿಧಾಯ ರೂಪಮದ್ಭುತಂ
ಪ್ರನರ್ತುಮುದ್ಯತೋ ಬಭೌ ವಿಚಿತ್ರವೇಷಭೂಷಣಃ ।
ವಿಲೋಲನಾಗವಲ್ಲರೀದ್ವಕಕ್ಷ ಈಷದುತ್ಸಿತಾ-
ನನೋ ಲಲಾಟಶೋಭಿತೇಂದುಲೇಖ ಊರ್ಧ್ವದೋರ್ಧ್ವಜಃ ॥ ೨೩ ॥

ಸುದೃಗ್ವಿಲಿಪ್ತಭಸ್ಮದೇಹರುಗ್ಜಿತೇಂದುಚಂದ್ರಿಕೋ
ಜಟಾಕಲಾಪನಿಸ್ಸರತ್ಸುರಾಪಗಾದ್ರ್ರವಿಗ್ರಹಃ ।
ಲಲಾಟಲೋಚನೋಜ್ಜ್ವಲತ್ಕೃಶಾನುತಪ್ತಶೀತಗುಃ
ಸ್ರವತ್ಸುಧಾನುಜೀವಿತೈಣಭೂಪಕೃತ್ತಿಹುಂಕೃತಃ ॥ ೨೪ ॥

ಕುಮಾರವಾಹಕೇಕಿಚಂಚುಕೃಷ್ಟನಾಗಪುಂಕೃತೋ
ಗಲತ್ಸುಧಾನುಜೀವದಬ್ಜಯೋನಿತುಂಡತುಂಕೃತಃ ।
ಫಣಿಪ್ರಭೀತವಿಘ್ನರಾಜವಾಹನಾಖುಚುಂಕೃತೋ
ಮೃಗೇಂದ್ರನಾಗಭೀಷಿತಾಕ್ಷತನ್ಮಹೋಕ್ಷಭಾಂಕೃತಃ ॥ ೨೫ ॥

---

೨೩. ತರುವಾಯ ಹರನು ಪಾರ್ವತೀದೇವಿಯ ಅನುಮತಿಯನ್ನು ಪಡೆದು ಅದ್ಭುತರೂಪವನ್ನು ಧರಿಸಿ ನರ್ತನಮಾಡಲುದ್ಯುಕ್ತನಾಗಿ ವಿಚಿತ್ರವಾದ ವೇಷ ಮತ್ತು ಆಭರಣಗಳನ್ನು ತೊಟ್ಟು ಚಲಿಸುತ್ತಿರುವ ಸರ್ಪಗಳೆಂಬ ಹೂವಿನ ಗೊಂಚಲುಗಳಿಂದ ವ್ಯಾಪ್ತವಾದ ಕಂಕಳುಗಳುಳ್ಳವನು, ಮಂದಹಾಸಯುಕ್ತವಾದ ಮುಖವುಳ್ಳವನು, ಹಣೆಯಮೇಲೆ ವಿರಾಜಿಸುತ್ತಿರುವ ಚಂದ್ರಕಳೆಯುಳ್ಳವನು ಮತ್ತು ಎತ್ತಿದ ಬಾಹುಗಳೆಂಬ ಧ್ವಜಗಳುಳ್ಳವನೂ ಆಗಿ ಪ್ರಕಾಶಿಸುತ್ತಿದ್ದನು.

೨೪. ಅಲಂಕೃತನಾದ ಈಶ್ವರನು ಸಮಿಾಚೀನವಾದ ಕಣ್ಣುಗಳು, ಭಸ್ಮವನ್ನು ಹಚ್ಚಿಕೊಂಡಿರುವ ದೇಹ ಇವುಗಳ ಕಾಂತಿಯಿಂದ ಚಂದ್ರನ ಬೆಳದಿಂಗಳನ್ನೂ ತಿರಸ್ಕರಿಸುವಂತಿದ್ದನು. ಜಟೆಯ ಸಮೂಹಗಳಿಂದ ಹೊರಡುತ್ತಿರುವ ದೇವಗಂಗೆಯಿಂದ ಅವನ ಶರೀರವು ನೆನೆದಿದ್ದಿತು. ಅವನ ಹಣೆಯಲ್ಲಿರುವ ಕಣ್ಣಿನಲ್ಲಿ ಜ್ವಲಿಸುತ್ತಿರುವ ಬೆಂಕಿಯಿಂದ ಶಿರಸ್ಸಿನಲ್ಲಿರುವ ಚಂದ್ರನು ತಪಿಸುವಂತಿದ್ದನು. ಸುರಿಯುತ್ತಿರುವ ಸುಧೆಯಿಂದ ಉಜ್ಜೀವಿಸಲ್ಪಟ್ಟ ಕೃಷ್ಣಸಾರ ಮೃಗದ ಚರ್ಮವು ಹುಂಕಾರಮಾಡುತ್ತಿದ್ದಿತು

೨೫. ಆಗ ಕುಮಾರವಾಹನವಾದ ನವಿಲಿನ ಕೊಕ್ಕಿನಿಂದ ಸೆಳೆಯಲ್ಪಟ್ಟ ನಾಗವು ಪುಂಕಾರಮಾಡುತ್ತಿದ್ದಿತು. ಬೀಳುತ್ತಿರುವ ಸುಧೆಯನ್ನು ಪಾನಮಾಡು

ಮುಹುಃ ಪದಾಂಬುಜಪ್ರಪಾತಕಂಪಿತಾವನೀತಲಃ
ಪ್ರಕೃಷ್ಟವಾದ್ಯಹೃಷ್ಟಗಾತ್ರರೋಮರಾಜಿಕಂಟಕಃ ।
ಸುರಾಸುರೇಂದ್ರಮೌಲಿರತ್ನಭಾಸಿತಾಂಘ್ರಿಪಂಕಜೋ
ಗಣೇಶಕಾರ್ತಿಕೇಯಶೈಲಪುತ್ರಿವೀಕ್ಷಿತಾನನಃ ॥ ೨೬ ॥

ಪ್ರವೃದ್ಧಹರ್ಷಭಕ್ತವೃಂದಸಮ್ಯಗುಕ್ತಸಂಜಯಃ
ಪ್ರವೃತ್ತತಾಂಡವೈರ್ವಿಭುರ್ಬಭೌ ದಿಶೋಽವಭಾಸಯನ್ ॥ ೨೭ ॥

ಅಥಾನಂದಾರ್ಣವೇ ಮಗ್ನೋ ದೃಷ್ಟ್ವಾ ನೃತ್ಯಂ ಮಹೇಶಿತುಃ ।
ಜೈಮಿನಿರ್ವೇದಪಾದೇನ ಸ್ತವೇನಾಸ್ತೌತ್ಸಮಾಹಿತಃ ॥ ೨೮ ॥

---

ತ್ತಿರುವ ಬ್ರಹ್ಮನ ಮುಖವು ತುಂಕಾರವಮಾಡುತ್ತಿದ್ದಿತು. ಸರ್ಪವನ್ನು ನೋಡಿ ಭಯಗೊಂಡ, ವಿಘ್ನೇಶ್ವರನ ವಾಹನವಾದ ಇಲಿಯು ಚುಂಕಾರವಮಾಡುತ್ತಿದ್ದಿತು. ಸಿಂಹನಾದದಿಂದ ಭಯಪಟ್ಟ ಮಹಾ ವೃಷಭವು "ಭಾಂ'' ಎಂದು ಕೂಗು ತ್ತಿದ್ದಿತು.

೨೬. ಭೂಪ್ರದೇಶವು ಈಶ್ವರನ ಪಾದಕಮಲಸಂಘರ್ಷಣದಿಂದ ಬಾರಿ ಬಾರಿಗೂ ನಡುಗುತ್ತಿದ್ದಿತು. ಉತ್ತಮವಾದ್ಯಗಳ ಧ್ವನಿಯನ್ನು ಕೇಳಿ ಸಂತೋ ಷಾತಿಶಯದಿಂದ ರೋಮಾಂಚವುಂಟಾಗಿ ಮೈಮೇಲಿನ ರೋಮಗಳೆಲ್ಲವೂ ಎದ್ದು ನಿಂತು ಪ್ರಕಾಶಿಸುತ್ತಿದ್ದುವು. ಅವನ ಪಾದಕಮಲವು ಸುರಾಸುರಶ್ರೇಷ್ಠರ ಶಿರಸ್ಸಿ ನಲ್ಲಿರುವ ರತ್ನಗಳ ಪ್ರಕಾಶದಿಂದ ಹೊಳೆಯುತ್ತಿದ್ದಿತು. ಆಗ ಅವನ ಮುಖ ವನ್ನು ಗಣೇಶ, ಕುಮಾರಸ್ವಾಮಿ, ಮತ್ತು ಪಾರ್ವತೀದೇವಿಯರು ನೋಡು ತ್ತಿದ್ದರು.

೨೭. ಭಕ್ತಜನಸಮೂಹವು ಇದನ್ನು ನೋಡಿ ಬಹುವಾಗಿ ಸಂತೋಷ ಪಟ್ಟು "ಸ್ವಾಮಿಗೆ ಜಯಜಯ'' ಎಂದು ನುಡಿಯುತ್ತಿದ್ದಿತು. ಈರೀತಿಯಾಗಿ ನರ್ತನದಲ್ಲಿ ಪ್ರವೃತ್ತನಾಗಿದ್ದ ಸ್ವಾಮಿಯು ದಿಕ್ಕುಗಳನ್ನೆಲ್ಲಾ ಬೆಳಗುತ್ತಾ ವಿರಾಜ ಮಾನನಾದನು.

೨೮. ಈವಿಧವಾದ, ಮಹೇಶ್ವರನ ನರ್ತನವನ್ನು ನೋಡಿ ಜೈಮಿನಿಯು ಆನಂದಸಾಗರದಲ್ಲಿ ಮುಳುಗಿ ಸಮಾಧಾನಚಿತ್ತನಾಗಿ ವೇದಪಾದಸ್ತೋತ್ರದಿಂದ ದೇವನನ್ನು ಸ್ತುತಿಸಿದನು.

ವಿರಿಂಚಿವಿಷ್ಣುಗಿರಿಶಪ್ರಣತಾಂಘ್ರಿಸರೋರುಹೇ ।
ಜಗನ್ಮಾತೇ ನಮಸ್ತುಭ್ಯಂ ದೇವಿ ಕಾಂಪಿಲ್ಯವಾಸಿನಿ ॥ ೨೯ ॥

ವಿಘ್ನೇಶವಿಧಿಮಾರ್ತಂಡಚಂದ್ರೇಂದ್ರೋಪೇಂದ್ರವಂದಿತ ।
ನಮೋ ಗಣಪತೇ ತುಭ್ಯಂ ಬ್ರಹ್ಮಣಾಂ ಬ್ರಹ್ಮಣಸ್ಪತೇ ॥ ೩೦ ॥

ಉಮಾಕೋಮಲಹಸ್ತಾಬ್ಜಸಂಭಾವಿತಲಲಾಟಕಂ ।
ಹಿರಣ್ಯಕುಂಡಲಂ ವಂದೇ ಕುಮಾರಂ ಪುಷ್ಕರಸ್ರಜಂ ॥ ೩೧ ॥

ಶಿವಂ ಬ್ರಹ್ಮಾದಿದುರ್ದರ್ಶಂ ನರಃ ಕಸ್ತೋತುಮರ್ಹತಿ ।
ದರ್ಶನಾತ್ತೇ ಸ್ತುತಿರ್ಮೇ ಸಾ ಚಾಭ್ರಾದ್ವೃಷ್ಟಿರಿವಾಜನಿ ॥ ೩೨ ॥

---

೨೯. ಬ್ರಹ್ಮ, ವಿಷ್ಣು, ಈಶ್ವರ ಎಂಬ ತ್ರಿಮೂರ್ತಿಗಳಿಂದ ವಂದಿತವಾದ ಪಾದಕಮಲವುಳ್ಳ, ಜಗನ್ಮಾತೆಯಾದ, ಕಾಂಪಿಲ್ಯವಾಸಿನಿಯಾದ ದೇವಿಯೇ ! ನಿನಗೆ ನಮಸ್ಕಾರ !

೩೦. ವಿಘ್ನೇಶ, ವಿಧಿ, ಮಾರ್ತಾಂಡ, ಚಂದ್ರ, ಇಂದ್ರ ಮತ್ತು ಉಪೇಂದ್ರರಿಂದ ವಂದಿತನಾದ, ಗಣನಾಥನಾದ ಬ್ರಹ್ಮಪತಿಯೇ ! ನಿನಗೆ ನಮಸ್ಕಾರ !

೩೧. ಪಾರ್ವತೀದೇವಿಯ ಕೋಮಲವಾದ ಹಸ್ತಕಮಲ ಸ್ಪರ್ಶದಿಂದ ಸಂಭಾವಿತವಾದ ಹಣೆಯುಳ್ಳ, ಬಂಗಾರದ ಕಡಕು, ಪುಷ್ಕರಮಾಲೆ ಇವುಗಳನ್ನು ಧರಿಸಿರುವ ಕುಮಾರಸ್ವಾಮಿಯನ್ನು ನಮಿಸುವೆನು !

೩೨. ಬ್ರಹ್ಮಾದಿಗಳಿಗೂ ತಿಳಿಯಲಶಕ್ಯನಾದ ಪರಮೇಶ್ವರನನ್ನು ಯಾವ ಮನುಜನುತಾನೇ ಸ್ತೋತ್ರಮಾಡಿಯಾನು ? ಸ್ವಾಮಿಾ ! ನಿನ್ನ ದರ್ಶನಮಾತ್ರದಿಂದ ಈ ಸ್ತೋತ್ರವು ಮೋಘದಿಂದ ಮಳೆಗರೆಯುವಂತೆ ನನ್ನ ಮುಖದಿಂದ ಹೊರಟಿತು !

ನಮಃ ಶಿವಾಯ ಸಾಂಬಾಯ ನಮಃ ಶರ್ವಾಯ ಶಂಭವೇ ।
ನಮೋ ನಟಾಯ ರುದ್ರಾಯ ಸದಸಸ್ಪತಯೇ ನಮಃ ॥ ೩೩ ॥

ಪಾದಭಿನ್ನಾಯ ಲೋಕಾಯ ಮೌಲಿಭಿನ್ನಾಂಡಭಿತ್ತ್ರಯೇ ।
ಭುಜಭ್ರಾಂತದಿಗಂತಾಯ ಭೂತಾನಾಂ ಪತಯೇ ನಮಃ ॥ ೩೪ ॥

ಕ್ವಣನ್ನೂಪುರಯುಗ್ಮಾಯ ವಿಲಸತ್ಕೃತ್ತಿವಾಸಸೇ ।
ಫಣೀಂದ್ರಮೇಖಲಾಯಾಸ್ತು ಪಶೂನಾಂ ಪತಯೇ ನಮಃ ॥ ೩೫ ॥

ಕಾಲಕಾಲಾಯ ಸೋಮಾಯ ಯೋಗಿನೇ ಶೂಲಪಾಣಿನೇ ।
ಅಸ್ಥಿಭೂಷಾಯ ಶುದ್ಧಾಯ ಜಗತಾಂ ಪತಯೇ ನಮಃ ॥ ೩೬ ॥

---

೩೩. ಅಂಬಿಕಾದೇವಿಯ ಸಹಿತನಾದ ಶಿವನಿಗೆ ನಮಸ್ಕಾರ! ಶರ್ವ, ಶಂಭು ಎಂದು ಹೊಗಳಿಸಿಕೊಳ್ಳುವ ದೇವನಿಗೆ ನಮಸ್ಕಾರ! ನರ್ತನಮಾಡುತ್ತಿರುವ ರುದ್ರನಿಗೆ ನಮಸ್ಕಾರ! ಸದಸಸ್ಪತಿಗೆ ನಮಸ್ಕಾರ!

೩೪. ಪಾದದಿಂದ ಭೇದಿಸಲ್ಪಟ್ಟ ಲೋಕಗಳುಳ್ಳ, ಶಿರಸ್ಸಿನಿಂದ ಭೇದಿಸಲ್ಪಟ್ಟ ಅಂಡಭಿತ್ತಿಯುಳ್ಳ, ಭುಜಗಳಿಂದ ತಿರುಗಿಸಲ್ಪಟ್ಟ ದಿಗಂತಗಳುಳ್ಳ, ಭೂತಪತಿಗೆ ನಮಸ್ಕಾರ!

೩೫. ಎರಡುಕಾಲುಗಳಲ್ಲಿಯೂ ಶಬ್ದಮಾಡುತ್ತಿರುವ ಪಾದಾಭರಣಗಳನ್ನು ಧರಿಸಿರುವ, ಪ್ರಕಾಶಮಾನವಾದ ಚರ್ಮವನ್ನು ಹೊದ್ದಿರುವ, ಶ್ರೇಷ್ಠಸರ್ಪವನ್ನು ಉಡಿದಾರವಾಗಿ ಕಟ್ಟಿಕೊಂಡಿರುವ ಪಶುಪತಿಗೆ ನಮಸ್ಕಾರ!

೩೬. ಕಾಲನಿಗೂ ಕಾಲಸ್ವರೂಪನು, ಅರ್ಧನಾರೀಶ್ವರನು, ಯೋಗಿಯು, ಕೈಯಲ್ಲಿ ತ್ರಿಶೂಲವನ್ನು ಹಿಡಿದಿರುವವನು, ಮೂಳೆಗಳನ್ನು ಆಭರಣವಾಗಿಟ್ಟುಕೊಂಡಿರುವವನು, ಪರಿಶುದ್ಧನೂ ಆದ ಜಗದೊಡೆಯನಿಗೆ ನಮಸ್ಕಾರ!

ಪಾತ್ರೇ ಸರ್ವಸ್ಯ ಜಗತೋ ನೇತ್ರೇ ಸರ್ವದಿವೌಕಸಾಂ ।
ಗೋತ್ರಾಣಾಂ ಪತಯೇ ತುಭ್ಯಂ ಕ್ಷೇತ್ರಾಣಾಂ ಪತಯೇ ನಮಃ ॥ ೩೭ ॥

ಶಂಕರಾಯ ನಮಸ್ತುಭ್ಯಂ ಮಂಗಲಾಯ ನಮೋನಮಃ ।
ಧನಾನಾಂ ಪತಯೇ ತುಭ್ಯಮನ್ನಾನಾಂ ಪತಯೇ ನಮಃ ॥ ೩೮ ॥

ಆತ್ಮಾಧಿಪತಯೇ ತುಭ್ಯಂ ನಮೋ ಮೀಢುಷ್ಟಮಾಯ ತೇ ।
ಅಷ್ಟಾಂಗಾಯಾತಿಹೃದ್ಯಾಯ ಕ್ಲಿಷ್ಟಭಕ್ತೇಷ್ಟದಾಯಿನೇ ॥ ೩೯ ॥

ಇಷ್ಟಿಘ್ನಾಯ ಸುತುಷ್ಟಾಯ ಪುಷ್ಟಾನಾಂ ಪತಯೇ ನಮಃ ।
ಪಂಚಭೂತಾಧಿಪತಯೇ ಕಾಲಾಧಿಪತಯೇ ನಮಃ ॥ ೪೦ ॥

ನಮ ಆತ್ಮಾಧಿಪತಯೇ ದಿಶಾಂ ಚ ಪತಯೇ ನಮಃ ।
ವಿಶ್ವಕರ್ತ್ರೇ ಮಹೇಶಾಯ ವಿಶ್ವಭರ್ತ್ರೇ ಪಿನಾಕಿನೇ ॥ ೪೧ ॥

---

೩೭. ಜಗತ್ತಿಗೆಲ್ಲಾ ಪಾಲಕನು, ಸಕಲದೇವತೆಗಳಿಗೂ ಪಾಲಕನು, ಗೋತ್ರಪತಿಯು ಮತ್ತು ಕ್ಷೇತ್ರಪಾಲಕನೂ ಆದ ಸ್ವಾಮಿಗೆ ನಮಸ್ಕಾರ !

೩೮. ಶಂಕರನಾದ ನಿನಗೆ ನಮಸ್ಕಾರ! ಮಂಗಳರೂಪಿಯಾದ ನಿನಗೆ ನಮಸ್ಕಾರ! ನಮಸ್ಕಾರ! ಸ್ವಾಮಿ! ಧನಪತಿ ಮತ್ತು ಅನ್ನಪತಿಯೂ ಆದ ನಿನಗೆ ನಮಸ್ಕಾರ!

೩೯. ಆತ್ಮಾಧಿಪತಿಯು, ಸ್ತುತ್ಯತಮನು, ಅಷ್ಟಾಂಗಸಹಿತನು, ಅತ್ಯಂತ ಮನೋಹರನು, ದುಃಖಪಡುತ್ತಿರುವ ಭಕ್ತರಿಗೆ ಇಷ್ಟಾರ್ಥದಾಯಕನೂ ಆದ ನಿನಗೆ ನಮಸ್ಕಾರ!

೪೦. ದಕ್ಷಪ್ರಜಾಪತಿಯ ಯಜ್ಞವನ್ನು ನಾಶಗೊಳಿಸಿದ, ಅತ್ಯಂತ ಪ್ರಸನ್ನಾತ್ಮನಾದ ಪುಷ್ಟಪತಿಗೆ ನಮಸ್ಕಾರ! ಪೃಥಿವೀ, ಜಲ, ತೇಜಸ್ಸು, ವಾಯು, ಆಕಾಶ ಎಂಬ ಪಂಚಭೂತಗಳಿಗಧಿಪತಿಯು, ಕಾಲನಿಯಾಮಕನೂ ಆದ ಸ್ವಾಮಿಗೆ ನಮಸ್ಕಾರ!

೪೧. ಆತ್ಮಾಧಿಪತಿಗೆ ನಮಸ್ಕಾರ! ದಿಕ್ಪಾಲಕನಿಗೆ ನಮಸ್ಕಾರ! ಜಗತ್ಕರ್ತನು, ಜಗದ್ರಕ್ಷಕನು, ಪಿನಾಕಿಯೂ ಆದ ಮಹೇಶ್ವರನಿಗೆ ನಮಸ್ಕಾರ!

ವಿಶ್ವಹರ್ತ್ರೇಽಗ್ನಿನೇತ್ರಾಯ ವಿಶ್ವರೂಪಾಯ ವೈ ನಮಃ ।
ಈಶಾನ ತೇ ತತ್ಪುರುಷ ನಮೋಽಘೋರಾಯ ತೇ ಸದಾ ॥ ೪೨ ॥

ವಾಮದೇವ ನಮಸ್ತೇಽಸ್ತು ಸದ್ಯೋಜಾತಾಯ ವೈ ನಮಃ ।
ಭೂತಿಭೂಷಾಯ ಭಕ್ತಾನಾಂ ಭೀತಿಭಂಗಪ್ರದಾಯಿನೇ ॥ ೪೩ ॥

ನಮೋ ಭವಾಯ ಭರ್ಗಾಯ ನಮೋ ಭದ್ರಾಯ ಮೀಢುಷೇ ।
ಸಹಸ್ರಾಂಬಾಯ ಸಾಂಬಾಯ ಸಹಸ್ರಾಭೀಷವೇ ನಮಃ ॥ ೪೪ ॥

ನಮಃ ಸಹಸ್ರಬಾಹವೇ ತುಭ್ಯಂ ಸಹಸ್ರಾಕ್ಷಾಯ ಮೀಢುಷೇ ।
ಸುಕಪೋಲಾಯ ಸೋಮಾಯ ಸುಲಲಾಟಾಯ ಸುಭ್ರುವೇ ॥ ೪೫ ॥

ಸುದೇಹಾಯ ನಮಸ್ತುಭ್ಯಂ ಸುಮೃಡೀಕಾಯ ಮೀಢುಷೇ ।
ಭವಕ್ಲೇಶನಿಮಿತ್ತೋರುಭಯಭೇದಕೃತೇ ಸದಾ ॥ ೪೬ ॥

---

೪೨. ಜಗತ್ಸಂಹಾರಕನು, ಕಣ್ಣಿನಲ್ಲಿ ಅಗ್ನಿಯುಳ್ಳವನೂ ಆದ ವಿಶ್ವರೂಪನಿಗೆ ನಮಸ್ಕಾರ! ತತ್ಪುರುಷ ಮತ್ತು ಅಘೋರರೂಪನೂ ಆದ ಈಶಾನನೇ! ನಿನಗೆ ಯಾವಾಗಲೂ ನಮಿಸುವೆನು!

೪೩. ವಾಮದೇವಾ! ನಿನಗೆ ನಮಸ್ಕಾರ! ಭಕ್ತರಿಗೆ ಭಯಪರಿಹಾರಕನು, ಐಶ್ವರ್ಯದಾಯಕನೂ ಆದ ಸದ್ಯೋಜಾತನಿಗೆ ನಮಸ್ಕಾರ!

೪೪. ಭರ್ಗನು, ಮಂಗಳಕರನು, ಭಕ್ತೇಷ್ಟದಾಯಕನೂ ಆದ ಭವಸ್ವಾಮಿಗೆ ನಮಸ್ಕಾರ! ಬಹು ಅಂಬಿಕೆಗಳುಳ್ಳವನು, ಅರ್ಧನಾರೀಶ್ವರನು, ಬಹು ಜನರಿಗಭಿಲಷಿತನೂ ಆದ ದೇವನಿಗೆ ನಮಸ್ಕಾರ!

೪೫. ಬಹುತೋಳುಗಳು ಮತ್ತು ಬಹುಕಣ್ಣುಗಳುಳ್ಳ ಅಭೀಷ್ಟದಾತನಾದ, ಕೋಮಲ ಕೆನ್ನೆಗಳುಳ್ಳ, ವಿಸ್ತಾರವಾದ ಹಣೆಯುಳ್ಳ, ಚೆನ್ನಾಗಿರುವ ಹುಬ್ಬುಗಳುಳ್ಳ, ಪಾರ್ವತೀಪತಿಗೆ ನಮಸ್ಕಾರ!

೪೬. ಸುಂದರದೇಹವುಳ್ಳವನು, ಸುಮೃಡೀಕನು, ಇಷ್ಟದಾತನು, ಸಂಸಾರದುಃಖದಿಂದುಂಟಾದ ಮಹಾಭಯವನ್ನು ನಾಶಪಡಿಸುವವನೂ ಆಗಿರುವ ನಿನಗೆ ಯಾವಾಗಲೂ ನಮಿಸುವೆನು!

ನಮಸ್ತುಭ್ಯಮಪರಾಧಾಯ ಸಹಮಾನಾಯ ಮೀಢುಷೇ |
ನಮಾಮೋಹಂ ದೇವಮಾನಂದಸಂದೋಹಂ ಲಾಸ್ಯಸುಂದರಂ ||೪೭||

ಸಮಸ್ತಜಗತಾಂ ನಾಥಂ ಸದಸಸ್ಪತಿಮದ್ಭುತಂ |
ಸುಜಂಘಂ ಸುಂದರಂ ಕ್ಷೌಮಂ ರಕ್ಷೋಭೂತಕ್ಷತಿಕ್ಷಮಂ ||೪೮||

ಯಜ್ಞಶ್ರೇಷ್ಠಂ ನಮಾಮೀಶಮಕ್ಷರಂ ಪರಮಂ ಪ್ರಭುಂ |
ಅರ್ಧಾಲಕಮವಸ್ತ್ರಾರ್ಧಮಸ್ಥ್ಯುತ್ಪಲದಲಸ್ರಜಂ ||೪೯||

ಅರ್ಧಪುಂಲಕ್ಷಣಂ ವಂದೇ ಪುರುಷಂ ಕೃಷ್ಣಪಿಂಗಲಂ |
ಸಕೃತ್ಪ್ರಣತಸಂಸಾರಮಹಾಸಾಗರತಾರಕಂ ||೫೦||

---

೪೭. ಭಕ್ತಾಪರಾಧಗಳನ್ನು ಸಹಿಸುವವನು, ಅಭೀಷ್ಟದಾಯಕನೂ ಆದ ಸ್ವಾಮಿಯೇ! ನಿನಗೆ ನಮಸ್ಕಾರ! ಆನಂದಪೂರ್ಣನು, ನಾಟ್ಯಸುಂದರನೂ ಆದ ದೇವನನ್ನು ನಾವು ನಮಸ್ಕರಿಸುವೆವು.

೪೮. ಸಕಲಲೋಕಗಳಿಗೂ ಒಡೆಯನು, ಸದಸಸ್ಪತಿಯು, ವಿಚಿತ್ರಚರಿತನು, ಮನೋಹರ ಜಂಘೆಯುಳ್ಳವನು, ಸುಂದರನು, ಪೀತಾಂಬರಧಾರಿಯು, ರಾಕ್ಷಸರು ಮತ್ತು ಭೂತಗಣಗಳನ್ನು ನಾಶಪಡಿಸಲು ಸಮರ್ಥನೂ ಆಗಿರುವ ದೇವನನ್ನು ನಮಸ್ಕರಿಸುವೆನು!

೪೯. ಯಜ್ಞಶ್ರೇಷ್ಠನು, ನಾಶರಹಿತನು, ಉತ್ತಮನು, ಸ್ವಾಮಿಯು, ಮುಂಗುರುಳುಳ್ಳವನು, ವಸ್ತ್ರರಹಿತವಾದ ಅರ್ಧಶರೀರವುಳ್ಳವನು, ಕಮಲದಳದ ಮಾಲೆಯನ್ನು ಧರಿಸಿರುವವನೂ ಆದ ಈಶ್ವರನನ್ನು ನಮಿಸುವೆನು!

೫೦. ಕಪ್ಪು ಮತ್ತು ಪಿಂಗಳವರ್ಣವುಳ್ಳವನು, ಶರೀರದ ಅರ್ಧಭಾಗದಲ್ಲಿ ಪುರುಷಲಕ್ಷಣಗಳುಳ್ಳವನು, ಒಂದಾವರ್ತಿ ತನ್ನನ್ನು ಶರಣುಹೊಂದಿದವನನ್ನೂ ಸಹ ಸಂಸಾರವೆಂಬ ಮಹಾಸಾಗರವನ್ನು ದಾಟಿಸುವವನೂ ಆದ ದೇವನನ್ನು ನಮಸ್ಕರಿಸುವೆನು!

ಪ್ರಣಮಾಮಿ ತಮೀಶಾನಂ ಜಗತಸ್ತಸ್ಥುಷಸ್ಪತಿಂ ।
ಧಾತಾರಂ ಜಗತಾಮೀಶಂ ದಾತಾರಂ ಸರ್ವಸಂಪದಾಂ ॥ ೫೧ ॥

ನೇತಾರಂ ಮರುತಾಂ ವಂದೇ ಜೇತಾರಮಪರಾಜಿತಂ ।
ತಂ ತ್ವಾಮಂತಕನೇತಾರಂ ವಂದೇ ಮಂದಾಕಿನೀಧರಂ ॥ ೫೨ ॥

ದಧಾತಿ ವಿದಧದ್ಯೋಮಾಮಿಮಾನಿ ತ್ರೀಣಿ ವಿಷ್ಟಪಂ ।
ಸರ್ವಜ್ಞಂ ಸರ್ವಗಂ ಸರ್ವಂ ಕವಿಂ ವಂದೇ ತಮೀಶ್ವರಂ ॥ ೫೩ ॥

ಯತಶ್ಚ ಯಜುಷಾ ಸಾರ್ಧಮೃಚಃ ಸಾಮಾನಿ ಜಜ್ಞಿರೇ ।
ಭವಂತಂ ಸುದೃಶಂ ವಂದೇ ಭೂತಭವ್ಯಾ ಭವಂತಿ ಚ ॥ ೫೪ ॥

---

೫೧. ಜಗದ್ರಕ್ಷಕನು, ಸೃಷ್ಟಿಕರ್ತನು, ಜಗದೊಡೆಯನು, ಜಗನ್ನಿಯಾಮಕನು, ಸಕಲಸಂಪತ್ತುಗಳನ್ನೂ ಕೊಡುವವನೂ ಆಗಿರುವ ಈಶಾನದೇವನನ್ನು ನಮಸ್ಕರಿಸುತ್ತೇನೆ!

೫೨. ಮರುತ್ತುಗಳಿಗೆ ನಿಯಾಮಕನು, ಜಯಶೀಲನು, ಪರಾಜಯವನ್ನು ಹೊಂದದಿರುವವನೂ ಆದ ದೇವನನ್ನು ನಮಿಸುವೆನು! ಶಿರಸ್ಸಿನಲ್ಲಿ ಆಕಾಶಗಂಗೆಯನ್ನು ಧರಿಸಿರುವವನು, ಯಮನಿಗೆ ನಿಯಾಮಕನೂ ಆದ ಆ ಸ್ವಾಮಿಯನ್ನು ನಮಸ್ಕರಿಸುತ್ತೇನೆ!

೫೩. ಪನ್ನನ್ನೂ ಈ ಮೂರುಲೋಕಗಳನ್ನೂ ಧರಿಸಿರುವವನು, ದೇವಲೋಕವನ್ನು ನಿರ್ಮಿಸಿದವನು, ಸರ್ವಜ್ಞನು, ಸರ್ವವ್ಯಾಪಕನು, ಪೂರ್ಣನು, ಕವಿಯೂ ಆದ ಆ ಈಶ್ವರನನ್ನು ನಮಸ್ಕರಿಸುವೆನು!

೫೪. ಋಗ್ಯಜುರ್ವೇದಸಾಮವೇದಗಳು ಯಾರಿಂದ ಆವಿರ್ಭವಿಸಿದುವೋ, ಭೂತಭವಿಷ್ಯತ್ಪ್ರಪಂಚಕ್ಕೆ ಯಾರು ಕಾರಣನೋ ಅಂತಹ ಸುಲೋಚನನಾದ ನಿನ್ನನ್ನು ಸ್ತುತಿಸುವೆನು!

ತ್ಯಜಂತೀತರಕರ್ಮಾಣಿ ಯೋ ವಿಶ್ವಾನಿ ವಿಪಶ್ಯತಿ ।
ಹರಂ ಸುರನಿಯಂತಾರಂ ಹರಂತಮಹಮಾನತಃ ॥ ೫೫ ॥

ಯದಾಜ್ಞಯಾ ಜಗತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ ।
ತಂ ನಮಾಮಿ ಮಹಾದೇವಂ ಯನ್ನಿಯೋಗಾದಿದಂ ಜಗತ್ ॥ ೫೬ ॥

ಕಲ್ಪಾದೌ ಭಗವಾನ್ ಧಾತಾ ಯಥಾಪೂರ್ವಮಕಲ್ಪಯತ್ ।
ಈಶ್ವರಂ ತಮಹಂ ದೇವಂ ಯಸ್ಯ ಲಿಂಗಮಹರ್ನಿಶಂ ॥ ೫೭ ॥

ಯಜಂತೇ ಸಹ ಭಾರ್ಯಾಭಿರಿಂದ್ರಜ್ಯೇಷ್ಠಾ ಮರುದ್ಗಣಾಃ ।
ನಮಾಮಿ ತಮಿಮಂ ರುದ್ರಂ ಯಮಭ್ಯರ್ಚ್ಯ ಸಕೃತ್ಪುರಾ ॥ ೫೮ ॥

ಅವಾಪುಃ ಸ್ವಂ ಸ್ವಮೈಶ್ವರ್ಯಂ ದೇವಾಸಃ ಪೂಷಣಾದಯಃ ।
ತಂ ವಂದೇ ದೇವಮೀಶಾನಂ ಯಂ ಶಿವಂ ಹೃದಯಾಂಬುಜೇ ॥ ೫೯ ॥

---

೫೫. ಜಗತ್ತು ನಿರ್ವ್ಯಾಪಾರವಾಗಿರುವಾಗಲೂ ಅದನ್ನು ನೋಡುತ್ತಿರುವವನು, ಸುರನಿಯಾಮಕನು, ಪಾಪಪರಿಹಾರಕನೂ ಆದ ಹರದೇವನನ್ನು ನಾನು ನಮಿಸುವೆನು !

೫೬-೫೭, ನಾರಾಯಣನು ಯಾರ ಅಪ್ಪಣೆಯಮೇರೆಗೆ ಸಕಲ ಜಗತ್ತಿನಲ್ಲಿಯೂ ವ್ಯಾಪಿಸಿರುವನೋ, ಬ್ರಹ್ಮನು ಕಲ್ಪಾದಿಯಲ್ಲಿ ಯಾರ ಅನುಮತಿಯಿಂದ ಈ ಪ್ರಪಂಚವನ್ನು ಹಿಂದಿನ ಕಲ್ಪದಲ್ಲಿದ್ದಂತೆಯೇ ಸೃಷ್ಟಿಸಿರುವನೋ ಅಂತಹ ಮಹಾದೇವನನ್ನು ನಮಸ್ಕರಿಸುವೆನು !

೫೭-೫೮. ಇಂದ್ರಜ್ಯೇಷ್ಠರಾದ ಮರುದ್ಗಣಗಳು, ತಮ್ಮ ಭಾರ್ಯೆಯರ ಸಹಿತರಾಗಿ ಅಹೋರಾತ್ರಿಗಳಲ್ಲಿ ಪೂಜಿಸುತ್ತಿರುವ ಲಿಂಗದಲ್ಲಿ ಸನ್ನಿಹಿತನಾದ ಈಶ್ವರನನ್ನು ನಮಸ್ಕರಿಸುತ್ತೇನೆ !

೫೮-೫೯. ಪೂಷಣ ಮುಂತಾದ ದೇವತೆಗಳು ಪೂರ್ವದಲ್ಲಿ ಒಂದುಬಾರಿ ಯಾವ ರುದ್ರದೇವನನ್ನು ಆರಾಧಿಸಿ ತಮ್ಮ ತಮ್ಮ ಐಶ್ವರ್ಯವನ್ನು ಪಡೆದಿದ್ದರೋ ಅಂತಹ ದೇವನನ್ನು ನಾನು ನಮಸ್ಕರಿಸುತ್ತೇನೆ!

ಸತತಂ ತಪಸಾ ಶಾಂತಾಃ ಸಜ್ಜನಾ ಯಮುಪಾಸತೇ ।
ತದಸ್ಮೈ ಸತತಂ ಕುರ್ಮೋ ನಮಃ ಕಮಲಕಾಂತಯೇ ॥ ೬೦ ॥

ಉಮಾಕುಚಪಟೋರಸ್ಕ ಯಾ ತೇ ರುದ್ರ ಶಿವಾ ತನೂಃ ।
ನಮಸ್ತೇ ರುದ್ರಭಾವಾಯ ನಮಸ್ತೇ ರುದ್ರಕೇಲಯೇ ॥ ೬೧ ॥

ನಮಸ್ತೇ ರುದ್ರಶಾಂತ್ಯೈ ಚ ನಮಸ್ತೇ ರುದ್ರಮನ್ಯವೇ ।
ವೇದಾಶ್ವರಥನಿಷ್ಠಾಭ್ಯಾಂ ಪಾದಾಭ್ಯಾಂ ತ್ರಿಪುರಾಂತಕ ॥ ೬೨ ॥

ಬಾಣಕಾರ್ಮುಕಯುಕ್ತಾಭ್ಯಾಂ ಬಾಹುಭ್ಯಾಮುತ ತೇ ನಮಃ ।
ನಮಸ್ತೇ ವಾಸುಕಿಜ್ಯಾಯ ವಿಷ್ಕಿರಾಯ ಚ ಶಂಕರ ॥ ೬೩ ॥

---

೫೯-೬೦. ಶಾಂತರಾದ ಸಜ್ಜನರು ತಪಸ್ಸುಮಾಡುತ್ತಾ ತಮ್ಮ ಹೃದಯ ಕಮಲದಲ್ಲಿ ಯಾವಾಗಲೂ ಧ್ಯಾನಿಸುವಂತಹ ಮಂಗಳರನಾದ ಈಶಾನದೇವನನ್ನು ನಮಸ್ಕರಿಸುತ್ತೇನೆ!

೬೦-೬೧. ರುದ್ರದೇವನೇ! ವಕ್ಷಃಸ್ಥಳದಲ್ಲಿ ಪಾರ್ವತೀದೇವಿಯ ಕುಚ ಪಟಸಂಪರ್ಕದಿಂದ ಮಂಗಳಕರವಾದ ಶರೀರವುಳ್ಳ, ಪದ್ಮದಂತೆ ಪ್ರಕಾಶಮಾನ ನಾದ ನಿನಗೆ ಯಾವಾಗಲೂ ನಮಸ್ಕಾರಮಾಡುವೆನು!

೬೧-೬೨. ಭೀಕರಭಾವವನ್ನು ತೋರುವವನಿಗೆ ನಮಸ್ಕಾರ! ಭಯಂ ಕರ ವಿಹಾರವುಳ್ಳ ನಿನಗೆ ವಂದನೆ! ಭಯಪರಿಹಾರಕನಾದ ನಿನಗೆ ನಮಸ್ಕಾರ! ಉಗ್ರಕೋಪಿಯಾದ ನಿನಗೆ ನಮಸ್ಕಾರ!

೬೨-೬೩. ನಾಲ್ಕು ಕುದುರೆಗಳನ್ನು ಕಟ್ಟಿರುವ ರಥದಲ್ಲಿಟ್ಟಿರುವ ಪಾದಗ ಳಿಂದಲೂ, ಧನುರ್ಬಾಣಯುಕ್ತವಾದ ಬಾಹುಗಳಿಂದಲೂ ತ್ರಿಪುರಾಸುರರನ್ನು ಸಂಹರಿಸಿದ ಸ್ವಾಮಿಯೇ! ನಿನಗೆ ನಮಸ್ಕಾರ!

೬೩-೬೪. ಶಂಕರಾ! ವಾಸುಕಿಯನ್ನೇ ಬಿಲ್ಲಿನಹಗ್ಗವಾಗಿ ಮಾಡಿಕೊಂ ಡಿರುವ ನಿನಗೆ ನಮಸ್ಕಾರ! ಪಕ್ಷಿರೂಪನಾದ ನಿನಗೆ ನಮಸ್ಕಾರ! ಮೇರುಪರ್ವತ

ಮಹತೇ ಮೇರುರೂಪಾಯ ನಮಸ್ತೇ ಅಸ್ತು ಧನ್ವನೇ ।
ನಮಃ ಪರಶವೇ ತೇಽಸ್ತು ಶೂಲಾಯಾತುಲರೋಚಿಷೇ ॥ ೩೪ ॥

ಹಯಗ್ರೀವಾತ್ಮನೇ ತುಭ್ಯಮುತೋತ ಇಷವೇ ನಮಃ ।
ದೈತ್ಯೇತರವಧೂಹಾರಹಾರಿಣೇ ಹರ ಯಾನಿ ತೇ ।
ಅನ್ಯಾನ್ಯಸ್ತ್ರಾಣ್ಯಹಂ ತೂಣ ಇದಂ ತೇಭ್ಯೋಽಕರಂ ನಮಃ ॥ ೬೫ ॥

ಧರಾಧರಸುತಾಲೀಲಾಸರೋಜಾಹೃತಬಾಹವೇ ।
ತಸ್ಮೈ ತುಭ್ಯಮಘೋರಾಯ ನಮೋ ಅಸ್ಮಾಕ್ರವಸ್ಯ ಚ ॥ ೬೬ ॥

ರಕ್ಷ ಮಾಮಜ್ಞಮಕ್ಷೀಣಾಮಶಿಕ್ಷಿತಮನನ್ಯಗಂ ।
ಅನಾಥಂ ದೀನಮಾಪನ್ನಂ ದರಿದ್ರಂ ನೀಲಲೋಹಿತೇ ॥ ೬೭ ॥

ದುರ್ಮುಖಂ ದುಷ್ಕ್ರಿಯಂ ದುಷ್ಟಂ ರಕ್ಷಮಾಮೀಶ ದುರ್ದಶಂ ।
ಆದ್ಧೃಶಾ ತಮಹಂ ನ ತ್ವದನ್ಯಂ ವಿಂದಾಮ ರಾಧಸೇ ॥ ೬೮ ॥

---

ದಂತೆ ಬೃಹದ್ರೂಪಿಯಾದ ನಿನಗೆ ನಮಸ್ಕಾರ! ಧನುಸ್ಸು, ಪರಶು, ಶೂಲ ಇವು ಗಳನ್ನು ಧರಿಸಿರುವ ಅಸದೃಶ ಕಾಂತಿಯುಳ್ಳ ನಿನಗೆ ನಮಸ್ಕಾರ!

೬೫. ಹಯಗ್ರೀವಾತ್ಮಕನಾದ ನಿನಗೆ ನಮಸ್ಕಾರ! ನಿನ್ನ ಧನುಸ್ಸಿಗೆ ವಂದನೆ! ದೈತ್ಯಸ್ತ್ರೀಯರ ಸೌಮಂಗಲ್ಯವನ್ನು ಅಪಹಾರಮಾಡಿದ ನಿನ್ನ ಬತ್ತ ಳಿಕೆಯಲ್ಲಿರುವ ಅಸ್ತ್ರಗಳಿಗೆಲ್ಲಾ ನಮಸ್ಕಾರಮಾಡುವೆನು!

೬೬. ಆಟಕ್ಕಾಗಿ ಪಾರ್ವತೀದೇವಿಗೆ ಕಮಲಗಳನ್ನು ತಂದುಕೊಟ್ಟ ಬಾಹುಗಳುಳ್ಳ, ಅಘೋರನಾದ ಆ ರುದ್ರದೇವನಿಗೆ ನಮಸ್ಕಾರ!

೬೭. ನೀಲಲೋಹಿತನಾದ ಶಿವನೇ! ಅಜ್ಞಾನಿಯು, ಅಶಿಕ್ಷಿತನು, ಬೇರೆ ಯಾರನ್ನೂ ನೆನೆಯದಿರುವವನು, ಅನಾಥನು, ದೀನನು, ನಿನ್ನನ್ನೇ ಶರಣು ಹೊಂದಿರುವವನು, ದರಿದ್ರನೂ ಆಗಿರುವ ನನ್ನನ್ನು ಕಾಪಾಡು!

೬೮. ಈಶ್ವರನೇ! ದುರ್ಮುಖ, ದುರ್ನಡತೆಯುಳ್ಳವನು, ದುಃಸ್ಥಿತಿ ಯನ್ನು ಹೊಂದಿದವನೂ ಆಗಿರುವ ನನ್ನನ್ನು ರಕ್ಷಿಸು! ನಾನಾದರೋ ಶ್ರೇಯಸ್ಸಿ ಗಾಗಿ ನಿನ್ನನ್ನೇ ಪೂರ್ಣಶ್ರದ್ಧೆಯಿಂದ ಆರಾಧಿಸುತ್ತಿರುವೆನು! ನೀನು ಹೊರತು ಇನ್ನೊಬ್ಬನಿಗೆ ಶರಣಾಗತನಾಗುವುದಿಲ್ಲ!

ಭವಾಖ್ಯೇನಾಗ್ನಿನಾ ಶಂಭೋ ರಾಗದ್ವೇಷಮದಾರ್ಚಿಷಾ ।
ದಯಾಲೋ ದಹ್ಯಮಾನಾನಾಮಸ್ಮಾಕಮವಿತಾ ಭವ ॥ ೬೯ ॥
ಪರದಾರಂ ಪರಾವಾಸಂ ಪರವಸ್ತ್ರಂ ಪರಾಶ್ರಯಂ ।
ಹರ ಪಾಹಿ ಪರಾನ್ನಂ ಮಾಂ ಪುರುಷಾಮನ್ಯುರುಷ್ಟುತ ॥ ೭೦ ॥
ಲೌಕಿಕೈರ್ಯತ್ಕೃತಂ ದುಷ್ಟೈರ್ನ ನಿವಾನಂ ಸಹಾಮಹೇ ।
ದೇವೇಶ ತವ ದಾಸೇಭ್ಯೋ ಭೂರಿದೋ ಭೂರಿ ದೇಹಿ ಮೇ ॥ ೭೧ ॥
ಕುಲೋಕಾನಾಮಪತ್ನ್ಯಾನಾಂ ಗರ್ವಿಣಾಮೀಶ ಪಶ್ಯತಾಂ ।
ಅಸ್ಮಭ್ಯಂ ಕ್ಷೇತ್ರಮಾಯುಶ್ಚ ವಸಸ್ಯಾರ್ಹತದಾಭರ ॥ ೭೨ ॥
ಯಾಂ ಜಾತೋ ಮಹತೀಂ ಲಜ್ಜಾಮಸ್ಮದೀಯಾಂ ಕೃಪಾನಿಧೇ ।
ತ್ವಮೇವ ವೇತ್ಸಿ ನಸ್ತೂರ್ಣಮಿದಂ ಸ್ತೋತೃಭ್ಯ ಆಭರ ॥ ೭೩ ॥

---

೬೯. ದಯಾಳುವಾದ ಶಂಭುದೇವನೇ! ರಾಗ, ದ್ವೇಷ, ಮದಗಳೆಂಬ ಜ್ವಾಲೆಗಳಿಂದ ಯುಕ್ತವಾದ ಸಂಸಾರವೆಂಬ ಅಗ್ನಿಯಿಂದ ದಹಿಸಲ್ಪಡುತ್ತಿರುವ ನಮ್ಮನ್ನು ರಕ್ಷಿಸು !

೭೦. ಬಹುನಾಮಗಳಿಂದ ಉತ್ತಮರಿಂದ ಹೊಗಳಿಸಿಕೊಳ್ಳಲ್ಪಡುತ್ತಿರುವ ಹರದೇವನೇ! ಪರಸ್ತ್ರೀ, ಇತರರ ಮನೆ, ಬೇರೆಯವರ ಬಟ್ಟೆ, ಪರಸೇವೆ ಮತ್ತು ಪರಾನ್ನ, ಇವುಗಳಿಂದಲೇ ಜೀವಿಸುತ್ತಿರುವ ನನ್ನನ್ನು ಕಾಪಾಡು !

೭೧. ದಾಸರಿಗೆ ಬಹುಫಲಗಳನ್ನು ಕೊಡುತ್ತಿರುವ ದೇವೇಶನೇ ! ದುಷ್ಟರಾದ ಲೌಕಿಕರು ಮಾಡುತ್ತಿರುವ ಅವಮಾನವನ್ನು ಸಹಿಸಲಾರೆನು ! ನನಗೆ ಬಂಗಾರವನ್ನು ಕೊಡು !

೭೨. ಸ್ವಾಮಿಯೇ ! ಕೇಳುವವರಿಲ್ಲದೇ ಅಹಂಕಾರಪಡುತ್ತಿರುವ, ದುರ್ಜನರ ಇದಿರಿಗೆ ಕ್ಷೇತ್ರ, ಆಯುಸ್ಸು ಮತ್ತು ವಾಸಾರ್ಹವಾದ ಮನೆ ಮುಂತಾದುವನ್ನು ನಮಗೆ ಕೊಡು !

೭೩. ಕರುಣಾನಿಧಿಯೇ ! ಐಶ್ವರ್ಯವಿಲ್ಲದೇ ನಮಗುಂಟಾಗಿರುವ ಮಹಾ ಲಜ್ಜೆಯನ್ನು ನೀನೇ ತಿಳಿದಿರುವೆ. ಆದಕಾರಣ ನಿನ್ನನ್ನು ಸ್ತುತಿಸುತ್ತಿರುವ ನಮಗೆ ಬೇಗ ಐಶ್ವರ್ಯವನ್ನು ದಯಪಾಲಿಸು !

ಜಾಯಾ ಮಾತಾ ಪಿತಾ ಚಾನ್ಯೇ ಮಾಂ ದ್ವಿಷಂತ್ಯಮಿತಂ ಕೃಶಂ |
ದೇಹಿ ಮೇ ಮಹತೀಂ ವಿದ್ಯಾಂ ರಾಯಾ ವಿಶ್ವಪುಷಾ ಸಹ || ೭೪ ||

ಅದೃಷ್ಟಾರ್ಥೇಷು ಸರ್ವೇಷು ದೃಷ್ಟಾರ್ಥೇಷ್ವಪಿ ಕರ್ಮಸು |
ಮೇರುಧನ್ವನ್ನಶಕ್ತೇಭ್ಯೋ ಬಲಂ ದೇಹಿ ತನೂಷು ನಃ || ೭೫ ||

ಲಬ್ಧಾನಿಷ್ಟಸಹಸ್ರಸ್ಯ ನಿತ್ಯಮಿಷ್ಟವಿಯೋಗಿನಃ |
ಹೃದ್ರೋಗಂ ಮಮ ದೇವೇಶ ಹರಿಮಾಣಂ ಚ ನಾಶಯ || ೭೬ ||

ಯೇ ಯೇ ರೋಗಾಃ ಪಿಶಾಚಾ ವಾ ನರಾ ದೇವಾಶ್ಚ ಮಾಮಿಹ |
ಬಾಧಂತೇ ದೇವತಾಃ ಸರ್ವಾ ನಿಬಾಧಸ್ವ ಮಹಾಮನಸಿ || ೭೭ ||

ತ್ವಮೇವ ರಕ್ಷಿತಾಸ್ಮಾಕಮನ್ಯಃ ಕಶ್ಚಿನ್ನ ವಿದ್ಯತೇ |
ತಸ್ಮಾತ್ ಸ್ವೀಕೃತ್ಯ ದೇವೇಶ ರಕ್ಷ ನೋ ಬ್ರಹ್ಮಣಸ್ಪತೇ || ೭೮ ||

---

೭೪. ಸ್ವಾಮೀ! ಪತ್ನೀ, ತಾಯಿ, ತಂದೆ ಮತ್ತು ಇತರರೂ ಸಹ, ಬಳಲಿರುವ ನನ್ನನ್ನು ಬಹುವಾಗಿ ದ್ವೇಷಿಸುತ್ತಿರುವರು. ಆದಕಾರಣ ದಯಾಳುವಾದ ನೀನು ವಿಶ್ವವರ್ಧಕವಾದ ಸಂಪತ್ತು, ಮಹಾವಿದ್ಯೆ ಇವುಗಳನ್ನು ನನಗೆ ಕೊಡು!

೭೫. ಮೇರುಧನ್ವನಾದ ಈಶ್ವರನೇ! ಅದೃಷ್ಟಫಲ ಮತ್ತು ದೃಷ್ಟಫಲಗಳನ್ನು ಕೊಡುವ ಕರ್ಮಗಳನ್ನು ಮಾಡಲಶಕ್ತರಾದ ನಮಗೆ ಅಂತಹ ಕರ್ಮಗಳನ್ನು ಮಾಡುವುದಕ್ಕನುಕೂಲವಾದ ಶಾರೀರಕಬಲವನ್ನು ಕೊಡು!

೭೬. ದೇವೇಶಾ! ನಿತ್ಯವೂ ಸಾವಿರಾರು ಅನಿಷ್ಟಗಳನ್ನು ಅನುಭವಿಸುತ್ತಿರುವ, ಇಷ್ಟವಾದುದನ್ನು ಕಾಣದಿರುವ ನನ್ನ ಮನೋವ್ಯಥೆಯನ್ನೂ, ಮೃತ್ಯುಯೋಗವನ್ನೂ ಪರಿಹರಿಸು!

೭೭. ಸ್ವಾಮಿಯೇ! ಈ ಲೋಕದಲ್ಲಿ ನನ್ನನ್ನು ಬಾಧಿಸುತ್ತಿರುವ ರೋಗ, ಪಿಶಾಚ, ಮನುಷ್ಯ, ದೇವ ಇವುಗಳನ್ನೆಲ್ಲಾ ದೊಡ್ಡವನಾದ ನೀನೇ ಪರಿಹರಿಸಬೇಕು!

೭೮. ಬ್ರಹ್ಮಪತಿಯಾದ ದೇವೇಶನೇ! ನೀನೇ ನನಗೆ ರಕ್ಷಕನು! ಇನ್ನಾರೂ ರಕ್ಷಕರಿಲ್ಲ! ಆದಕಾರಣ ನನ್ನನ್ನು ಅನಾಥನಾದ ಭಕ್ತನೆಂದು ಸ್ವೀಕರಿಸಿ ಕಾಪಾಡು!

ತ್ವಮೇವೋಮಾಪತೇ ಮಾತಾ ತ್ವಂ ಪಿತಾ ತ್ವಂ ಪಿತಾಮಹಃ |
ತ್ವಮಾಯುಸ್ತ್ವಂ ಮತಿಸ್ತ್ವಂ ಶ್ರೀರುತ ಭ್ರಾತೋತ ನಃ ಸ್ವಸಾ || ೭೯ ||

ಸಖಾ ಯತಸ್ತ್ವಂ ದೇವೇಶ ಕರ್ತಾ ಸರ್ವಸ್ಯ ಕರ್ಮಣಃ |
ತತಃ ಕ್ಷಮಸ್ವ ತತ್ಸರ್ವಂ ಯನ್ಮಯಾ ದುಷ್ಕೃತಂ ಕೃತಂ || ೮೦ ||

ತ್ವತ್ಸಮೋ ನ ಪ್ರಭುತ್ವೇನ ಫಲ್ಗುತ್ವೇನ ಚ ಮತ್ಸಮಃ |
ತತೋ ದೇವ ಮಹಾದೇವ ತ್ವಮಸ್ಮಾಕಂ ತವಾಸ್ಮ್ಯಹಂ || ೮೧ ||

ಸುಸ್ಮಿತಂ ಭಸ್ಮಗೌರಾಂಗಂ ತರುಣಾದಿತ್ಯವಿಗ್ರಹಂ |
ಪ್ರಸನ್ನವದನಂ ಸೌಮ್ಯಂ ಗಾಯೇ ತ್ವಾಂ ನಮಸಾ ಗಿರಾ || ೮೨ ||

ಏಷ ಏವ ವರೋಽಸ್ಮಾಕಂ ನೃತ್ಯಂತಂ ತ್ವಾಮುಮಾಪತಿಂ |
ಲೋಕಯಂತಮುಮಾಕಾಂತಂ ಪಶ್ಯೇಮ ಶರದಃ ಶತಂ || ೮೩ ||

---

೭೯. ಪಾರ್ವತೀಪತಿಯೇ! ನನಗೆ ನೀನೇ ಮಾತೆಯು! ನೀನೇ ಪಿತೃವು! ಪಿತಾಮಹನೂ ನೀನೇ! ಆಯುಸ್ಸು, ಬುದ್ಧಿ, ಐಶ್ವರ್ಯ, ಸಹೋದರ, ಸೋದರಿ ಎಲ್ಲವೂ ನೀನೇ ಆಗಿರುವೆ!

೮೦. ನೀನೇ ಸಕಲಕರ್ಮಗಳಿಗೂ ಸ್ವತಂತ್ರಕರ್ತನಾದಕಾರಣ ನೀನೇ ನನಗೆ ಹಿತಕಾರಿಯಾದ ಸಖನು! ಆದಕಾರಣ ನಾನು ಮಾಡಿರುವ ದುಷ್ಕೃತ್ಯಗಳನ್ನೆಲ್ಲಾ ಕ್ಷಮಿಸಬೇಕು.

೮೧. ಪ್ರಭುಗಳಲ್ಲಿ ನಿನಗೆ ಸಮರಾರೂ ಇಲ್ಲ. ಅಲ್ಪರಲ್ಲಿ ನನಗೆ ಸಮರಾರೂ ಇಲ್ಲ. ಆದಕಾರಣ ಮಹಾದೇವ! ನೀನೇ ನಮಗೆ ದೇವನು! ನಾನು ನಿನ್ನ ದಾಸನಾಗಿರುವೆನು!

೮೨. ಸ್ವಾಮೀ! ಮಂದಹಾಸಯುಕ್ತವು, ಭಸ್ಮ ಲೇಪನೆಯಿಂದ ಗೌರವರ್ಣವಾಗಿರುವ ಅವಯವಗಳುಳ್ಳವನು, ತರುಣಸೂರ್ಯನಂತೆ ಹೊಳೆಯುತ್ತಿರುವ ಶರೀರವುಳ್ಳವನು, ಪ್ರಸನ್ನಮುಖನು, ಸೌಮ್ಯನೂ ಆದ ನಿನ್ನನ್ನು ನಮಸ್ಕಾರಧ್ವನಿಯಿಂದ ಗಾನಮಾಡುವೆನು!

೮೩. ನರ್ತನಮಾಡುತ್ತಿರುವ, ಉಮಾಪತಿಯಾದ, ನಮ್ಮಿಂದ ನೋಡಲ್ಪಡುತ್ತಿರುವ, ಉಮಾಕಾಂತನನ್ನು ನೂರು ವರ್ಷಗಳಕಾಲ ದರ್ಶನಮಾಡಬೇಕೆಂಬುದೇ ನಮ್ಮ ವರವು!

ಆರೋಗಿಣೋ ಮಹಾಭಾಗ ವಿದ್ವಾಂಸಶ್ಚ ಬಹುಶ್ರುತಾಃ ।
ಭಗವಂಸ್ತ್ವತ್ಪ್ರಸಾದೇನ ಜೀವೇಮ ಶರದಃ ಶತಂ ॥ ೮೪ ॥

ಸದಾರಾ ಬಂಧುಭಿಃ ಸಾರ್ಧಂ ತ್ವದೀಯಂ ತಾಂಡವಾಮೃತಂ ।
ಪಿಬಂತಃ ಕಾಮಮೀಶಾನ ನಂದಾಮ ಶರದಃ ಶತಂ ॥ ೮೫ ॥

ದೇವದೇವ ಮಹಾದೇವ ತ್ವದೀಯಾಂಘ್ರಿಸರೋರುಹಂ ।
ಕಾಮಂ ಮಧುಮಯಂ ಪೀತ್ವಾ ಮೋದಾಮ ಶರದಃ ಶತಂ ॥ ೮೬ ॥

ಕೇಽಪಿ ನಾಗಾಃ ಪಿಶಾಚಾ ವಾ ಯೇ ವಾ ಕೇವಾ ಭವೇಭವೇ ।
ತವ ದಾಸಾ ಮಹಾದೇವ ಭವಾಮ ಶರದಃ ಶತಂ ॥ ೮೭ ॥

ಸಭಾಯಾಮೀಶ ತೇ ದೇವ ನೃತ್ಯವಾದ್ಯಗಲಸ್ವನಂ ।
ಶ್ರವಣಾಭ್ಯಾಂ ಮಹಾದೇವ ಶೃಣುಯಾಮ ಶರದಃ ಶತಂ ॥ ೮೮ ॥

---

೮೪. ಮಹಾನುಭಾವನಾದ ಭಗವಂತನೇ! ನಿನ್ನ ಅನುಗ್ರಹದಿಂದ ನಾವು ವಿದ್ವಾಂಸರು, ಬಹುಶ್ರುತರೂ ಆಗಿ ರೋಗಬಾಧೆಯಿಲ್ಲದೇ ನೂರು ವರ್ಷ ಬದುಕಬೇಕು!

೮೫. ಈಶಾನದೇವಾ! ಪತ್ನೀ ಬಂಧುಗಳ ಸಹಿತವಾಗಿ ನಿನ್ನ ತಾಂಡವ ಸುಧೆಯನ್ನು ಯಥೇಷ್ಟವಾಗಿ ಪಾನಮಾಡುತ್ತಾ ನೂರು ವರ್ಷಗಳು ನಾವು ಸಂತೋಷದಿಂದಿರಬೇಕು !

೮೬. ದೇವದೇವನಾದ ಮಹಾದೇವನೇ! ಮಧುವಿನಿಂದ ತುಂಬಿರುವ ನಿನ್ನ ಪಾದಕಮಲವನ್ನು ಸೇವಿಸುತ್ತಾ ನೂರಾರುವರ್ಷಗಳು ಸಂತೋಷ ಪಡಬೇಕು!

೮೭. ಸರ್ಪ, ಪಿಶಾಚ, ಮುಂತಾದ ಯಾವಜನ್ಮವೇ ಬರಲಿ ಆ ಜನ್ಮಗಳಲ್ಲೆಲ್ಲಾ ಮಹಾದೇವಾ! ಬಹುಕಾಲ ನಿನ್ನ ದಾಸರೇ ಆಗಿರಬೇಕು!

೮೮. ಈಶ್ವರದೇವನೇ! ಸಭೆಯಲ್ಲಿ ನೀನು ಮಾಡುವ ನರ್ತನವಾದ್ಯಗಳ ಧ್ವನಿಯನ್ನು ನೂರಾರುವರ್ಷಗಳ ಕಾಲ ಎರಡುಕಿವಿಗಳಿಂದಲೂ ಕೇಳುತ್ತಿರಬೇಕು!

ಸ್ಮೃತಿಮಾತ್ರೇಣ ಸಂಸಾರವಿನಾಶನಕರಾಣಿ ತೇ ।
ನಾಮಾನಿ ಖಲು ದಿವ್ಯಾನಿ ಬ್ರುವಾಮ ಶರದಃ ಶತಂ ॥ ೮೯ ॥
ಇಷುಸಂಧಾನಮಾತ್ರೇಣ ದಗ್ಧತ್ರಿಪುರಧೂರ್ಜಟೇ ।
ಆಧಿಭಿರ್ವ್ಯಾಧಿಭಿರ್ನಿತ್ಯಮಜಿತಾಃ ಸ್ಯಾಮ ಶರದಃ ಶತಂ ॥ ೯೦ ॥
ಚಾರುಚಾಮೀಕರಾಭಾಸಂ ಗೌರೀಕುಚಪಟೀರಸಂ ।
ಕದಾನುಲೋಕಯಿಷ್ಯಾಮಿ ಯುವಾನಂ ವಿಟ್ಪತಿಂ ಕವಿಂ ॥ ೯೧ ॥
ಪ್ರಮಥೇಂದ್ರಾವೃತಂ ಪ್ರೀತವದನಂ ಪ್ರಿಯವಾಸಸಂ ।
ಸೇವಿಷ್ಯೇಽಹಂ ಕದಾ ಸಾಂಬಂ ಸುಭಾಸಂ ಶುಕ್ರಶೋಚಿಷಂ ॥ ೯೨ ॥
ಬಹ್ವೇನಸಂ ಮಾಮಕೃತಪುಣ್ಯಲೇಶಂ ಚ ದುರ್ಮತಿಂ ।
ಸ್ವೀಕರಿಷ್ಯತಿ ಕಿಂನ್ವೀಶೋ ನೀಲಗ್ರೀವೋ ವಿಲೋಹಿತಃ ॥ ೯೩ ॥

---

೮೯. ಮಹಾದೇವಾ ! ಸ್ಮರಣೆ ಮಾಡುವ ಮಾತ್ರದಿಂದ ಸಂಸಾರ ಬಂಧವನ್ನು ಪರಿಹರಿಸುವ ನಿನ್ನ ದಿವ್ಯನಾಮಗಳನ್ನು ನೂರಾರು ವರ್ಷಗಳಕಾಲ ನಾವು ಕೀರ್ತನಮಾಡುತ್ತಿರಬೇಕು !

೯೦. ಧನುಸ್ಸನ್ನು ಸಂಧಾನಮಾಡುವ ಮಾತ್ರದಿಂದ ತ್ರಿಪುರಗಳನ್ನು ದಹಿಸಿದ ಧೂರ್ಜಟಿಸ್ವಾಮಿಯೇ ! ನಿನ್ನ ಅನುಗ್ರಹದಿಂದ ನೂರಾರು ವರ್ಷಗಳ ಕಾಲದವರೆಗೆ ಆಂತರ ಮತ್ತು ಬಾಹ್ಯವ್ಯಾಧಿಗಳನ್ನು ಜಯಿಸಿಕೊಂಡಿರಬೇಕು !

೯೧. ಮನೋಹರ ಚಿನ್ನದಂತೆ ಹೊಳೆಯುತ್ತಿರುವ, ಗೌರೀದೇವಿಯಿಂದಾಲಿಂಗಿತನಾದ, ಯುವಕನು, ದಿಕ್ಪಾಲಕನೂ ಆದ ಕವೀಶ್ವರನನ್ನು ಯಾವಾಗ ನೋಡಿಯೇನು ?

೯೨. ಪ್ರಮಥಪತಿಗಳಿಂದ ಪರಿವೃತನು, ಪ್ರಸನ್ನಮುಖನು, ಪ್ರಿಯವಸ್ತ್ರವನ್ನು ಧರಿಸಿರುವವನು, ಅತ್ಯಂತಕಾಂತಿಮಂತನು, ಶುಕ್ರನಂತೆ ಹೊಳೆಯುತ್ತಿರುವವನೂ ಆದ ಸಾಂಬಮೂರ್ತಿಯನ್ನು ನಾನು ಯಾವಾಗ ಸೇವಿಸಿಯೇನು ?

೯೩. ನೀಲಗ್ರೀವನೂ, ವಿಲೋಹಿತನೂ ಆದ ಈಶ್ವರನು ಬಹುಪಾಪಗಳನ್ನು ಮಾಡಿರುವ, ಅಲ್ಪಪುಣ್ಯವನ್ನೂ ಮಾಡದಿರುವ ದುರ್ಮತಿಯಾದ ನನ್ನನ್ನು ಪುರಸ್ಕರಿಸುವನೇ ಏನು ?

ಕಾಲಶೂಲಾನಲಾಸಕ್ತಂ ಭೀತಂ ವ್ಯಾಕುಲಮಾನಸಂ ।
ಕದಾಸುದ್ರಕ್ಷ್ಯತೀಶೋ ಮಾಂ ಕಂಬುಗ್ರೀವಃ ಸನಾತನಃ ॥ ೯೪ ॥

ಗಾಯಕಾ ಯೂಯಮಾಯಾತ ಯದಿ ರಾಗಾದಿಲಿಪ್ಸವಃ ।
ಧನದಸ್ಯ ಸಖಾಯಂ ತಮುಪಾಸ್ಮ ಗಾಯತಾಂ ವರಾಃ ॥ ೯೫ ॥

ಸ್ವಸ್ತ್ಯಸ್ತು ಸಖಿ ತೇ ಜಿಹ್ವೇ ವಿದ್ಯಾದಾತುರುಮಾಪತೇಃ ।
ಸ್ತವಮುಚ್ಚೈತರಂ ಬ್ರೂಹಿ ಜಯತಾಮಿವ ದುಂದುಭಿಃ ॥ ೯೬ ॥

ಚೇತ ಯೋಜನ ಶಾಂತಸ್ತ್ವಂ ನೇದಂ ವೇದಾಖಿಲಂ ಜಗತ್ ।
ಅಸ್ಯ ತೃಪ್ತ್ಯಾಖಿಲಂ ಶಂಭೋರ್ಗೌರಂ ತತ್ತ್ರ್ಯುಷಿತಃ ಪಿಬ ॥ ೯೭ ॥

ಸುಗಂಧಿಂ ಚ ಸುಖಸ್ಪರ್ಶಂ ಕಾಮದಂ ಸೋಮಭೂಷಣಂ ।
ಗಾಢಮಾಲಿಂಗ ಮಚ್ಚಿತ್ತ ಯೋಷಾ ಜಾರಮಿವ ಪ್ರಿಯಂ ॥ ೯೮ ॥

---

೯೪. ಕಂಬುಕಂಠನು, ಸನಾತನನೂ ಆದ ಈಶ್ವರನು ಯಮನ|ಬಾಧೆಯೆಂಬ ಬೆಂಕಿಗೆ ಸಿಲುಕಿ ಭಯಪಟ್ಟು ವ್ಯಗ್ರಚಿತ್ತನಾಗಿರುವ ನನ್ನನ್ನು ಯಾವಾಗ ಕಣ್ಣೆತ್ತಿ ನೋಡಿಯಾನು ?

೯೫. ಗಾಯಕರೇ ! ನೀವು ರಾಗಾದಿಗಳನ್ನು ಬಯಸುವುದೇ ಆದರೆ ಬನ್ನಿರಿ; ಗಾಯಕವರ್ಯರೇ ! ಕುಬೇರಸಖನಾದ ಆ ಈಶಾನದೇವನನ್ನು ಭಜಿಸೋಣ !

೯೬. ಸಖಿ ! ಜಿಹ್ವೇ ! ನಿನಗೆ ಮಂಗಳವಾಗಲಿ ! ನಗಾರಿಯು ಗಟ್ಟಿಯಾಗಿ ಜಯಧ್ವನಿಮಾಡುವಂತೆ ವಿದ್ಯಾದಾಯಕನಾದ ಪಾರ್ವತೀಪತಿಯ ಸ್ತೋತ್ರವನ್ನು ಗಟ್ಟಿಯಾಗಿ ಹೇಳು !

೯೭. ಧ್ಯಾನದಿಂದ ಶಾಂತನಾದ ನೀನು ಈ ಜಗತ್ತನ್ನು ಸಮಗ್ರವಾಗಿ ತಿಳಿಯುವುದಿಲ್ಲ. ಈ ಶಂಭುದೇವನ ತೃಪ್ತಿಯಿಂದಲೇ ಸಕಲವೂ ತೃಪ್ತವಾಗುವುದು. ಚಿತ್ತವೇ ! ಇವನ ನಿರ್ಮಲಮಹಿಮೆಯನ್ನು ಆದರದಿಂದ ತಿಳಿ !

೯೮. ಸ್ತ್ರೀಯು ಪ್ರಿಯನಾದ ಜಾರಪುರುಷನನ್ನಾಲಂಗಿಸುವಂತೆ ಚಿತ್ತವೇ! ನೀನು ಸುಗಂಧನು, ಸುಖಕರಸ್ಪರ್ಶವುಳ್ಳವನು, ಇಷ್ಟದಾಯಕನೂ ಆಗಿರುವ ಚಂದ್ರಶೇಖರನನ್ನು ಗಾಢಾಲಿಂಗನೆ ಮಾಡಿಕೊ !

ಮಹಾಮಯೂಖಾಯ ಮಹಾಭುಜಾಯ
ಮಹಾಶರೀರಾಯ ಮಹಾಂಬರಾಯ ।
ಮಹಾಕಿರೀಟಾಯ ಮಹೇಶ್ವರಾಯ
ಮಹಾಮಹಾಸುಷ್ಟು ತಿಮೀರಯಾಮಿ ॥ ೯೯ ॥

ಯಥಾಕಥಂಚಿದ್ರಚಿತಾಭಿರೀಷತ್
ಪ್ರಸನ್ನತೋ ಚಾರುಭಿರಾದರೇಣ ।
ಪ್ರಪೂಜಯಾಮಿ ಸ್ತುತಿಭಿರ್ಮಹೇಶ
ಮಬಾಲಮುಗ್ರಂ ಸಹಸಾ ನಮಾಮಿ ॥ ೧೦೦ ॥

ನಮಃ ಶಿವಾಯ ತ್ರಿಪುರಾಂತಕಾಯ
ಜಗತ್ತ್ರಯೇಶಾಯ ದಿಗಂಬರಾಯ ।
ನಮೋಽಸ್ತು ಮುಖ್ಯಾಯ ಹರಾಯ ಭೂಯೋ
ನಮೋ ಜಘನ್ಯಾಯ ಚ ಬುಧ್ನಿಯಾಯ ॥ ೧೦೧ ॥

---

೯೯. ಮಹಾಕಾಂತಿಮಂತನು, ದೊಡ್ಡಬಾಹುಗಳುಳ್ಳವನು, ದೊಡ್ಡ ಶರೀರವನ್ನು ತಾಳಿರುವವನು, ಮಹತ್ತಾದ ವಸ್ತ್ರವನ್ನುಟ್ಟಿರುವವನು, ದೊಡ್ಡ ಕಿರೀಟಧಾರಿಯೂ ಆದ ಮಹೇಶ್ವರನಿಗೆ ಮಹಾ ಮಹಾ ಸ್ತುತಿಯನ್ನು ಹೇಳುವೆನು.

೧೦೦. ಬಾಲಕನಲ್ಲದ, ಉಗ್ರರೂಪಿಯಾದ ಮಹೇಶ್ವರನನ್ನು ಅವನ ಪ್ರಸಾದಕ್ಕಾಗಿ ಹೇಗಾದರೂ ಮಾಡಿದ ಸ್ತುತಿಗಳಿಂದ ಭಕ್ತಿಪೂರ್ವಕವಾಗಿ ಸ್ವಲ್ಪ ಮಟ್ಟಿಗೆ ಪೂಜಿಸುವೆನು ಮತ್ತು ನಮಸ್ಕರಿಸುವೆನು !

೧೦೧. ತ್ರಿಪುರಸಂಹಾರಕನು, ಮೂರುಲೋಕಗಳೊಡೆಯನು, ದಿಗಂಬರನೂ ಆದ ಶಿವನಿಗೆ ನಮಸ್ಕಾರ! ಮುಖ್ಯದೇವನಾದ ಲಿಂಗರೂಪಿ ಹರನಿಗೆ ಪುನಃ ಪುನಃ ನಮಸ್ಕಾರಮಾಡುವೆನು !

ನಮೋ ವಿಕಾರಾಯ ವಿಕಾರಿಣೇ ತೇ
ನಮೋ ಭವಾಯಾಸ್ತು ಭವೋದ್ಭವಾಯ |
ಬಹುಪ್ರಜಾತ್ಯಂತವಿಚಿತ್ರರೂಪ
ಯತಃ ಪ್ರಸೂತಾ ಜಗತಃ ಪ್ರಸೂತಿಃ || ೧೦೨ ||

ತಸ್ಮೈ ಸುರೇಶೋರುಕಿರೀಟನಾನಾ
ರತ್ನಾವೃತಾಷ್ಟಾಪದವಿಷ್ಟರಾಯ |
ಭಸ್ಮಾಂಗರಾಗಾಯ ನಮಃ ಪರಸ್ಮೈ
ಪರಾತ್ಪರಂ ನಾಪರಮಸ್ತಿ ಕಿಂಚಿತ್ || ೧೦೩ ||

ಸರ್ಪಾಧಿರಾಜೌಷಧಿನಾಥಯುದ್ಧ
ಕ್ಷುಭ್ಯಜ್ಜಟಾಮಂಡಲಗಹ್ವರಾಯ |
ತುಭ್ಯಂ ನಮಃ ಸುಂದರತಾಂಡವಾಯ
ಯಸ್ಮಿನ್ನಿದಂ ಸಂಚವಿಶೈತಿ ಸರ್ವಂ || ೧೦೪ ||

---

೧೦೨. ಈಶ್ವರನೇ! ಅವಿಕಾರಿಯು ಮತ್ತು ವಿಕಾರಿಯೂ ಆಗಿರುವ ನಿನಗೆ ನಮಸ್ಕಾರ! ಜಗತ್ತನ್ನು ಹುಟ್ಟಿಸುವ ಭವನಿಗೆ ನಮಸ್ಕಾರ! ಜಗನ್ಮಾತೆಯು ಯಾರಿಂದ ಉದ್ಭವಿಸಿದಳೋ ಅಂತಹ, ಬಹುಪ್ರಜನು, ಅತ್ಯಂತ ಆಶ್ಚರ್ಯಕರ ರೂಪವುಳ್ಳವನೂ ಆದ ಈಶ್ವರದೇವನೇ! ನಿನಗೆ ನಮಸ್ಕಾರ!

೧೦೩. ದೇವೇಶರ ಕಿರೀಟಗಳಲ್ಲಿರುವ ನಾನಾರತ್ನಗಳಿಂದ ಆವೃತವಾದ ಬಂಗಾರದ ಪೀಠದಲ್ಲಿ ಕುಳಿತಿರುವ, ಭಸ್ಮಲೇಪನೆಯಿಂದ ಕೆಂಪಾದ ಅವಯವವುಳ್ಳ ಉತ್ತಮನಾದ ಆ ದೇವನಿಗೆ ನಮಸ್ಕಾರ! ಅವನೇ ಉತ್ತಮೋತ್ತಮನು!

೧೦೪. ವಾಸುಕಿಚಂದ್ರರ ಯುದ್ಧದಿಂದ ಕ್ಷೋಭೆಯನ್ನು ಹೊಂದಿರುವ ಜಟೆಗಳ ಸಮೂಹವೆಂಬ ಲತಾಗೃಹವುಳ್ಳ, ಮನೋಹರವಾಗಿ ನರ್ತನಮಾಡುತ್ತಿರುವ, ಸಕಲಜಗತ್ತನ್ನೂ ತನ್ನಲ್ಲಿ ಅಡಗಿಸಿಕೊಂಡಿರುವ ದೇವಾ! ನಿನಗೆ ನಮಸ್ಕಾರ!

ಮುರಾರಿನೇತ್ರಾರ್ಚಿತಪಾದಪದ್ಮಂ
ಪುಮಾಂಘ್ರಿಲಾಕ್ಷಾಪರಿರಕ್ತಪಾಣಿಂ ।
ನಮಾಮಿ ದೇವಂ ವೃಷನೀಲಕಂಠಂ
ಹಿರಣ್ಯದಂತಂ ಶುಚಿವರ್ಣಪೂರಾತ್ ॥ ೧೦೫ ॥

ಅನಂತಮವ್ಯಕ್ತಮಚಿಂತ್ಯಮೇಕಂ
ಹರಂತಮಾಶಾಂಬರಮಂಬರಾಂಗಂ ।
ಅಜಂ ಪುರಾಣಂ ಪ್ರಣಮಾಮಿ ಯೋಽಪ
ಮಣೋರಣೀಯಾನ್ಮಹತೋ ಮಹೀಯಾನ್ ॥ ೧೦೬ ॥

ಅಂತಃಸ್ಥಮಾತ್ಮಾನಮಜಂ ನ ದೃಷ್ಟ್ವಾ
ಭ್ರಮಂತಿ ಮೂಢಾ ಗಿರಿಗಹ್ವರೇಷು ।
ಪಶ್ಚಾದುದಗ್ದಕ್ಷಿಣತಃ ಪುರಸ್ತಾ
ದಧಃ ಸ್ವಿದಾಸೀದುಪರಿ ಸ್ವಿದಾಸೀತ್ ॥ ೧೦೭ ॥

---

೧೦೫. ಮುರಾರಿನೇತ್ರಾರ್ಚಿತವಾದ ಚರಣಕಮಲವುಳ್ಳ, ಪಾರ್ವತೀದೇವಿಯ ಪಾದದಮೇಲೆ ಹಚ್ಚಿಕೊಂಡಿರುವ ಲಾಕ್ಷಾರಸದಿಂದ ಸುತ್ತಲೂ ಕೆಂಪಾಗಿರುವ ಹಸ್ತಗಳುಳ್ಳ, ಸುವರ್ಣದ ಹಲ್ಲುಗಳುಳ್ಳ, ಶುಭ್ರವರ್ಣೋಪೇತನಾದ ವೃಷನೀಲಕಂಠ ದೇವನನ್ನು ನಮಸ್ಕರಿಸುವೆನು !

೧೦೬. ನಾಶರಹಿತನು, ಅವ್ಯಕ್ತನು, ಅಚಿಂತ್ಯನು, ಅದ್ವಿತೀಯನು, ಆಶೆಯನ್ನು ಪರಿಹರಿಸುವವನು, ದಿಗಂಬರನು, ಉತ್ಪತ್ತಿಯಿಲ್ಲದವನು, ಪುರಾತನನು, ಸಣ್ಣವಸ್ತುಗಳಲ್ಲಿ ಅದಕ್ಕಿಂತ ಸಣ್ಣದಾಗಿಯೂ, ದೊಡ್ಡವಸ್ತುಗಳಲ್ಲಿ ದೊಡ್ಡರೂಪದಿಂದಲೂ ಇರುವವನೂ ಆಗಿರುವ ಸ್ಥಾಣುದೇವನನ್ನು ನಮಸ್ಕರಿಸುವೆನು !

೧೦೭. ಅಜ್ಞಾನಿಗಳು ತಮ್ಮೊಳಗೆ ಹೃದಯದಲ್ಲಿಯೇ ಇರುವ ಅನಾದಿಯಾದ ಆತ್ಮನನ್ನು ತಿಳಿಯದೆ ಪರ್ವತಗುಹೆಗಳಲ್ಲಿಯೂ, ಪಶ್ಚಿಮ, ಉತ್ತರ, ದಕ್ಷಿಣ, ಪೂರ್ವ ದಿಕ್ಕುಗಳಲ್ಲಿಯೂ ಕೆಳಮೇಲ್ಭಾಗಗಳಲ್ಲಿಯೂ ಆತ್ಮನನ್ನು ನೋಡಲು ತಿರುಗುತ್ತಿರುವರು.

ಇಮಂ ನಮಾಮೀಶ್ವರಮಿಂದುಮೌಲೀ
ಶಿವಂ ಮಹಾನಂದಮಶೋಕದುಃಖಂ ।
ಹೃದಂಬುಜೇ ತಿಷ್ಠತಿ ಯಃ ಪರಾತ್ಮಾ
ಯತಶ್ಚ ಸರ್ವಾಃ ಪ್ರದಿಶೋ ದಿಶಶ್ಚ ॥ ೧೦೮ ॥

ರಾಗಾದಿಕಾಪಥ್ಯಸಮುದ್ಭವೇನ
ಭ್ರಾಂತಂ ಭವಾಖ್ಯೇನ ಮಹಾಮಯೇನ ।
ವಿಲೋಕ್ಯ ಮಾಂ ಪಾಲಯ ಚಂದ್ರಮೌಲೇ
ಭಿಷಕ್ತಮಂ ತ್ವಾಂ ಭಿಷಜಾಂ ಶೃಣೋಮಿ ॥ ೧೦೯ ॥

ದುಃಖಾಂಬುರಾಶಿಂ ಸುಖಲೇಶಹೀನ
ಮಸ್ಪೃಷ್ಟಪುಣ್ಯಂ ಬಹುಪಾತಕಂ ಮಾಂ ।
ಮೃತ್ಯೋಃ ಕರಸ್ಥಂ ಭವ ರಕ್ಷ ಭೀತಂ
ಪಶ್ಚಾತ್ಪುರಸ್ತಾದಧರಾದುದಕ್ತಾತ್ ॥ ೧೧೦ ॥

---

೧೦೮. ಚಂದ್ರಶೇಖರನು, ಮಂಗಳಕರನು, ಮಹತ್ತಾದ ಆನಂದವುಳ್ಳವನು, ಶೋಕದುಃಖಗಳಿಲ್ಲದವನು, ಹೃದಯಕಮಲದಲ್ಲಿಯೇ ಇರುವವನು, ದಿಕ್ಕು ಮತ್ತು ವಿದಿಕ್ಕುಗಳನ್ನು ಬೆಳಗುತ್ತಿರುವವನೂ ಆದ ಈಶ್ವರನನ್ನು ನಮಸ್ಕರಿಸುತ್ತೇನೆ !

೧೦೯. ಚಂದ್ರಮೌಳಿಯೇ ! ರಾಗ, ದ್ವೇಷ ಮುಂತಾದ ದೋಷಗಳಿಂದುಂಟಾದ ಸಂಸಾರವೆಂಬ ಮಹಾರೋಗದಿಂದ ನರಳುತ್ತಿರುವ ನನ್ನನ್ನು ಕೃಪಾದೃಷ್ಟಿಯಿಂದ ನೋಡಿ ಕಾಪಾಡು ! ನೀನು ವೈದ್ಯರಲ್ಲೆಲ್ಲಾ ಅತ್ಯಂತ ಶ್ರೇಷ್ಠ ವೈದ್ಯನೆಂದು ನಾನು ತಿಳಿದಿರುವೆನು.

೧೧೦. ರುದ್ರದೇವನೇ ! ದುಃಖಸಾಗರದಲ್ಲಿ ಮುಳುಗಿರುವವನು, ಸ್ವಲ್ಪ ಮಾತ್ರವೂ ಸುಖವಿಲ್ಲದವನು, ಪುಣ್ಯ ಸಂಪರ್ಕವೇ ಇಲ್ಲದವನು, ಬಹು ಪಾಪಕರ್ಮನು, ಮೃತ್ಯುವಿನ ಕೈಯಲ್ಲಿರುವವನು, ಹಿಂದೆ ಮುಂದೆ ಕೆಳಗೆ ಮೇಲೆ ಪಾರ್ಶ್ವಗಳಲ್ಲಿನ ವಿಪತ್ತುಗಳಿಗಾಗಿ ಭಯಹೊಂದಿರುವವನೂ ಆಗಿರುವ ನನ್ನನ್ನು ರಕ್ಷಿಸು!

ಗಿರೀಂದ್ರಜಾಚಾರುಮುಖಾವಲೋಕ
ಸುಶೀತಯಾ ದೇವ ತವೈವ ದೃಷ್ಟ್ಯಾ ।
ವಯಂ ದಯಾಪೂರಿತಯೈವ ಪೂರ್ಣ
ಭಯಾನನಾ ವಾ ದುರಿತಾತ್ತರೇಮ ॥ ೧೧೧ ॥

ಅಪಾರಸಂಸಾರಸಮುದ್ರಮಧ್ಯೇ
ನಿಮಗ್ನಮುತ್ಕ್ರೋಶಮನಲ್ಪರಾಗಂ ।
ಮಾಮಕ್ಷಮಂ ಪಾಹಿ ಮಹೇಶಜುಷ್ಟ
ಮೋಜಿಷ್ಠಯಾ ದಕ್ಷಿಣಯೇವ ರಾತಿಂ ॥ ೧೧೨ ॥

ಸ್ಮರನ್ ಪುರಾ ಸಂಚಿತಪಾತಕಾನಿ
ಸ್ಮರನ್ ಯಮಸ್ಯಾಪಿ ಮುಖಂ ಯಮಾರೇ ।
ಬಿಭೇಮಿ ಮೇ ದೇಹಿ ಯಥೇಷ್ಟಮಾಯು
ರ್ಯದಿ ಕ್ಷಿತಾಯುರ್ಯದಿ ವಾ ಪರೇತಃ ॥ ೧೧೩ ॥

---

೧೧೧. ದೇವಾ! ಸಂಪೂರ್ಣವಾಗಿ ಭಯಕಾತುರರಾದ ನಾವು ಪಾರ್ವತೀ ದೇವಿಯ ಸುಂದರ ಮುಖಾವಲೋಕನದಿಂದ ಶೀತಲವಾಗಿ ಮಾಡಲ್ಪಟ್ಟ, ದಯಾಪೂರ್ಣವಾದ ನಿನ್ನ ದೃಷ್ಟಿಯಿಂದಲೇ ಪಾಪಗಳನ್ನು ದಾಟಬೇಕು!

೧೧೨. ಮಹೇಶಾ! ದಾಟಲಶಕ್ಯವಾದ ಸಂಸಾರವೆಂಬ ಸಮುದ್ರದ ಮಧ್ಯದಲ್ಲಿ ಮುಳುಗಿ ಅರಚುತ್ತಿರುವ, ಬಹು ಆಶೆಯುಳ್ಳ, ಅಸಮರ್ಥನಾದ, ದುಃಖವನ್ನು ಅನುಭವಿಸುತ್ತಿರುವ ನನ್ನನ್ನು ಹೆಚ್ಚಿನ ತೇಜಸ್ಸನ್ನು ಕೊಟ್ಟು ಕಾಪಾಡು!

೧೧೩. ಯಮವೈರಿಯಾದ ಸ್ವಾಮಿಯೇ! ಹಿಂದೆ ಮಾಡಿರುವ ಪಾಪಗಳನ್ನು ಸ್ಮರಿಸಿಕೊಂಡು ಯಮರಾಜನ ಮುಖವನ್ನು ನೆನೆಸಿಕೊಂಡವನಾಗಿ ನಾನು ಭಯಪಟ್ಟಿರುವೆನು. ಸ್ವಾಮಿ! ನನಗೆ ಆಯುಸ್ಸು ಕ್ಷೀಣವಾಗಿದ್ದರೂ ಅಥವಾ ಮರಣ ಸನ್ನಿಹಿತವಾಗಿದ್ದರೂ ಸರಿ ದಯಾಳುವಾದ ನೀನು ನನಗೆ ಯಥೇಷ್ಟವಾಗಿ ಆಯುಸ್ಸನ್ನು ಕೊಟ್ಟು ಅನುಗ್ರಹಿಸಬೇಕು!

ಸುಗಂಧಿಭಿಃ ಸುಂದರಭಸ್ಮಗೌರೈ
ರನಂತಭೋಗೈರ್ಮೃದುಲೈರಘೋರೈಃ ।
ಇಮಂ ಕದಾಲಿಂಗತಿ ಮಾಂ ಪಿನಾಕೀ
ಸ್ಥಿರೇಭಿರಂಗೈಃ ಪುರುರೂಪ ಉಗ್ರಃ ॥ ೧೧೪ ॥

ಕ್ರೋಶಂತಮೀಶಂ ಪತಿತಂ ಭವಾಬ್ಧೌ
ನಾಕುಸ್ಥಮಂಡೂಕಮಿವಾತಿಭೀತಂ ।
ಕದಾನು ಮಾಂ ರಕ್ಷತಿ ದೇವದೇವೋ
ಹಿರಣ್ಯರೂಪಃ ಸ ಹಿರಣ್ಯಸಂದೃಕ್ ॥ ೧೧೫ ॥

ಚಾರುಸ್ಮಿತಂ ಚಂದ್ರಕಲಾವತಂಸಂ
ಗೌರೀಕಟಾಕ್ಷಾರುಹಯುಗ್ಮನೇತ್ರಂ ।
ಆಲೋಕಯಿಷ್ಯಾಮಿ ಕದಾನು ಸಾಂಬ
ಮಾದಿತ್ಯವರ್ಣಂ ತಮಸಃ ಪರಸ್ತಾತ್ ॥ ೧೧೬ ॥

---

೧೧೪. ಸುವಾಸನೆಯಿಂದ ಕೂಡಿರುವ, ಮನೋಹರಭಸ್ಮಲೇಪನೆಯಿಂದ ಗೌರವರ್ಣೋಪೇತವಾದ, ಅಪಾರ ಭೋಗಗಳಿಂದ ಯುಕ್ತವಾದ, ಮೃದುವಾಗಿರುವ, ಉಗ್ರವಾಗಿಲ್ಲದ, ಸ್ಥಿರವಾದ ತನ್ನ ಅವಯವಗಳಿಂದ ಬಹುರೂಪನಾದ ಈಶ್ವರನು ನನ್ನನ್ನು ಯಾವಾಗ ಆಲಂಗಿಸಿಯಾನು ?

೧೧೫. ಈಶ್ವರನನ್ನೇ ಮೊರೆಯಿಡುತ್ತಿರುವ, ಸಂಸಾರಸಮುದ್ರದಲ್ಲಿ ಬಿದ್ದಿರುವ, ಹುತ್ತದಲ್ಲಿರುವ ಕಪ್ಪೆಯಂತೆ ಅತ್ಯಂತ ಭಯಗೊಂಡಿರುವ ನನ್ನನ್ನು ಹಿರಣ್ಯರೂಪನೂ ಸುವರ್ಣನೇತ್ರನೂ ಆದ ದೇವದೇವನು ಯಾವಾಗ ರಕ್ಷಿಸಿಯಾನು ?

೧೧೬. ಮಂದಹಾಸಯುಕ್ತನು, ಚಂದ್ರಕಲೆಯಿಂದಲಂಕೃತನು, ಗೌರೀದೇವಿಯ ಕಟಾಕ್ಷವೀಕ್ಷಣೆಯಿಂದ ವಿಕಸಿತಗಳಾದ ನೇತ್ರಗಳುಳ್ಳವನು, ಕತ್ತಲೆಯಲ್ಲಿ ಉದಯಿಸಿದ ಸೂರ್ಯನಂತೆ ಹೊಳೆಯುತ್ತಿರುವವನೂ ಆದ ಸಾಂಬದೇವನನ್ನು ಯಾವಾಗ ನೋಡಿಯೇನು ?

ಅಗಚ್ಛತಾನಾದಿಮುಮುಕ್ಷವೋ ಯೇ
ಯೂಯಂ ಶಿವಂ ಚಿಂತಯತಾಂತರೇಚ್ಛೇ ।
ಧ್ಯಾಯಂತಿ ಮುಕ್ತ್ಯರ್ಥಮಮುಂ ಹಿ ನಿತ್ಯಂ
ವೇದಾಂತವಿಜ್ಞಾನಸುನಿಶ್ಚಿತಾರ್ಥಾಃ ॥ ೧೧೭ ॥

ಆಯಾತ ಯೂಯಂ ಭವತಾಧಿಪತ್ಯೇ
ಕಾಮಂ ಮಹೇಶಂ ಗಿರಿಶಂ ಯಜಧ್ವಂ ।
ಏವಂ ಪುರಾಭ್ಯರ್ಚ್ಯ ಹಿರಣ್ಯಗರ್ಭೋ
ಭೂತಸ್ಯ ಜಾತಃ ಪತಿರೇಕ ಆಸೀತ್ ॥ ೧೧೮ ॥

ಏಕಾಯನಂ ತಂ ವಿಪುಲಂ ಶ್ರಯಂತೇ
ಶ್ರೀಕಂಠಮೇನಂ ಸುಕೃತಾ ನಮಂತಿ ।
ಶ್ರೀಮಾನಯಂ ಶ್ರೀಪತಿವಂದ್ಯಪಾದಃ
ಶ್ರೀಣಾಮುದಾರೋ ಧರುಣೋ ರಯೀಣಾಂ ॥ ೧೧೯ ॥

---

೧೧೭. ವೇದಾಂತವಿಜ್ಞಾನದಿಂದ ಚೆನ್ನಾಗಿ ತತ್ವನಿಶ್ಚಯವನ್ನು ಹೊಂದಿರುವವರು ಮುಕ್ತಿಗೋಸ್ಕರ ಯಾವಾಗಲೂ ಈ ದೇವನನ್ನೇ ಧ್ಯಾನಿಸುತ್ತಿರುವರು. ಬಹುಕಾಲದಿಂದಲೂ ಮೋಕ್ಷವನ್ನು ಬಯಸುತ್ತಿರುವ ನೀವೂ ಬನ್ನಿರಿ! ಹೃದಯಕಮಲದಲ್ಲಿ ಶಿವನನ್ನು ಚಿಂತಿಸಿರಿ!

೧೧೮. ಪೂರ್ವದಲ್ಲಿ ಹಿರಣ್ಯಗರ್ಭನು ಈ ದೇವನನ್ನು ಪೂಜಿಸಿ ಭೂತಸಮುದಾಯಕ್ಕೆ ಏಕಪತಿಯಾದನು. ಆ ಪ್ರಕಾರ ಆಧಿಪತ್ಯವನ್ನು ಪಡೆಯುವುದಕ್ಕಾಗಿ ನೀವೂ ಸಹ ಯಥೇಷ್ಟವಾಗಿ ಗಿರೀಶನನ್ನು ಪೂಜೆಮಾಡಿರಿ!

೧೧೯. ಮುಖ್ಯಾಶ್ರಯನು, ದೊಡ್ಡದೇಹವುಳ್ಳವನೂ ಆದ ಶ್ರೀಕಂಠನನ್ನು ಪುಣ್ಯವಂತರು ಸೇವಿಸಿ ನಮಿಸುವರು. ಇಂತಹ ಶ್ರೀಕಂಠದೇವನು ಸ್ವತಃ ಐಶ್ವರ್ಯವಂತನು, ಅವನ ಪಾದಪದ್ಮವನ್ನು ಶ್ರೀಮಂತರು ಪೂಜಿಸುತ್ತಿರುವರು. ಅವನು ಉದಾರವಾಗಿ ಸಂಪತ್ತನ್ನು ಕೊಡುವನು.

ಸುಪುತ್ರಕಾಮಾ ಅಪಿ ಯೇ ಮನುಷ್ಯಾ
ಯುವಾನಮೇನಂ ಗಿರಿಶಂ ಯಜಂತಾಂ ।
ಯತಃ ಸ್ವಯಂಭೂರ್ಜಗತೋ ವಿಧಾತಾ
ಹಿರಣ್ಯಗರ್ಭಃ ಸಮವರ್ತತಾಗ್ರೇ ॥ ೧೨೦ ॥

ಅಲಂ ಕಿಮುಕ್ತೈರ್ಬಹುಭಿಃ ಸಮೀಹಿತಂ
ಸಮಸ್ತಮಸ್ಯಾಶ್ರಯಣೇನ ಸಿಧ್ಯತಿ ।
ಪುರೈನಮಾಶ್ರಿತ್ಯ ಹಿ ಕುಂಭಸಂಭವೋ
ದಿವಾ ನ ನಕ್ತಂ ಪಲಿತೋಽಯುತಾನಿ ॥ ೧೨೧ ॥

ಅನ್ಯತ್ಪರಿತ್ಯಜ್ಯ ಮಮಾಕ್ಷಿಭೃಂಗಾಃ
ಸರ್ವಂ ಸದೈನಂ ಶಿವಮಾಶ್ರಯಧ್ವಂ ।
ಆಮೋದವಾನೇಷ ಮೃದುಃ ಶಿವೋ ಯಃ
ಸ್ವಾದುಃ ಕಿಲಾಯಂ ಮಧುಮಾನುತಾಯಂ ॥ ೧೨೨ ॥

---

೧೨೦. ಜಗತ್ತನ್ನು ಸೃಷ್ಟಿಸಿದ ಹಿರಣ್ಯಗರ್ಭನು ಆದಿಯಲ್ಲಿ ಸ್ವಯಂಭು ವಾಗಿದ್ದನು. ಆದಕಾರಣ ಒಳ್ಳೆಯ ಮಕ್ಕಳನ್ನು ಬಯಸುವ ಮನುಷ್ಯರು ಯುವಕನಾದ ಈ ಗಿರೀಶನನ್ನು ಪೂಜಿಸಿರಿ !

೧೨೧. ಹೆಚ್ಚು ಮಾತುಗಳಿಂದೇನು ? ಈಶ್ವರನ ಆರಾಧನೆಯಿಂದ ಸಕಲವೂ ಸಿದ್ಧಿಸುತ್ತದೆ. ಹಿಂದೆ ಈ ದೇವನನ್ನು ಅಹೋರಾತ್ರಿಗಳಲ್ಲಿ ಆರಾಧಿಸಿ ಅಗಸ್ತ್ಯ ಮುನಿಯು ಹತ್ತು ಸಾವಿರ ವರ್ಷಗಳು ಮುದುಕನಾಗಲಿಲ್ಲ.

೧೨೨. ನನ್ನ ಕಣ್ಣುಗಳೆಂಬ ಭ್ರಮರಗಳೇ ! ಇತರ ಎಲ್ಲವನ್ನೂ ಬಿಟ್ಟು ಯಾವಾಗಲೂ ಈ ಶಿವನನ್ನೇ ಆಶ್ರಯಿಸಿರಿ. ಆಮೋದವುಳ್ಳ ಇವನು ಮೃದುವು, ಮಂಗಳಕರನು, ಶುಚಿಕರನು, ಮಧುವುಳ್ಳವನೂ ಆಗಿರುವನಷ್ಟೆ?

ಭವಿಷ್ಯಸಿ ತ್ವಂ ಪ್ರತಿಮಾನಹೀನೋ
ವಿನಿರ್ಜಿತಾಶೇಷನರಾಮರಶ್ಚ |
ನಮಶ್ಚ ತೇ ವಾಣಿ ಮಹೇಶಮೇನಂ
ಸ್ತುಹಿ ಶ್ರುತಂ ಗರ್ತಸದಂ ಯುವಾನಂ || ೧೨೩ ||

ಯದ್ಯನ್ಮನಶ್ಚಿಂತಯಸಿ ತ್ವಮಿಷ್ಟಂ
ತತ್ತದ್ಭವಿಷ್ಯತ್ಯಖಿಲಂ ಧ್ರುವಂ ತೇ |
ದುಃಖೇನ ವೃತ್ತಿಂ ವಿಷಯೇ ಕದಾಚಿ-
ದ್ಯಜಾಮಹೇ ಸೌಮನಸಾಯ ಭದ್ರಂ || ೧೨೪ ||

ಅಜ್ಞಾನಯೋಗಾದಪಚಾರಕರ್ಮ
ಯತ್ಪೂರ್ವಮಸ್ಮಾಭಿರನುಷ್ಠಿತಂ ತೇ |
ತದೇವ ಶೋಧ್ಯಂ ಸಕಲಂ ದಯಾಲೋ
ಪಿತೇವ ಪುತ್ರಾನ್ ಪ್ರತಿ ನೋ ಜುಷಸ್ವ || ೧೨೫ ||

---

೧೨೩. ನೀನು ಪ್ರತಿಕಕ್ಷಿಯಿಲ್ಲದೆ ಸಕಲ ಮನುಷ್ಯ ದೇವತೆಗಳನ್ನೂ ಜಯಿಸಿ ಯಶಸ್ವಿಯಾಗುವೆ! ವಾಣಿಯೇ! ನಿನಗೆ ನಮಸ್ಕಾರ! ಈ ರೀತಿ ಮಹಾಮಹಿಮನೆಂದು ಶ್ರುತನಾಗಿರುವ ಯುವಕನಾದ ಮಹೇಶ್ವರನನ್ನು ಸ್ತೋತ್ರ ಮಾಡು!

೧೨೪. ಚಿತ್ತವೇ! ನೀನು ಬಯಸುವ ವಿಷಯಗಳೆಲ್ಲವೂ ನಿನ್ನ ಬಯಕೆ ಯಂತೆಯೇ ಆಗುವುದು ಖಂಡಿತ. ದುಃಖಕರವಾದ ವಿಷಯಭೋಗವನ್ನು ಯಾವಾಗಲೂ ಆಶಿಸಬೇಡ! ಮನಶ್ಶುದ್ಧಿಗಾಗಿ ಮಂಗಳಕರನಾದ ದೇವನನ್ನು ಪೂಜಿಸು!

೧೨೫. ದಯಾಳುವಾದ ಈಶ್ವರದೇವಾ! ತಂದೆಯು ಮಕ್ಕಳ ತಪ್ಪುಗಳನ್ನು ಕ್ಷಮಿಸುವಂತೆ, ಇದುವರೆಗೆ ಅಜ್ಞಾನದಿಂದ ನಾವು ಮಾಡಿರುವ ಅಪಚಾರಗಳನ್ನೆಲ್ಲಾ ನೀನುಕ್ಷಮಿಸಿ ಕಾಪಾಡು!

ಸಂಸಾರಾಖ್ಯಕ್ರುದ್ಧಸರ್ಪೇಣ ಶೀಘ್ರಂ
ರಾಗದ್ವೇಷೋನ್ಮಾದಲೋಭಾದಿಶಂಕೈಃ ।
ದಷ್ಟಂ ದೃಷ್ಟ್ವಾ ಮಾಂ ದಯಾಲುಃ ಪಿನಾಕೀ
ದೇವಸ್ತ್ರಾತಾ ತ್ರಾಹಿ ಪಾಪಾತ್ಪ್ರಯೋಜ್ಯಃ ॥ ೧೨೬ ॥

ಇತ್ಯುಕ್ತ್ವಾಂತೇ ಯೇ ಸಮಾಧೇರ್ನಮಂತೇ
ರುದ್ರ ತ್ವಾಂ ತೇ ಯಾಂತಿ ಜನ್ಮಾಹಿದಷ್ಟಾಃ ।
ಸಂತೋ ನೀಲಗ್ರೀವಸೂತ್ರಾತ್ಮನಾಹಂ
ತಂ ತ್ವಾಂ ಯಾಮಿ ಬ್ರಹ್ಮಣಾ ವಂದಮಾನ ॥ ೧೨೭ ॥

ಭವಾದಿಭೀಷಣಜ್ವರೇಣ ಪೀಡಿತಾನ್ಮಹಾಮಯಾ
ನಶೇಷಪಾತಕಾಲಯಾನದೂರಕಾಲಲೋಚನಾನ್ ।
ಅನಾಥನಾಥ ತೇ ಕರೇಣ ಭೇಷಜೇನ ಕಾಲಹಾ
ಉದೂಷಣೋ ವ ಸೋಮ ಹೇ ಮೃಷಸ್ವ ಶೂರರಾಘಸೇ ॥೧೨೮॥

---

೧೨೬. ಸಂಸಾರವೆಂಬ ಕೋಪಗೊಂಡ ಸರ್ಪ ಮತ್ತು ರಾಗದ್ವೇಷ, ಉನ್ಮತ್ತತೆ, ಲೋಭ ಮುಂತಾದ ಭಯಂಕರ ಗಜ ಇವುಗಳಿಂದ ಕಚ್ಚಿಸಿಕೊಂಡು ನರಳುತ್ತಿರುವ, ನಿನ್ನ ಪೂಜೆಯನ್ನು ಮಾಡದಿರುವ ನನ್ನನ್ನು ದಯಾಳುವು, ರಕ್ಷಕನು, ಪಿನಾಕಿ ದೇವನೂ ಆದ ನೀನೇ ರಕ್ಷಿಸಬೇಕು !

೧೨೭. ರುದ್ರದೇವನೇ ! ಸಮಾಧಿ ಎಂದರೆ ನಿಶ್ಚಲಧ್ಯಾನವನ್ನಾಚರಿಸಿ ಕೊನೆಯಲ್ಲಿ ಈ ರೀತಿ ಸ್ತುತಿಸುವ, ಜನ್ಮವೆಂಬ ಸರ್ಪದಿಂದ ಕಚ್ಚಿಸಿಕೊಳ್ಳಲ್ಪಟ್ಟಿರುವ ಸಜ್ಜನರು ನಿನ್ನನ್ನೇ ಹೊಂದುವರು. ನೀಲಗ್ರೀವ ಸೂತ್ರಾತ್ಮನಾಗಿರುವ ಬ್ರಹ್ಮನಿಂದ ಸ್ತುತಿಸಿಕೊಳ್ಳಲ್ಪಡುತ್ತಿರುವ ನಿನ್ನನ್ನೇ ನಾನು ಶರಣು ಹೊಂದಿರುವೆನು !

೧೨೮. ಸಂಸಾರವೆಂಬ ಮನೋವ್ಯಥೆಯ ಭಯದಿಂದುಂಟಾದ ಜ್ವರಬಾಧೆಗೊಳಗಾಗಿರುವ, ಮಹಾರೋಗಗ್ರಸ್ತರಾದ, ಸಮಸ್ತ ಪಾಪಗಳಿಗೂ ನೆಲೆಯಾಗಿರುವ, ದೂರದೃಷ್ಟಿಯಿಲ್ಲದ ಮನುಜರಿಗೆ ಅನಾಥರ ಉದ್ಧಾರಕನಾದ ನೀನು ನಿನ್ನ ಹಸ್ತವೆಂಬ ಔಷಧವನ್ನು ಕೊಟ್ಟು ಮೃತ್ಯುವನ್ನು ಪರಿಹರಿಸು ! ದೋಷವಿಲ್ಲದ, ಶೂರನಾದ ಸೋಮದೇವನೇ ! ಸಿದ್ಧಿಗಾಗಿ ನಿನ್ನನ್ನೇ ನಂಬಿರುವೆನು, ಅನುಗ್ರಹಿಸು !

ಜಯೇಮ ಯೇನ ಸರ್ವಮೇತದಿಷ್ಟಮಷ್ಟದಿಗ್ಗಣಂ
ಭುವಃಸ್ಥಲಂ ದಿವಃಸ್ಥಲಂ ನಭಃಸ್ಥಲಂ ಚ ತದ್ಗತಂ ।
ಯ ಏಷ ಸರ್ವದೇವದಾನವಪ್ರಭುಃ ಸಭಾಪತಿಃ
ಸ ನೋ ದದಾತು ತಂ ರಯಿಂ ಪುರುಂ ಪಿಶಂಗಸಾದೃಶಂ ॥ ೧೨೯ ॥

ನಮೋ ಭವಾಯ ತೇ ಹರಾಯ ಭೂತಿಭಾಸಿತೋರಸೇ
ನಮೋ ಭವಾಭಿಭೂತಿಭೀತಿಸಂಗಿನೇ ಪಿನಾಕಿನೇ ।
ನಮಃ ಶಿವಾಯ ವಿಶ್ವಪಾಯ ಶಾಶ್ವತಾಯ ಹೇಲಯೇ
ನ ಯಸ್ಯ ಹನ್ಯತೇ ಸಖಾ ನ ಜೀರ್ಯತೇ ಕದಾಚನ ॥ ೧೩೦ ॥

ಸುರಪತಿಪತಯೇ ನಮೋನಮಃ
ಪ್ರಜಾಪತಿಪತಯೇ ನಮೋನಮಃ ।
ಕ್ಷಿತಿಪತಿಪತಯೇ ನಮೋನಮೋಽಂ-
ಬಿಕಾಪತಯ ಉಮಾಪತಯೇ ನಮೋನಮಃ ॥ ೧೩೧ ॥

---

೧೨೯. ಇಷ್ಟವಾದ ಎಂಟು ದಿಕ್ಕುಗಳು, ಭೂಪ್ರದೇಶ, ಅಂತರಿಕ್ಷ, ದೇವಲೋಕ ಇವುಗಳನ್ನು ಯಾರ ಅನುಗ್ರಹದಿಂದ ಜಯಿಸುವೆವೋ, ಯಾವ ದೇವನು ಸಕಲ ದೇವದಾನವರಿಗೂ ಪ್ರಭುವು, ಸಭಾಪತಿಯೂ ಆಗಿರುವನೋ ಅಂತಹ ಈ ರುದ್ರದೇವನು ನಮಗೆ ಯಥೇಷ್ಟವಾಗಿ ಸುವರ್ಣಸದೃಶವಾದ ಸಂಪತ್ತನ್ನು ಕೊಡಲಿ!

೧೩೦. ಭವನಾದ ನಿನಗೆ ನಮಸ್ಕಾರ! ಆಭರಣಗಳಿಂದಲಂಕೃತವಾದ ವಕ್ಷಸ್ಥಳವುಳ್ಳ ಹರನಿಗೆ ನಮಸ್ಕಾರ! ಸಂಸಾರವನ್ನು ನಾಶಪಡಿಸುವಂತಹ ಉಗ್ರ ಶಕ್ತಿಯುಳ್ಳ ಪಿನಾಕಿಗೆ ನಮಸ್ಕಾರ! ಜಗತ್ಪಾಲಕನು, ಶಾಶ್ವತನು, ಕ್ರೀಡಾಸ್ವರೂಪನೂ ಆದ ಶಿವನಿಗೆ ನಮಸ್ಕಾರ! ಆ ಶಿವನ ಭಕ್ತರು ಮೃತ್ಯುವಿಗೆ ತುತ್ತಾಗುವುದಿಲ್ಲ ಮತ್ತು ಅವರ ಶಕ್ತಿಯೂ ಕುಂದುವುದಿಲ್ಲ!

೧೩೧. ದೇವೇಂದ್ರಪತಿಗೆ ನಮಸ್ಕಾರ! ನಮಸ್ಕಾರ! ಪ್ರಜಾಪತಿನಾಥನಿಗೆ ನಮಸ್ಕಾರ! ನಮಸ್ಕಾರ! ಭೂಪಾಲಕಸ್ವಾಮಿಗೆ ನಮಸ್ಕಾರ! ನಮಸ್ಕಾರ! ಅಂಬಿಕಾಪತಿಯೂ, ಉಮಾಪತಿಯೂ ಆದ ದೇವನಿಗೆ ನಮಸ್ಕಾರ! ನಮಸ್ಕಾರ!

ವಿನಾಯಕಂ ವಂದನನಮಸ್ತಕಾಹತ
ಸ್ವನಾದ್ಯಸಂಘೃಷ್ಟಕಿರೀಟಮಸ್ತಕಂ ।
ನಮಾಮಿ ನಿತ್ಯಂ ಪ್ರಣತಾರ್ತಿನಾಶನಂ
ಕವಿಂ ಕವೀನಾಮುಪಮಶ್ರವಸ್ತಮಂ ॥ ೧೩೨ ॥

ದೇವಾ ಯುದ್ಧೇ ಯಾಗೇ ವಿಪ್ರಾಸ್ತ್ರಸ್ಯಾಹ್ವಯಂ
ದ್ವಯಂ ವಿಂದತಿ ಸ್ಕಂದಂ ।
ವಂದೇ ಸುಬ್ರಹ್ಮಣ್ಯೋಂ
ಸುಬ್ರಹ್ಮಣ್ಯೋಂ ಸುಬ್ರಹ್ಮಣ್ಯೋಂ ॥ ೧೩೩ ॥

ನಮಃ ಶಿವಾಯೈ ಜಗದಂಬಿಕಾಯೈ
ಶಿವಪ್ರಿಯಾಯೈ ಶಿವವಿಗ್ರಹಾಯೈ ।
ಸಮುದ್ಭಭೂವಾದ್ರಿಪತೇಃ ಸುತಾ ಯಾ
ಚತುಷ್ಕಪರ್ದಾ ಯುವತಿಃ ಸುಪೇಶಾಃ ॥ ೧೩೪ ॥

---

೧೩೨. ಬಾಗಿ ನಮಸ್ಕರಿಸುತ್ತಿರುವ ತಲೆಗಳ ತಗಲುವಿಕೆಯಿಂದುಂಟಾದ ಧ್ವನಿ ಮುಂತಾದುವುಗಳ ಸಂಘರ್ಷವುಳ್ಳ ಕಿರೀಟವನ್ನು ಶಿರಸ್ಸಿನಲ್ಲಿಟ್ಟುಕೊಂಡಿರುವ, ಶರಣಾಗತರ ದುಃಖವನ್ನು ಪರಿಹರಿಸುವ, ಕವಿಗಳ ಸ್ತೋತ್ರಕ್ಕೆ ಮುಖ್ಯ ಗುರಿಯಾದ, ಸ್ವತಃ ಕವೀಶ್ವರನಾದ ವಿನಾಯಕನನ್ನು ಯಾವಾಗಲೂ ನಮಸ್ಕರಿಸುವೆನು !

೧೩೩. ಯುದ್ಧದಲ್ಲಿ ದೇವತೆಗಳು ಅಸ್ತ್ರದಿಂದಲೂ, ಯಾಗದಲ್ಲಿ ಬ್ರಾಹ್ಮಣರು "ಸುಬ್ರಹ್ಮಣ್ಯೋಂ, ಸುಬ್ರಹ್ಯಣ್ಯೋಂ, ಸುಬ್ರಹ್ಮಣ್ಯೋಂ" ಇತ್ಯಾದಿ ಮಂತ್ರದಿಂದಲೂ ಆಹ್ವಾನಿಸಿ ಉಭಯರೂ ಅವನನ್ನು ಹೊಂದುವರು.

೧೩೪. ಪರ್ವತರಾಜನ ಮಗಳು, ನಾಲ್ಕು ಹೆರಳುಗಳುಳ್ಳವಳು, ಯೌವನವತಿಯು, ಅತ್ಯಂತ ಮನೋಹರಳು, ಶಿವಾರ್ಧಶರೀರಳು, ಶಿವಪ್ರಿಯೆಯು, ಜಗದಂಬಿಕೆಯೂ ಆಗಿರುವ ಶಿವಸತಿಗೆ ನಮಸ್ಕಾರ !

ಹಿರಣ್ಯವರ್ಣಾಂ ಮಣಿನೂಪುರಾಂಘ್ರಿಂ
ಪ್ರಸನ್ನವಕ್ತ್ರಾಂ ಶುಕಪದ್ಮಹಸ್ತಾಂ ।
ವಿಶಾಲನೇತ್ರಾಂ ಪ್ರಣಮಾಮಿ ಗೌರೀಂ
ವಚೋವಿದಂ ವಾಚಮುದೀರಯಂತೀಂ ॥ ೧೩೫ ॥

ನಮಾಮಿ ಮೇನಾತನಯಾಮಮೇಯಾ
ಮಿವಾಮುಮಾಂ ಕಾಂತಿಮತೀಮಮೇಯಾಂ ।
ಕರೋತಿ ಯಾ ಭೂತಿಸಿತೌ ಸ್ತನೌ ದ್ವೌ
ಪ್ರಿಯಂ ಸಖಾಯಂ ಪರಿಷಸ್ವಜಾನಾ ॥ ೧೩೬ ॥

ಕಾಂತಾಮುಮಾಂ ಕಾಂತನಿಭಾಂಗಕಾಂತಿ
ಭಾಂತಾಮುಪಾತ್ತಾನತಹರ್ಯ್ಯಜೇಂದ್ರಾಂ ।
ನತೋಽಸ್ಮಿ ಯಾಸ್ತೇ ಗಿರಿಶಸ್ಯ ಪಾರ್ಶ್ವೇ
ವಿಶ್ವಾನಿ ದೇವೀ ಭುವನಾನಿ ಚಷ್ಟೇ ॥ ೧೩೭ ॥

---

೧೩೫. ಬಂಗಾರದ ಬಣ್ಣವುಳ್ಳವಳು, ರತ್ನಖಚಿತವಾದ ಆಭರಣಗನ್ನು ಪಾದದಲ್ಲಿಟ್ಟುಕೊಂಡಿರುವವಳು, ಪ್ರಸನ್ನಮುಖಳು, ಕೈಯ್ಯಲ್ಲಿ ಗಿಳಿ ಮತ್ತು ಪದ್ಮಗಳನ್ನು ಧರಿಸಿರುವವಳು, ವಿಶಾಲನೇತ್ರಗಳುಳ್ಳವಳು, ವಾಗ್ವೇತ್ತೃವು, ಮಾತನಾಡುತ್ತಿರುವವಳೂ ಆದ ಗೌರೀ ದೇವಿಯನ್ನು ನಮಸ್ಕರಿಸುವೆನು !

೧೩೬. ಐಶ್ವರ್ಯ ಮತ್ತು ಸಕ್ಕರೆಗಳನ್ನು ಕರೆಯುವ ಎರಡು ಸ್ತನಗಳುಳ್ಳ, ಪ್ರಿಯಸಖನನ್ನು ಆಲಿಂಗಿಸಿಕೊಂಡಿರುವ, ಮೇನಾಕುಮಾರಿಯಾದ, ಅಪ್ರಮೇಯಳೂ, ಅಪರಿಮಿತ ಕಾಂತಿಯುಳ್ಳವಳೂ ಆದ ಉಮಾದೇವಿಯನ್ನು ನಮಸ್ಕರಿಸುವೆನು !

೧೩೭. ಸಮಸ್ತ ಲೋಕಗಳಿಗೂ ನಿಯಾಮಕಳು, ಗಿರೀಶನ ಪಾರ್ಶ್ವದಲ್ಲಿರುವವಳು, ಶಿವಪತ್ನಿಯು, ಪತಿಗೆ ಸಮಾನವಾದ ಅಂಗಕಾಂತಿಯುಳ್ಳವಳು, ಪ್ರಣತರಾದ ಹರ್ಯಜೇಂದ್ರರನ್ನು ಸ್ವೀಕರಿಸುವವಳೂ ಆದ, ಉಮಾದೇವಿಯನ್ನು ನಮಸ್ಕರಿಸುವೆನು !

ವಂದೇ ಗೌರೀಂ ತುಂಗಪೀನಸ್ತನೀಂ ತಾಂ
ಚಂದ್ರಾಚೂಡಾಂ ಕ್ಲಿಷ್ಟಸರ್ವಾಂಗರಾಗಾಂ ।
ಮೈಷಾ ದುಃಖಿಪ್ರಾಣಿನಾಮಾತ್ಮಕಾಂತಿಂ
ದೇವೀಂ ದೇವೀಂ ರಾಧಸೇ ಚೋದಯಂತೀ ॥ ೧೩೮ ॥

ಏನಾಂ ವಂದೇ ದೀನರಕ್ಷಾವಿನೋದಾಂ
ಮೇನಾಕನ್ಯಾಂ ಮಾನದಾಂ ನಂದದಾತ್ರೀಂ ।
ಯಾ ವಿದ್ಯಾನಾಂ ಮಂಗಲಾನಾಂ ಚ ವಾಚಾ
ಮೈಷಾ ನೇತ್ರೀ ರಾಧಸಃ ಸೂನೃತಾನಾಂ ॥ ೧೩೯ ॥

ಸಂಸಾರತಾಪೋರುಭಯಾಪಹಂತ್ರಿ
ಭವಾನಿ ಭೋಜ್ಯಾಭರಣೈಕಭೋಗೇ ।
ಧಿಯಂ ವರಾಂ ದೇಹಿ ಶಿವೇ ನಿರರ್ಗಲಾಂ
ಯಯಾ ತು ವಿಶ್ವಾ ದುರಿತಾ ತರೇಮ ॥ ೧೪೦ ॥

---

೧೩೮. ಉನ್ನತವೂ ಮತ್ತು ದಪ್ಪವೂ ಆದ ಸ್ತನಗಳುಳ್ಳ, ಚಂದ್ರನಂತಿರುವ ಆಭರಣಗಳನ್ನು ಧರಿಸಿರುವುದರಿಂದ ಸರ್ವಾಂಗಗಳಲ್ಲಿಯೂ ಕೆಂಪು ಬಣ್ಣದಿಂದ ಕೂಡಿರುವ ದುಃಖಪಡುತ್ತಿರುವ ಪ್ರಾಣಿಗಳಿಗೆ ಐಶ್ವರ್ಯವನ್ನು ಕೊಟ್ಟು ಅನುಗ್ರಹಿಸುವ, ಆತ್ಮಕಾಂತಿಯುಳ್ಳ ಗೌರೀದೇವಿಯನ್ನು ನಮಿಸುವೆನು !

೧೩೯. ವಿದ್ಯೆ, ಮಂಗಳ, ವಾಕ್ಕು, ಸಂಪತ್ತು, ಸತ್ಯ ಇವುಗಳಿಗೆ ನಿಯಾಮಕಳಾದ, ಸಂತೋಷದಿಂದ ದೀನರನ್ನು ರಕ್ಷಿಸುತ್ತಿರುವ, ಮೇನಾಕುಮಾರಿಯಾದ ಮಾನ ಮತ್ತು ಆನಂದಗಳನ್ನು ಕೊಡುವ ಈ ದೇವಿಯನ್ನು ನಮಸ್ಕರಿಸುತ್ತೇನೆ ।

೧೪೦. ಸಂಸಾರತಾಪದ ಭಯಾತಿಶಯವನ್ನು ಪರಿಹರಿಸುವ, ಮುಖ್ಯವಾದ ಭೋಜ್ಯಾಭರಣಗಳನ್ನು ಭೋಗಿಸುವ ಶಿವಪತ್ನಿಯಾದ, ಭವಾನಿದೇವಿಯೇ ! ಸಮಸ್ತಪಾಪಗಳನ್ನೂ ದಾಟುವಂತಹ, ನಿರರ್ಗಳವಾದ ಉತ್ಕೃಷ್ಟ ಬುದ್ಧಿಯನ್ನು ದಯಪಾಲಿಸು !

ಶಿವೇ ಕಥಂ ತ್ವತ್ಸಮತಾ ಕ್ವ ದೀಯತೇ
ಜಗತ್ಕೃತಿಃ ಕೇಲಿರಯಂ ಶಿವಃ ಪತಿಃ ।
ಹರಿಸ್ತು ದಾಸೋಸುಚರೀಂದಿರಾ ಶಚೀ
ಸರಸ್ವತೀ ವಾ ಸುಭಗಾದದೀತ ॥ ೧೪೧ ॥

ವಸುರುವಾಚ

ಇತ್ಯನೇನ ಸ್ತವೇನೇಶಂ ಸ್ತುತ್ವೇತ್ಥಂ ಸ ಮಹಾಮುನಿಃ ।
ಸ್ನೇಹಾಶ್ರುಪೂರ್ಣನಯನಃ ಪ್ರಣನಾಮ ಸಭಾಪತಿಂ ॥ ೧೪೨ ॥

ಮುಹುರ್ಮುಹುಃ ಪಿಬನ್ನೀಶಂ ತಾಂಡವಾಮೃತಮಂಗಲಂ ।
ಸರ್ವಾನ್ಕಾಮಾನವಾಪ್ಯಾಂತೇ ಗಾಣಪತ್ಯಮವಾಪ ಹ ॥ ೧೪೩ ॥

ಇಮಂ ಸ್ತವಂ ಜೈಮಿನಿನಾ ವಚೋದಿತಂ
ದ್ವಿಜೋತ್ತಮೋ ಯಃ ಪಠತೀಹ ಭಕ್ತಿತಃ ।
ತಮಿಷ್ಟವಾಕ್ಸಿದ್ಧಿಮತಿಂ ಕವಿಂ ಶ್ರಿಯಃ
ಪರಿಷ್ವಜಂತೇ ತನಯಾ ಯಥಾ ಪತಿಂ ॥ ೧೪೪ ॥

---

೧೪೧. ಜಗತ್ಕರ್ತನಾದ ಈ ಶಿವನು ಪತಿಯಾಗಿ ಕ್ರೀಡಿಸುವ ಸ್ಥಾನ ಳಾದ ಶಿವಸತಿಯೇ! ನಿನ್ನ ಸಾಮ್ಯವು ದಾಸರಾದ ಹರಿ, ಇಂದಿರಾ, ಶಚಿ, ಮನೋಹರ ಸರಸ್ವತೀ ಇವರುಗಳಿಗೆ ಹೇಗೆ ಬಂದೀತು?

೧೪೨. ವಸುವು ಹೇಳಿದನು:—ಈ ಸ್ತೋತ್ರದಿಂದ ಈಶ್ವರನನ್ನು ಸ್ತುತಿಸಿ ಆ ಮಹಾಮುನಿಯು, ಭಕ್ತಿಪರವಶನಾಗಿ ಕಣ್ಣುಗಳಿಂದ ಆನಂದಬಾಷ್ಪ ವನ್ನು ಸುರಿಸುತ್ತಾ, ಸಭಾಪತಿಗೆ ನಮಸ್ಕಾರಮಾಡಿದನು.

೧೪೩. ಆ ಮುನಿಯು ಮಂಗಳಕರವಾದ, ಈಶ್ವರನ ತಾಂಡವವೆಂಬ ಅಮೃತವನ್ನು ಬಾರಿಬಾರಿಗೂ ಪಾನಮಾಡಿ ಸಕಲೇಷ್ಟಾರ್ಥಗಳನ್ನೂ ಪಡೆದು ಕೊನೆಗೆ ಗಣಪತಿ ಸಾರೂಪ್ಯವನ್ನು ಹೊಂದಿದನು.

೧೪೪. ಜೈಮಿನಿಯು ಹೇಳಿರುವ ಸ್ತೋತ್ರವನ್ನು ಭಕ್ತಿಯಿಂದ ಪಠನೆ ಮಾಡಿ ವಾಕ್ಸಿದ್ಧಿಯನ್ನು ಪಡೆದ, ಕವಿಯಾದ ದ್ವಿಜೋತ್ತಮನನ್ನು, ಕುಮಾ

ಮಹೀಪತಿರ್ಯಸ್ತ್ವಯುಯುತ್ಸುರಾದರಾ
ದಮುಂ ಪಠತ್ಯಸ್ಯ ತಥೈವ ಸಾದರಾತ್ ।
ಪ್ರಯಾಂತಿ ಶೀಘ್ರಂ ಪ್ರಮದಾಂತಕಾಂತಿಕಂ
ಭಿಯಂ ದಧಾನಾ ಹೃದಯೇಷು ಶತ್ರವಃ ೧೪೫ ॥

ತ್ರೈವರ್ಣಿಕೇಷ್ವನ್ಯತಮೋ ಯ ಏನಂ
ನಿತ್ಯಂ ಕದಾಚಿತ್ ಪಠತೀಶಭಕ್ತಿತಃ ।
ಕಲೇವರಾಂತೇ ಶಿವಪಾರ್ಶ್ವವರ್ತೀ
ನಿರಂಜನಃ ಸಮ್ಯಗುಪೈತಿ ದಿವ್ಯಂ ॥ ೧೪೬ ॥

ಲಭಂತೇ ಪಠಂತೋ ಮತಿಂ ಬುದ್ಧಿಕಾಮಾ
ಲಭಂತೇ ತಥೈವ ಶ್ರಿಯಂ ಪುಷ್ಟಿಕಾಮಾಃ ।
ಲಭಂತೇ ಹಿ ಪುತ್ರಾನ್ನರಾಃ ಪುತ್ರಕಾಮಾ
ಲಭಂತೇ ಹಿ ಧಾನ್ಯಂ ನರಾ ಧಾನ್ಯಕಾಮಾಃ ॥ ೧೪೭ ॥

---

ರಿಯು ಪತಿಯನ್ನು ಆಲಂಗಿಸಿಕೊಳ್ಳುವಂತೆ ಸಕಲಸಂಪತ್ತುಗಳೂ ಆಲಂಗಿಸಿಕೊಳ್ಳುವುವು. ಎಂದರೆ ಅಂತಹವನಿಗೆ ಸಕಲಸಂಪತ್ತುಗಳೂ ಲಭಿಸುವುವೆಂದು ತಾತ್ಪರ್ಯ.

೧೪೫. ಯುದ್ಧಮಾಡಬೇಕೆಂದು ಬಯಸುವ ದೊರೆಯು ಈ ಸ್ತೋತ್ರವನ್ನು ಭಕ್ತಿಯಿಂದ ಪಠನೆಮಾಡಿದರೆ ಶತ್ರುಗಳು ಮನಸ್ಸಿನಲ್ಲಿ ಭಯಗೊಂಡು ಬೇಗ ಯಮನಸಮೀಪಕ್ಕೆ ಹೋಗುವರು.

೧೪೬. ಈಶ್ವರನಲ್ಲಿ ಭಕ್ತಿಯಿಂದ ಪ್ರತಿದಿನವೂ ಒಂದಾವರ್ತಿ ಈ ಸ್ತೋತ್ರವನ್ನು ಪಠನೆಮಾಡುವ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರು ಮೃತರಾದ ಮೇಲೆ ಈಶ್ವರನ ಸನ್ನಿಧಾನವನ್ನು ಹೊಂದಿ ದುಃಖವನ್ನು ಪರಿಹರಿಸಿಕೊಂಡು ದಿವ್ಯಸಾಮ್ಯವನ್ನು ಹೊಂದುವರು.

೧೪೭. ಈ ಸ್ತೋತ್ರವನ್ನು ಪಠನೆಮಾಡುವುದರಿಂದ ಬುದ್ಧಿಯನ್ನು ಬಯಸುವವರಿಗೆ ಬುದ್ಧಿಯೂ, ಐಶ್ವರ್ಯಕಾಮರಿಗೆ ಸಂಪತ್ತೂ, ಮಕ್ಕಳನ್ನು ಅಪೇಕ್ಷಿಸುವವರಿಗೆ ಸಂತಾನವೂ, ಧಾನ್ಯವನ್ನು ಇಚ್ಛಿಸುವವರಿಗೆ ಧಾನ್ಯಸಮೃದ್ಧಿಯೂ ಲಭಿಸುವುದು.

ಪಾದಂ ವಾಪ್ಯರ್ಧಪಾದಂ ವಾ ಶ್ಲೋಕಂ ಶ್ಲೋಕಾರ್ಧಮೇವ ವಾ ।
ಯಸ್ತು ಧಾರಯತೇ ನಿತ್ಯಂ ಶಿವಲೋಕಂ ಸ ಗಚ್ಛತಿ ॥ ೧೪೮ ॥

ಯತ್ರ ನೃತ್ತಂ ಶಿವಶ್ಚಕ್ರೇ ತಾಂಡವಂ ತತ್ ಸ್ಥಲಂ ಶುಭೇ ।
ಪುಣ್ಯಾತ್ಪುಣ್ಯತರಂ ತೀರ್ಥಂ ತತ್ರ ಸ್ನಾತ್ವಾ ವಿಮುಚ್ಯತೇ ॥ ೧೪೯ ॥

ಯಸ್ತತ್ರ ಕುರುತೇ ಶ್ರಾದ್ಧಂ ಪಿತೄಣಾಂ ಮನುಜೋತ್ತಮಃ ।
ಪೂರ್ವಜಾನ್ ಸ ನಯೇತ್ಸ್ವರ್ಗಂ ನಾತ್ರ ಕಾರ್ಯಾ ವಿಚಾರಣಾ ॥ ೧೫೦ ॥

ಗಾಂ ಸುವರ್ಣಂ ಧರಾಂ ಶಯ್ಯಾಂ ವಸ್ತ್ರಮಾತಪವಾರಣಂ ।
ಪಾನಮನ್ನಂ ದ್ವಿಜೇ ದದ್ಯಾತ್ತತ್ರ ತತ್ಸರ್ವಮಕ್ಷಯಂ ॥ ೧೫೧ ॥

---

೧೪೮. ಈ ಸ್ತೋತ್ರದಲ್ಲಿ ಒಂದು ಶ್ಲೋಕ ಅಥವಾ ಅರ್ಧಶ್ಲೋಕ ಇಲ್ಲವೇ ಒಂದುಪಾದ ಅಷ್ಟೂ ಆಗದಿದ್ದರೆ ಅರ್ಧಪಾದವನ್ನಾದರೂ ನಿತ್ಯವೂ ಪಠನೆಮಾಡುವವನು ಶಿವಲೋಕಕ್ಕೆ ಹೋಗುವನು.

೧೪೯. ಶುಭಾಂಗೀ ! ಈಶ್ವರನು ನರ್ತನ ತಾಂಡವಗಳನ್ನು ಮಾಡಿದ ಸ್ಥಳವು ಅತ್ಯಂತ ಪುಣ್ಯಕರತೀರ್ಥವು. ಅಲ್ಲಿ ಸ್ನಾನವಮಾಡಿದರೆ ಮನುಜನು ಮುಕ್ತನಾಗುವನು.

೧೫೦. ಆ ತೀರ್ಥದಲ್ಲಿ ಶ್ರಾದ್ಧವನ್ನು ಮಾಡುವ ಮನುಷ್ಯೋತ್ತಮನು ತನ್ನ ಪಿತೃಗಳನ್ನು ಸ್ವರ್ಗಕ್ಕೆ ಒಯ್ಯುವನು. ಈ ವಿಷಯದಲ್ಲಿ ಸಂಶಯ ಪಡಬಾರದು.

೧೫೧. ಗೋವು, ಬಂಗಾರ, ಭೂಮಿ, ಹಾಸಿಗೆ, ವಸ್ತ್ರ, ಛತ್ರಿ, ಪಾನೀಯ, ಅನ್ನ ಇವುಗಳನ್ನು ಆ ಕ್ಷೇತ್ರದಲ್ಲಿ ದ್ವಿಜರಿಗೆ ದಾನಮಾಡಿದರೆ ಅವೆಲ್ಲವೂ ಅಕ್ಷಯಫಲವನ್ನು ಕೊಡುವುವು.

ಏತದಾಖ್ಯಾನಕಂ ಪುಣ್ಯಂ ಪುಂಡರೀಕಪುರೋದ್ಭವಂ ।
ಶೃಣುಯಾಚ್ಛ್ರಾವಯೇದ್ವಾಪಿ ಸೋಽಪಿ ರುದ್ರಪ್ರಿಯೋ ಭವೇತ್ ॥ ೧೫೨ ॥

ಇತಿ ಶ್ರೀನಾರದೀಯಮಹಾಪುರಾಣೋತ್ತರಭಾಗೇ ವಸುಮೋಹಿನೀ ಸಂವಾದೇ ತ್ರ್ಯಂಬಕೇಶ್ವರಮಾಹಾತ್ಮ್ಯೇ ವೇದಪಾದಸ್ತವೋ ನಾಮ ತ್ರಿಸಪ್ತತಿತಮೋಽಧ್ಯಾಯಃ

ಇತಿ ತ್ರ್ಯಂಬಕೇಶ್ವರಜ್ಯೋತಿರ್ಲಿಂಗಮಾಹಾತ್ಮ್ಯಂ ಸಮಾಪ್ತಂ

---

೧೫೨. ಪುಣ್ಯಕರವಾದ ಈ ಪುಂಡರೀಕಪುರಾಖ್ಯಾನವನ್ನು ಶ್ರವಣ ಪಠನೆ ಮಾಡುವವನೂ ಸಹ ರುದ್ರದೇವರ ಅನುಗ್ರಹಕ್ಕೆ ಪಾತ್ರನಾಗುವನು

ಇಂತು ಶ್ರೀನಾರದೀಯಪುರಾಣೋತ್ತರಭಾಗದೊಳು ವಸು ಮೋಹಿನೀ ಸಂವಾದದಲ್ಲಿ ತ್ರ್ಯಂಬಕೇಶ್ವರ ಮಾಹಾತ್ಮ್ಯಯಲ್ಲಿ ವೇದಪಾದಸ್ತವವೆಂಬ ಎಪ್ಪತ್ತುಮೂರನೆಯ ಅಧ್ಯಾಯವು ಮುಗಿದುದು.



# ಚತುಃಸಪ್ತತಿತಮೋಽಧ್ಯಾಯಃ

## ಅಥ ಗೋಕರ್ಣಮಾಹಾತ್ಮ್ಯಂ ಪ್ರಾರಭ್ಯತೇ

### ಮೋಹಿನ್ಯುವಾಚ

ಪುಂಡರೀಕಪುರಾಖ್ಯಾನಂ ತ್ವಯಾ ಪ್ರೋಕ್ತಂ ಶ್ರುತಂ ಗುರೋ ।
ಗೋಕರ್ಣಸ್ಯಾದ್ಯತೀರ್ಥಸ್ಯ ಮಾಹಾತ್ಮ್ಯಂ ಮೇ ಸಮಾದಿಶ ॥ ೧ ॥

### ವಸುರುವಾಚ

ಶೃಣು ಮೋಹಿನಿ ವಕ್ಷ್ಯಾಮಿ ತೀರ್ಥಂ ಪುಣ್ಯಪ್ರದಂ ನೃಣಾಂ
ಗೋಕರ್ಣಾಖ್ಯಂ ಹರಕ್ಷೇತ್ರಂ ಸರ್ವಪಾತಕನಾಶನಂ ॥ ೨ ॥

ಪಶ್ಚಿಮಸ್ಥಸಮುದ್ರಸ್ಯ ತೀರೇಽಸ್ತಿ ವರವರ್ಣಿನಿ ।
ಸಾರ್ಧಂ ಯೋಜನವಿಸ್ತಾರಂ ದರ್ಶನಾದಪಿ ಮುಕ್ತಿದಂ ॥ ೩ ॥

---

## ಎಪ್ಪತ್ತುನಾಲ್ಕನೆಯ ಅಧ್ಯಾಯ

೧. ಗುರುಗಳೇ! ನೀವು ಹೇಳಿದ ಪುಂಡರೀಕಪುರಾಖ್ಯಾನವನ್ನು ಕೇಳಿದೆನು. ಈಗ ಗೋಕರ್ಣಕ್ಷೇತ್ರದ ಮಾಹಾತ್ಮ್ಯೆಯನ್ನು ನನಗೆ ಹೇಳಿರಿ ಎಂದು ಮೋಹಿನಿಯು ಕೇಳಿದಳು.

೨. ಮೋಹಿನೀ! ಸಕಲಪಾಪ ಪರಿಹಾರಕವು, ಪುಣ್ಯಪ್ರದವೂ ಆದ ಗೋಕರ್ಣವೆಂಬ ಶಿವಕ್ಷೇತ್ರದ ಮಾಹಾತ್ಮ್ಯೆಯನ್ನು ಹೇಳುವೆನು; ಕೇಳು ಎಂಬುದಾಗಿ ವಸುವು ಹೇಳಿದನು.

೩. ಸ್ತುತ್ಯಳಾದ ಮೋಹಿನೀ! ಆ ಕ್ಷೇತ್ರವು ಪಶ್ಚಿಮಸಮುದ್ರತೀರದಲ್ಲಿದೆ. ಅದರ ವಿಸ್ತಾರವು ಒಂದುವರೆ ಗಾವುದ. ಅದು ದರ್ಶನಮಾತ್ರದಿಂದ ಮುಕ್ತಿಯನ್ನು ಕೊಡುವುದು.

ಸಗರಸ್ಯಾತ್ಮಜೈರ್ದೇವಿ ಖನಿತೇ ಭೂತಲೇ ಕ್ರಮಾತ್ ।
ಸಾಗರೋ ವರ್ಧಿತಸ್ತಾತ್ವರಾತ್ ಪ್ಲಾವಯಾಮಾಸ ಮೇದಿನೀಂ ॥ ೪ ॥

ತ್ರಿಂಶದ್ಯೋಜನವಿಸ್ತಾರಾಂ ಸತೀರ್ಥಕ್ಷೇತ್ರಕಾನನಾಂ ।
ತತಸ್ತು ತ್ರಿಲಯೋಃ ಸರ್ವೇ ಸದೇವಾಸುರಮಾನವಾಃ ॥ ೫ ॥

ತತ್ಸ್ಥಾನಂ ಸಂಪರಿತ್ಯಜ್ಯ ಸಹ್ಯಾದಿಗಿರಿಷು ಸ್ಥಿತಾಃ ।
ತತೋ ಗುಹ್ಯಂ ಪರಂ ತೀರ್ಥಂ ಗೋಕರ್ಣಾಖ್ಯಂ ಸಮುದ್ರಗಂ ॥ ೬ ॥

ಚಿಂತಯಂತೋ ಮುನಿವರಾಸ್ತದುದ್ಧಾರೇ ಮತಿಂ ದಧುಃ ।
ತತಃ ಸಂಮಂತ್ರ್ಯ ತೇ ಸರ್ವೇ ಪರ್ವತೋಪತ್ಯಕಾಸ್ಥಿತಾಃ ॥ ೭ ॥

ಮಹೇಂದ್ರಾಚಲಸಂಸ್ಥಾನಂ ಪರಶುರಾಮಂ ದಿದೃಕ್ಷವಃ ।
ಜಗ್ಮುರ್ಮುನಿವರಾ ದೇವಿ ಗೋಕರ್ಣೋದ್ಧಾರಕಾಂಕ್ಷಯಾ ॥ ೮ ॥

---

೪-೫ ದೇವೀ! ಸಗರಚಕ್ರವರ್ತಿಯ ಪುತ್ರರು ಅಗೆದ ಭೂಮಿಯಲ್ಲಿ ಕ್ರಮವಾಗಿ ಸಮುದ್ರವು ವೃದ್ಧಿಯಾಗಿ ತೀರ್ಥಕ್ಷೇತ್ರ, ಅರಣ್ಯ ಇವುಗಳಿಂದ ಕೂಡಿದ ಮೂವತ್ತುಗಾವುದ ವಿಸ್ತಾರವುಳ್ಳ ಭೂಭಾಗವನ್ನು ಆವರಿಸಿತು.

೫-೬. ತರುವಾಯ ಅಲ್ಲಿದ್ದ ದೇವತೆಗಳು, ಅಸುರರು ಮತ್ತು ಮನುಷ್ಯರ ಸಹಿತವಾಗಿ ಸಕಲಮುನಿಗಳೂ ಆ ಸ್ಥಳವನ್ನು ಬಿಟ್ಟು ಸಹ್ಯಾದ್ರಿ ಪರ್ವತಗಳಲ್ಲಿ ನೆಲೆಸಿದರು. ಹೀಗೆ ಗೋಕರ್ಣವೆಂಬ ಉತ್ತಮತೀರ್ಥವು ಸಮುದ್ರದ ಒಳಗೆ ಮುಳುಗಿ ಗೋಪ್ಯವಾಯಿತು.

೭. ಆಗ ಚಿಂತಾಕ್ರಾಂತರಾದ ಮುನಿವರ್ಯರು ಗೋಕರ್ಣಕ್ಷೇತ್ರವನ್ನು ಹೇಗಾದರೂ ಉದ್ಧರಿಸಬೇಕೆಂದು ಮನಸ್ಸುಮಾಡಿದರು. ಬಳಿಕ ಪರ್ವತ ಮತ್ತು ಅದರ ಹತ್ತಿರದಲ್ಲಿದ್ದ ಮುನಿಗಳೆಲ್ಲರೂ ಸೇರಿ ಆಲೋಚನೆಮಾಡಿದರು.

೮. ದೇವೀ! ಅನಂತರ ಗೋಕರ್ಣಕ್ಷೇತ್ರವನ್ನು ಉದ್ಧಾರಮಾಡುವ ಸಲುವಾಗಿ ಮಹೇಂದ್ರಾಚಲದಲ್ಲಿದ್ದ ಪರಶುರಾಮದೇವನನ್ನು ನೋಡಬೇಕೆಂಬ ಅಭಿಲಾಷೆಯಿಂದ ಮುನಿವರ್ಯರು ಅಲ್ಲಿಗೆ ಹೊರಟರು.

ಸಮಾರುಹ್ಯ ತು ತಂ ಶೈಲಂ ದದೃಶುಸ್ತಸ್ಯ ಚಾಶ್ರಮಂ ।
ಪ್ರಶಾಂತಕ್ರೂರಸತ್ವಾಢ್ಯಂ ಸರ್ವರ್ತುಷು ಸುಖಾವಹಂ ॥ ೯ ॥
ಫಲಿತೈಃ ಪುಷ್ಪಿತೈರ್ವೃಕ್ಷೈರ್ಗಹನಂ ತತ್ತಪೋವನಂ ।
ಸ್ನಿಗ್ಧಛಾಯಮನೌಪಮ್ಯಂ ಸ್ವಾಮೋದಿಸುಖಮಾರುತಂ ॥ ೧೦ ॥
ತೇ ತದಾಶ್ರಮಮಾಸಾದ್ಯ ಬ್ರಹ್ಮಘೋಷನಿನಾದಿತಂ ।
ವಿವಿಶುರ್ಹೃಷ್ಟಮನಸೋ ಯಥಾ ವೃದ್ಧಪುರಃಸರಂ ॥ ೧೧ ॥
ಬ್ರಹ್ಮಾಸನೇ ಸುಖಾಸೀನಂ ಮೃದುಕೃಷ್ಣಾಜಿನೋತ್ತರೇ ।
ಶಿಷ್ಯೈಃ ಪರಿವೃತಂ ಶಾಂತಂ ದದೃಶುಸ್ತಂ ತಪೋಧನಂ ॥ ೧೨ ॥
ಕಾಲಾಗ್ನಿಮಿವ ಲೋಕಾಂಸ್ತ್ರೀನ್ ದಗ್ಧ್ವಾ ಶಾಂತಂ ತಪಃಸ್ಥಿತಂ ।
ತೇ ಸಮೇತ್ಯ ಭೃಗುಶ್ರೇಷ್ಠಂ ವಿನಯೇನ ವವಂದಿರೇ ॥ ೧೩ ॥

---

೯. ಮುನಿವರ್ಯರು ಮಹೇಂದ್ರಾಚಲವನ್ನು ಹತ್ತಿ ಅಲ್ಲಿದ್ದ ಪರಶುರಾಮನ ಆಶ್ರಮವನ್ನು ನೋಡಿದರು. ಅಲ್ಲಿ ಕ್ರೂರಜಂತುಗಳೂ ಸಹ ಪ್ರಶಾಂತತೆಯುಂದಿದ್ದುವು. ಆ ಸ್ಥಳವು ಎಲ್ಲಾ ಋತುಗಳಲ್ಲಿ ಆಗಬಹುದಾದ ಸುಖವನ್ನು ಕೊಡುತ್ತಿದ್ದಿತು.

೧೦. ಆ ತಪೋವನವು ಫಲಪುಷ್ಪಗಳಿಂದ ತುಂಬಿದ ವೃಕ್ಷಗಳಿಂದ ಕೂಡಿ ಗಹನವೂ ದಟ್ಟವಾದ ಛಾಯೆಯುಳ್ಳದೂ, ಸುಗಂಧಯುಕ್ತವಾದ ತಂಗಾಳಿಯುಳ್ಳದೂ ಆಗಿ ಅಸದೃಶವಾಗಿ ತೋರುತ್ತಿದ್ದಿತು.

೧೧. ಆ ಮುನಿವರರು ವೇದಘೋಷಶಬ್ದದಿಂದ ತುಂಬಿದ ಆ ಆಶ್ರಮವನ್ನು ಹೊಂದಿ ಹರ್ಷಚಿತ್ತರಾಗಿ ಹಿರಿಯರನ್ನು ಮುಂದೆಮಾಡಿಕೊಂಡು ಒಳಗೆ ಪ್ರವೇಶಿಸಿದರು.

೧೨. ಮೃದುವಾದ ಕೃಷ್ಣಾಜಿನದ ಮೇಲಿರುವ ಬ್ರಹ್ಮಾಸನದಲ್ಲಿ ಸುಖವಾಗಿ ಕುಳಿತಿರುವ, ಶಿಷ್ಯಸಂಘಪರಿವೃತನಾದ, ಶಾಂತನಾದ ಆ ಪರಶುರಾಮಮುನಿಯನ್ನು ಅಲ್ಲಿ ನೋಡಿದರು.

೧೩. ಕಾಲಾಗ್ನಿಯಂತೆ ಮೂರುಲೋಕಗಳನ್ನೂ ಸುಟ್ಟು ಶಾಂತನಾಗಿ ತಪಸ್ಸಿನಲ್ಲಿ ತೊಡಗಿರುವ ಭೃಗುಶ್ರೇಷ್ಠನಬಳಿಗೆ ಬಂದು ಆ ಮುನಿಗಳು ವಿನಯದಿಂದ ನಮಸ್ಕಾರಮಾಡಿದರು.

ತತಸ್ತಾನಾಗತಾನ್ ದೃಷ್ಟ್ವಾ ಮುನೀನ್ ಭೃಗುಕುಲೋದ್ವಹಃ ।
ಅರ್ಘ್ಯಪಾದ್ಯಾದಿಭಿಃ ಸಮ್ಯಕ್ಪೂಜಯಾಮಾಸ ಸಾದರಂ ॥ ೧೪ ॥
ತಾನಾಸೀನಾನ್ ಕೃತಾತಿಥ್ಯಾನುವಾಚ ಭೃಗುನಂದನಃ ।
ಸ್ವಾಗತಂ ವೋ ಮಹಾಭಾಗಾ ಯದರ್ಥಮಿಹ ಚಾಗತಾಃ ॥ ೧೫ ॥
ತದ್ವದಧ್ವಂ ಸುವಿಶ್ವಸ್ತಾಃ ಕರಣೀಯಂ ಮಯಾಸ್ತಿ ಯತ್ ।
ತತೋಬ್ರುವನ್ಮುನಿಶ್ರೇಷ್ಠಾ ಯದರ್ಥಂ ರಾಮಮಾಗತಾಃ ॥ ೧೬ ॥
ಆವೇದ್ಯಸ್ವಾನ್ ಭೃಗುಶ್ರೇಷ್ಠ ಗೋಕರ್ಣನಿಲಯಾನ್ಮುನೀನ್ ।
ಖನದ್ಭಿಃ ಸಾಗರೈರ್ಭೂಮಿಂ ಯಸ್ಮಾತ್ತೀರ್ಥಾದ್ವಿವಾಸಿತಾನ್ ॥ ೧೭ ॥
ಸತ್ವಮಾತ್ಮಪ್ರಭಾವೇಣ ಕ್ಷೇತ್ರಪ್ರವರಮದ್ಯ ನಃ ।
ದಾತುಮರ್ಹಸಿ ವಿಪ್ರೇಂದ್ರ ಸಮುತ್ಸಾರ್ಣವೋದಕಂ ॥ ೧೮ ॥

---

೧೪. ಅನಂತರ ಭೃಗುಕುಲಮಣಿಯಾದ ಪರಶುರಾಮನು ಅಲ್ಲಿಗೆಬಂದ ಆ ಮುನಿಗಳನ್ನು ನೋಡಿ ಅರ್ಘ್ಯಪಾದ್ಯಾದಿಗಳನ್ನು ಕೊಟ್ಟು ವಿಶ್ವಾಸದಿಂದ ಪೂಜಿಸಿದನು.

೧೫-೧೬. ಆತಿಥ್ಯವನ್ನು ಸ್ವೀಕರಿಸಿ ಕುಳಿತ ಆ ಮುನಿಗಳನ್ನು ಕುರಿತು "ಪೂಜ್ಯರೇ ! ನಿಮಗೆ ಸ್ವಾಗತವು! ತಾವು ಇಲ್ಲಿಗೆಬಂದ ಕಾರಣವೇನು? ನನ್ನಿಂದ ನಿಮಗೆ ಆಗಬೇಕಾದುದೇನು ? ವಿಶ್ವಾಸವಿಟ್ಟು ಅದನ್ನು ಹೇಳಿರಿ" ಎಂಬುದಾಗಿ ಪರಶುರಾಮನು ಕೇಳಿದನು. ಬಳಿಕ ಮುನಿವರ್ಯರು ಪರಶುರಾಮನ ಬಳಿಗೆ ಬಂದ ಕಾರಣವನ್ನು ವಿವರಿಸಿ ಹೇಳಿದರು.

೧೭. ಭೃಗುಶ್ರೇಷ್ಠಾ ! ನಾವು ಗೋಕರ್ಣವಾಸಿಗಳಾದ ಮುನಿಗಳು. ಸಗರಪುತ್ರರು ಭೂಮಿಯನ್ನು ಅಗೆದಮೇಲೆ ಆ ಕ್ಷೇತ್ರವು ಸಾಗರದಿಂದ ಆಕ್ರಮಿಸಲ್ಪಟ್ಟು ಜಲಮಯವಾದುದರಿಂದ ನಾವು ಹೊರಹೊರಡಿಸಲ್ಪಟ್ಟಿರುವೆವು ಎಂದು ತಮ್ಮ ಪರಿಚಯವನ್ನು ತಿಳಿಸಿದರು.

೧೮. ಬಳಿಕ ವಿಪ್ರೇಂದ್ರಾ ! ನೀನು ಆತ್ಮಪ್ರಭಾವದಿಂದ ಸಮುದ್ರಜಲವನ್ನು ಹೊರಡಿಸಿ ಆ ಉತ್ತಮಕ್ಷೇತ್ರವನ್ನು ಈಗ ನಮಗೆ ಲಭಿಸುವಂತೆ ಮಾಡಬೇಕು ಎಂಬುದಾಗಿ ವಿಜ್ಞಾಪಿಸಿದರು.

ತಚ್ಛ್ರುತ್ವಾ ವಚನಂ ತೇಷಾಂ ನ್ಯಸ್ತಶಸ್ತ್ರೋ ವ್ಯಚಿಂತಯೆತ್ |
ತತೋ ವಿಚಿಂತ್ಯ ಭಗವಾನ್ ಧರ್ಮ್ಯಂ ಸಾಧ್ವಭಿರಕ್ಷಣಂ || ೧೯ ||

ಪ್ರಗೃಹ್ಯ ಸ್ವಧನುರ್ಬಾಣಾನ್ ಸಂಪ್ರತಸ್ಥೇ ಸ ತೈಃ ಸಮಂ |
ಸೋವರುಹ್ಯ ಮಹೇಂದ್ರಾದ್ರೇರ್ದಿಶಂ ದಕ್ಷಿಣಪಶ್ಚಿಮಾಂ || ೨೦ ||

ಸಮುದ್ದಿಶ್ಯ ಯಯೌ ಶೀಘ್ರಂ ಸ ಸ್ವಮುಲ್ಲಂಘ್ಯ ಪರ್ವತಂ |
ಸಂಪ್ರಾಪ್ತಃ ಸಾಗರತಟಂ ಸಾರ್ಧಂ ಗೋಕರ್ಣವಾಸಿಭಿಃ || ೨೧ ||

ಮುಹೂರ್ತಂ ತತ್ರ ವಿಶ್ರಮ್ಯ ವರುಣಂ ಯಾದಸಾಂ ಪತಿಂ |
ಮೇಘಗಂಭೀರಯಾ ವಾಚಾ ಪ್ರೋವಾಚ ವದತಾಂ ವರಃ || ೨೨ ||

ರಾಮೋಹಂ ಭಾರ್ಗವಃ ಪ್ರಾಪ್ತೋ ಮುನಿಭಿಃ ಸಹ ಕಾರ್ಯವಾನ್ |
ಪ್ರಚೇತೋ ದರ್ಶನಂ ದೇಹಿ ಕಾರ್ಯಮಾತ್ಯಯಿಕಂ ತ್ವಯಾ || ೨೩ ||

---

೧೯. ಮುನಿಗಳ ಆ ಮಾತನ್ನು ಕೇಳಿ ಶಸ್ತ್ರಸನ್ಯಾಸಮಾಡಿದ್ದ ಭಗವಂತನು ಚೆನ್ನಾಗಿ ಆಲೋಚಿಸಿ ಸಾಧುಗಳನ್ನು ಸಂರಕ್ಷಿಸುವುದು ಧರ್ಮವೆಂದು ನಿಶ್ಚಯಿಸಿದನು.

೨೦-೨೧. ಬಳಿಕ ಅವನು ತನ್ನ ಧನುರ್ಬಾಣಗಳನ್ನು ತೆಗೆದುಕೊಂಡು ಆ ಮುನಿಗಳಸಂಗಡ ಹೊರಟು ಮಹೇಂದ್ರಾಚಲದಿಂದಿಳಿದು ದಕ್ಷಿಣ ಪಶ್ಚಿಮ ಮಧ್ಯದಿಕ್ಕನ್ನು ಕುರಿತು ವೇಗದಿಂದ ಹೊರಟು ತನ್ನ ಪರ್ವತಪ್ರದೇಶವನ್ನು ದಾಟಿ ಗೋಕರ್ಣವಾಸಿಗಳೊಡನೆ ಸಮುದ್ರತೀರಕ್ಕೆ ಬಂದನು.

೨೨. ಒಂದು ಮುಹೂರ್ತಕಾಲ ಅಲ್ಲಿ ವಿಶ್ರಾಂತಿಹೊಂದಿ ವಾಗ್ಮಿವರನಾದ ಪರಶುರಾಮನು ಸಮುದ್ರರಾಜನಾದ ವರುಣನನ್ನು ಕುರಿತು ಮೇಘದಂತೆ ಗಂಭೀರವಾದ ವಾಕ್ಕುಗಳನ್ನು ಹೇಳಿದನು.

೨೩. ವರುಣನೇ ! ನಾನು ಭೃಗುಸುತನಾದ ರಾಮನು. ಮುನಿಗಳ ಸಹಿತವಾಗಿ ಕಾರ್ಯೋದ್ದೇಶದಿಂದ ಬಂದಿರುವೆನು. ನಿನ್ನಿಂದ ಅವಶ್ಯಕವಾದ ಕೆಲಸವಾಗಬೇಕಾಗಿದೆ. ದರ್ಶನಕೊಡು ! ಎಂಬುದಾಗಿ ಆಹ್ವಾನಮಾಡಿದನು.

ಏವಂ ರಾಮಸಮಾಹೂತೋ ಯಾದಃಪತಿರಹಂತಯಾ |
ಶ್ರುತ್ವಾಪಿ ತಸ್ಯ ತದ್ವಾಕ್ಯಂ ನಾಯಾತೋ ರಾಮಸನ್ನಿಧೌ || ೨೪ ||
ಏವಂ ಪುನಃ ಪುನಸ್ತೇನ ಸಮಾಹೂತೋಽಪಿ ನಾಗತಃ |
ಯದಾ ತದಾಪಿ ಸಂಕ್ರುದ್ಧೋ ಧನುರ್ಜಗ್ರಾಹ ಭಾರ್ಗವಃ || ೨೫ ||
ತಸ್ಮಿನ್ ಸಂಧಾಯ ವಿಶಿಖಂ ವಹ್ನಿದೈವಂ ತು ಭಾರ್ಗವಃ |
ಅಸ್ತ್ರಂ ಸಂಯೋಜಯಾಮಾಸ ಶೋಷಣಾಯ ಸಮುಗ್ರಹೀತ್ || ೨೬ ||
ತತೋಽಸ್ತ್ರಂ ಸ ವಿನಿರ್ವರ್ತ್ಯ ವರುಣಂ ಪ್ರಾಹ ಸತ್ವರಂ |
ಗೋಕರ್ಣೋ ದೃಶ್ಯತಾಂ ದೇವ ಉತ್ಸರ್ಪಯ ಜಲಂ ಕಿಲ || ೨೭ ||
ತತೋ ರಾಮಾಜ್ಞಯಾ ಸೋಽಪಿ ಗೋಕರ್ಣೋದಕಮಾಹರತ್ |
ರಾಮೋಽಪಿ ತಂ ಸಮಭ್ಯರ್ಚ್ಯ ಗೋಕರ್ಣಂ ನಾಮ ಶಂಕರಂ || ೨೮ ||

---

೨೪. ಈರೀತಿ ರಾಮನು ಕರೆದರೂ ಸಮುದ್ರರಾಜನು ಆ ಮಾತನ್ನು ಕೇಳಿಯೂ ಅಹಂಕಾರದಿಂದ ರಾಮನಸನ್ನಿಧಿಗೆ ಬರಲಿಲ್ಲ.

೨೫. ಇದೇರೀತಿಯಾಗಿ ಪುನಃಪುನಃ ರಾಮನು ವರುಣನನ್ನು ಕರೆದನು. ಆದರೂ ಅವನು ಬರಲಿಲ್ಲ. ಆಗ ಕುಪಿತನಾದ ಭೃಗುಕುಮಾರನು ಧನುಸ್ಸನ್ನು ತೆಗೆದುಕೊಂಡನು.

೨೬. ಆಗ ಭಾರ್ಗವನು ಸಮುದ್ರವು ಒಣಗುವುದಕ್ಕಾಗಿ ಆ ಧನುಸ್ಸಿನಲ್ಲಿ ಬಾಣವನ್ನು ಸಂಧಾನಮಾಡಿ ವಹ್ನಿದೇವತಾಕವಾದ ಅಸ್ತ್ರವನ್ನು ಸಂಯೋಜನೆಮಾಡಿ ಪ್ರಯೋಗಿಸಿದನು.

೨೭. ಅದರಿಂದ ಅಸ್ತ್ರವು ಹೊರಟು ವರುಣನನ್ನು ಕುರಿತು "ದೇವಾ! ಬೇಗ ಜಲವನ್ನು ಹೋಗಲಾಡಿಸು ಗೋಕರ್ಣಕ್ಷೇತ್ರವನ್ನು ಕಾಣಿಸುವಂತೆ ಮಾಡು" ಎಂಬುದಾಗಿ ಹೇಳಿತು.

೨೮-೨೯. ಅನಂತರ ಅವನು ಪರಶುರಾಮನ ಅಪ್ಪಣೆಯಮೇರೆಗೆ ಗೋಕರ್ಣದಲ್ಲಿದ್ದ ನೀರನ್ನು ಪರಿಹರಿಸಿದನು. ರಾಮನೂ ಸಹ ಆ ಗೋಕರ್ಣೇಶ್ವರನನ್ನು ಪೂಜಿಸಿ ಮಹೇಂದ್ರಾದ್ರಿಗೆ ಹಿಂದಿರುಗಿ ಬಂದನು. ಆ ದ್ವಿಜರು ಅಲ್ಲಿಯೇ ನಿಂತರು.

ಪ್ರಾಪ್ತಾಃ ಪುನರ್ಮಹೇಂದ್ರಾದ್ರೌ ತಸ್ಥುಸ್ತತ್ರೈವ ತೇ ದ್ವಿಜಾಃ ।
ಯತ್ರ ಸರ್ವೇ ತಪಸ್ತಪ್ತ್ವಾ ಮುನಯಃ ಶಂಸಿತವ್ರತಾಃ ॥ ೨೯ ॥

ನಿರ್ವಾಣಂ ಪರಮಂ ಪ್ರಾಪ್ತಾಃ ಪುನರಾವೃತ್ತಿವರ್ಜಿತಂ ।
ತತ್ ಕ್ಷೇತ್ರಸ್ಯ ಪ್ರಭಾವೇಣ ಪ್ರೀತ್ಯಾ ಭೂತಗಣೈಃ ಸಹ ॥ ೩೦ ॥

ದೇವ್ಯಾ ಚ ಸಕಲೈರ್ದೇವೈರ್ನಿತ್ಯಂ ವಸತಿ ಶಂಕರಃ ।
ಏನಾಂಸಿ ದರ್ಶನಾತ್ತಸ್ಯ ಗೋಕರ್ಣಸ್ಯ ಮಹೇಶಿತುಃ ॥ ೩೧ ॥

ಸದ್ಯೋ ವಿಯುಜ್ಯ ಗಚ್ಛಂತಿ ಪ್ರವಾತೇ ಶುಷ್ಕಪರ್ಣವತ್ ।
ತತ್ಕ್ಷೇತ್ರಸೇವನರತಿರ್ನೃಣಾಂ ಜಾತು ನ ಜಾಯತೇ ॥ ೩೨ ॥

ನಿರ್ಬಂಧೇನ ತು ಯೇ ತತ್ರ ಪ್ರಾಣಿನಃ ಸ್ಥಿರಜಂಗಮಾಃ ।
ಮ್ರಿಯಂತೇ ದೇವಿ ಸದ್ಯಸ್ತೇ ಸ್ವರ್ಗಂ ಯಾಂತಿ ಸನಾತನಂ ॥ ೩೩ ॥

---

೨೯-೩೦. ಪ್ರಶಸ್ತವ್ರತವನ್ನು ಕೈಗೊಂಡ ಆ ಮುನಿಗಳೆಲ್ಲರೂ ಅಲ್ಲಿಯೇ ತಪಸ್ಸನ್ನಾಚರಿಸಿ ಆ ಕ್ಷೇತ್ರದ ಪ್ರಭಾವದಿಂದ ಪುನರಾವೃತ್ತಿರಹಿತವಾದ ಪರಮ ಮೋಕ್ಷವನ್ನು ಹೊಂದಿದರು.

೩೦-೩೨. ಆ ಕ್ಷೇತ್ರದಲ್ಲಿ ಯಾವಾಗಲೂ ಶಂಕರನು ಭೂತಗಣ, ದೇವಿ, ಸಕಲ ದೇವತೆಗಳು ಇವರೊಡನೆ ವಿಶ್ವಾಸದಿಂದ ವಾಸವಾಗಿರುವನು. ಆ ಗೋಕರ್ಣದಲ್ಲಿರುವ ಮಹೇಶ್ವರನ ದರ್ಶನಮಾತ್ರದಿಂದ ತಕ್ಷಣದಲ್ಲಿ ಪಾಪಗಳು ಬಿರುಗಾಳಿಯಲ್ಲಿ ಒಣಗಿದ ಎಲೆಗಳು ಹಾರುವಂತೆ ಹಾರಿಹೋಗುವುವು. ಅಂತಹ ಗೋಕರ್ಣಕ್ಷೇತ್ರವನ್ನು ಸೇವಿಸಬೇಕೆಂಬ ಅಭಿಲಾಷೆಯು ಸಾಮಾನ್ಯವಾಗಿ ಮನುಷ್ಯರಿಗೆ ಉಂಟಾಗಲಾರದು.

೩೩. ದೇವೀ! ಆ ಕ್ಷೇತ್ರದಲ್ಲಿ ನಿರ್ಬಂಧವಾಗಿ ಸಾಯುವ ಸ್ಥಾವರ ಜಂಗಮಪ್ರಾಣಿಗಳು ಕೂಡಲೇ ಪುರಾತನಸ್ವರ್ಗವನ್ನು ಹೊಂದುವರು.

ಸ್ಮೃತ್ವಾಪಿ ಸಕಲೈಃ ಪಾಪೈರ್ಯಸ್ಯ ಮುಚ್ಯೇತ ಮಾನವಃ ।
ತದ್ಗೋಕರ್ಣಾಭಿಧಂ ಕ್ಷೇತ್ರಂ ಸರ್ವತೀರ್ಥನಿಕೇತನಂ ॥ ೩೪ ॥

ಸ್ನಾತ್ವಾ ಸರ್ವೇಷು ತೀರ್ಥೇಷು ಯಜಂತಶ್ಚ ಸದಾಶಿವಂ ।
ಲಭಂತೇ ಯತ್ಫಲಂ ಮರ್ತ್ಯಾಸ್ತತ್ಸರ್ವಂ ತತ್ರ ದರ್ಶನಾತ್ ॥ ೩೫ ॥

ಕಾಮಕ್ರೋಧಾದಿಭಿರ್ಹೀನಾ ಯೇ ತತ್ರ ನಿವಸಂತಿ ವೈ ।
ಅಚಿರೇಣೈವ ಕಾಲೇನ ತೇ ಸಿದ್ಧಿಂ ಪ್ರಾಪ್ನುವಂತಿ ಹಿ ॥ ೩೬ ॥

ಜಪಹೋಮರತಾಃ ಶಾಂತಾ ನಿಯತಾ ಬ್ರಹ್ಮಚಾರಿಣಃ ।
ವಸಂತಿ ಯಸ್ಮಿನ್ಯೇ ತೇ ಹಿ ಸಿದ್ಧಿಂ ಪ್ರಾಪ್ಸ್ಯಂತ್ಯಭೀಪ್ಸಿತಾಂ ॥ ೩೭ ॥

ದಾನಹೋಮಜಪಾದ್ಯಂ ಚ ಪಿತೃದೇವದ್ವಿಜಾರ್ಚನಂ ।
ಅನ್ಯಸ್ಮಾತ್ಕೋಟಿಗುಣಿತಂ ಭವೇತ್ತಸ್ಮಿನ್ ಫಲಂ ಸತಿ ॥ ೩೮ ॥

---

೩೪. ಸ್ಮರಣೆಮಾಡುವ ಮಾತ್ರದಿಂದಲೇ ಮಾನವನು ಸಕಲಪಾಪಗಳಿಂದಲೂ ಮುಕ್ತನಾಗುವನು. ಅಂತಹ ಗೋಕರ್ಣವೆಂಬ ಕ್ಷೇತ್ರವು ಸಕಲ ತೀರ್ಥಗಳಿಗೂ ಆಶ್ರಯವಾಗಿದೆ.

೩೫. ಸಕಲತೀರ್ಥಗಳಲ್ಲಿಯೂ ಸ್ನಾನಮಾಡಿ ಸದಾಶಿವನನ್ನು ಪೂಜೆ ಮಾಡುವುದರಿಂದ ಮನುಷ್ಯರು ಹೊಂದುವ ಫಲವನ್ನೆಲ್ಲಾ ಗೋಕರ್ಣಕ್ಷೇತ್ರ ದರ್ಶನಮಾತ್ರದಿಂದ ಪಡೆಯುವರು.

೩೬. ಕಾಮಕ್ರೋಧಾದಿಗಳನ್ನು ಬಿಟ್ಟು ಅಲ್ಲಿ ವಾಸಿಸುವ ಜನರು ಸ್ವಲ್ಪ ಕಾಲದಲ್ಲಿಯೇ ಸಿದ್ಧಿಯನ್ನು ಪಡೆಯುವರು.

೩೭. ಜಪ ಹೋಮಾದಿಗಳ ಆಚರಣೆಯಲ್ಲಾಸಕ್ತರಾಗಿ ಶಾಂತರಾದ ನಿಯತಬ್ರಹ್ಮಚಾರಿಗಳು ಅಲ್ಲಿ ವಾಸಿಸಿದರೆ ಅವರೂ ಸಹ ಅಭೀಷ್ಟಸಿದ್ಧಿಯನ್ನು ಹೊಂದುವರು.

೩೮. ಸಾಧ್ವಿಯೇ! ಆ ಕ್ಷೇತ್ರದಲ್ಲಿ ದಾನ, ಹೋಮ, ಜಪ ಮುಂತಾದುವು ಮತ್ತು ಪಿತೃ, ದೇವ, ದ್ವಿಜ ಇವರ ಪೂಜೆಗಳನ್ನು ಮಾಡಿದರೆ ಇತರಸ್ಥಳದಲ್ಲಿ ಮಾಡುವ ದಾನಾದಿಫಲಕ್ಕಿಂತಲೂ ಕೋಟಿಯಷ್ಟು ಹೆಚ್ಚಿನಫಲವು ಬರುವುದು.

ಇತ್ಯೇತತ್ಕಥಿತಂ ಭದ್ರೇ ಗೋಕರ್ಣಕ್ಷೇತ್ರಸಂಭವಂ ।
ಮಾಹಾತ್ಮ್ಯಂ ಸರ್ವಪಾಪಘ್ನಂ ಪಠತಾಂ ಶೃಣ್ವತಾಮಪಿ ॥ ೩೯ ॥

ಇತಿ ಶ್ರೀನಾರದೀಯಪುರಾಣೋತ್ತರಭಾಗೇ ವಸುಮೋಹಿನೀಸಂವಾದೇ ಗೋಕರ್ಣಮಾಹಾತ್ಮ್ಯಂ ನಾಮ ಚತುಃಸಪ್ತತಿತಮೋಽಧ್ಯಾಯಃ

ಇತಿ ಗೋಕರ್ಣಮಾಹಾತ್ಮ್ಯಂ ಸಮಾಪ್ತಂ

---

೩೯. ಭದ್ರೇ ! ಶ್ರವಣಪಠನೆಗಳನ್ನು ಮಾಡುವವರಿಗೆ ಸಕಲಪಾಪ ಪರಿಹಾರಕವಾದ ಗೋಕರ್ಣಕ್ಷೇತ್ರ ಮಾಹಾತ್ಮ್ಯೆಯನ್ನು ಈರೀತಿಯಾಗಿ ನಿನಗೆ ಹೇಳಿರುವೆನು.

ಇಂತು ಶ್ರೀನಾರದೀಯಪುರಾಣೋತ್ತರಭಾಗದಲ್ಲಿ ವಸು ಮೋಹಿನೀ
ಸಂವಾದದಲ್ಲಿ ಗೋಕರ್ಣ ಮಾಹಾತ್ಮ್ಯೆಯೆಂಬ
ಎಪ್ಪತ್ತುನಾಲ್ಕನೆಯ ಅಧ್ಯಾಯವು
ಮುಗಿದುದು.



## ಪಂಚಸಪ್ತತಿತಮೋಽಧ್ಯಾಯಃ



### ಲಕ್ಷ್ಮಣಾಚಲಮಾಹಾತ್ಮ್ಯಂ ಪ್ರಾರಭ್ಯತೇ

**ಮೋಹಿನ್ಯುವಾಚ**

**ಶ್ರುತಂ ಗೋಕರ್ಣಮಾಹಾತ್ಮ್ಯಂ ವಸೋ ಪಾಪವಿನಾಶನಂ ।**
**ಲಕ್ಷ್ಮಣಸ್ಯಾಪಿ ಮಾಹಾತ್ಮ್ಯಂ ವಕ್ತುಮರ್ಹಸಿ ಸಾಂಪ್ರತಂ ॥ ೧ ॥**

**ವಸುರುವಾಚ**

**ಶೃಣು ದೇವಿ ಪ್ರವಕ್ಷ್ಯಾಮಿ ಮಾಹಾತ್ಮ್ಯಂ ಲಕ್ಷ್ಮಣಸ್ಯ ಚ ।**
**ಯಂ ದೃಷ್ಟ್ವಾ ಮನುಜೋ ದೇವಂ ಮುಚ್ಯತೇ ಸರ್ವಪಾತಕೈಃ ॥ ೨ ॥**

**ಚತುರ್ವ್ಯೂಹಾವತಾರೇ ಯೋ ದೇವಃ ಸಂಕರ್ಷಣಃ ಸ್ವಯಂ ।**
**ಸರ್ವಭೂಮಂಡಲಂ ಹ್ಯೇತತ್ಸಹಸ್ರವದನಃ ಸ್ವರಾಟ್ ॥ ೩ ॥**

---

### ಎಪ್ಪತ್ತೈದನೆಯ ಅಧ್ಯಾಯ

೧. ವಸುವೇ ! ಪಾಪಗಳನ್ನು ನಾಶಗೊಳಿಸುವ ಗೋಕರ್ಣಮಾಹಾತ್ಮ್ಯೆಯನ್ನು ಕೇಳಿದೆನು. ಈಗ ಲಕ್ಷ್ಮಣನ ಮಾಹಾತ್ಮ್ಯೆಯನ್ನು ನನಗೆ ಹೇಳು ಎಂಬುದಾಗಿ ಮೋಹಿನಿಯು ವಸುವನ್ನು ಕೇಳಿದಳು.

೨. ದೇವೀ ! ಮನುಜನು ಯಾವ ದೇವನ ದರ್ಶನದಿಂದ ಸಕಲ ಪಾಪ ವಿಮೋಚನೆಯನ್ನು ಹೊಂದುವನೋ ಅಂತಹ ಲಕ್ಷ್ಮಣನ ಮಾಹಾತ್ಮ್ಯೆಯನ್ನು ಹೇಳುವೆನು ಕೇಳು ಎಂದು ವಸುವು ಮೋಹಿನಿಗೆ ಹೇಳತೊಡಗಿದನು.

೩-೪. ಭಗವಂತನ ನಾಲ್ಕು ವ್ಯೂಹಾವತಾರಗಳ ಪೈಕಿ ಸಂಕರ್ಷಣ ರೂಪಿಯಾದ ಹರಿಯ ಆವೇಶವುಳ್ಳ, ಸಹಸ್ರ ಮುಖಗಳುಳ್ಳ, ಸಂರಾಟನಾದ ಸಂಕರ್ಷಣ ದೇವನು ಈ ಭೂಮಂಡಲವನ್ನೆಲ್ಲಾ ದೊಡ್ಡದೆಂದು ಗಣಿಸದೆ ತನ್ನ ಒಂದು ತಲೆಯಮೇಲೆ ಇಟ್ಟುಕೊಂಡಿರುವನು.

ಏಕಸ್ಮಿಂಚ್ಛಿರಸಿ ನ್ಯಸ್ತಂ ನಾಽನ್ಯೈತ್ಸಿದ್ಧಾರ್ಥಕೋಽಪಮಂ ।
ದೇವೋ ನಾರಾಯಣಃ ಸಾಕ್ಷಾದ್ರಾಮೋ ಬ್ರಹ್ಮಾದಿವಂದಿತಃ　　॥ ೪ ॥
ಪ್ರದ್ಯುಮ್ನೋ ಭರತೋ ಭದ್ರೇ ಶತ್ರುಘ್ನೋ ಹ್ಯನಿರುದ್ಧಕಃ ।
ಲಕ್ಷ್ಮಣಸ್ತು ಮಹಾಭಾಗೇ ಸ್ವಯಂ ಸಂಕರ್ಷಣಃ ಶಿವಃ　　॥ ೫ ॥
ಬ್ರಹ್ಮಾದ್ಯೈಃ ಪ್ರಾರ್ಥಿತಃ ಪೂರ್ವಂ ಸಾಕ್ಷಾದ್ದೇವೋ ರಮಾಪತಿಃ ।
ರಾಮಾದಿನಾಮಭಿರ್ಜಜ್ಞೇ ದಶಧಾ ದಿಗ್ರಥಾನ್ನೃಪಾತ್　　॥ ೬ ॥
ತತಃ ಕಾಲಾಂತರೇ ದೇವಿ ವಿಶ್ವಾಮಿತ್ರೋ ಮುನೀಶ್ವರಃ ।
ಯಜ್ಞರಕ್ಷಾರ್ಥಮಾಗತ್ಯ ಪ್ರಾರ್ಥಯದ್ರಾಮಲಕ್ಷ್ಮಣೌ　　॥ ೭ ॥
ತತೋ ರಾಜಾ ದಶರಥಃ ಪ್ರಾಣೇಭ್ಯೋಽಪಿ ಪ್ರಿಯೌ ಸುತೌ ।
ಮುನೇಃ ಶಾಪಭಯಾದ್ಭೀತೋ ದದೌ ತೌ ರಾಮಲಕ್ಷ್ಮಣೌ　　॥ ೮ ॥

---

ಅವನು ಅದನ್ನು ಒಂದು ಸಾಸುವೆಯ ಕಾಳಿಗೆ ಸಮಾನವೆಂತಲೂ ಭಾವಿಸಲಿಲ್ಲ. ರಾಮನು ಬ್ರಹ್ಮಾದಿವಂದಿತನಾದ ಸಾಕ್ಷಾದ್ವಾಸುದೇವನೇ ಆಗಿರುವನೆಂದು ತಿಳಿ.

೫. ಭದ್ರೇ ! ಪ್ರದ್ಯುಮ್ನ ನಾಮಕಹರಿಯ ಆವೇಶವುಳ್ಳ ಪ್ರದ್ಯುಮ್ನನೇ ಭರತನು. ಅನಿರುದ್ಧರೂಪಿ ಹರಿಯ ಆವೇಶವುಳ್ಳ ಅನಿರುದ್ಧನೇ ಶತ್ರುಘ್ನನು. ಲಕ್ಷ್ಮಣನಾದರೋ ಮೇಲೆ ಹೇಳಿದ ಸಂಕರ್ಷಣಾಂಶನು.

೬. ಲಕ್ಷ್ಮೀಪತಿಯಾದ ಸಾಕ್ಷಾನ್ನಾರಾಯಣದೇವನು ಪೂರ್ವದಲ್ಲಿ ಬ್ರಹ್ಮಾದಿಗಳ ಪ್ರಾರ್ಥನೆಯನ್ನು ಲಾಲಿಸಿ ರಾಮ ಮುಂತಾದ ನಾಮಗಳಿಂದ ದಶರಥ ರಾಜನ ದೆಶೆಯಿಂದ ಅವತಾರ ಮಾಡಿದನು.

೭. ದೇವೀ ! ಸ್ವಲ್ಪ ಕಾಲವಾದ ನಂತರ ವಿಶ್ವಾಮಿತ್ರಮುನೀಶ್ವರನು ದಶರಥರಾಜನ ಬಳಿಗೆ ಬಂದು ಯಜ್ಞವನ್ನು ಸಂರಕ್ಷಿಸುವ ಸಲುವಾಗಿ ರಾಮಲಕ್ಷ್ಮಣರನ್ನು ಕಳುಹಿಸಬೇಕೆಂದು ಪ್ರಾರ್ಥಿಸಿದನು.

೮. ತರುವಾಯ ದಶರಥ ರಾಜನು ಮಕ್ಕಳಾದ ರಾಮಲಕ್ಷ್ಮಣರು ತನ್ನ ಪ್ರಾಣಕ್ಕಿಂತಲೂ ಹೆಚ್ಚೆಂದು ಭಾವಿಸಿದವನಾಗಿದ್ದರೂ ಮುನಿಯು ಶಾಪ ಕೊಟ್ಟಾನೆಂಬ ಭಯದಿಂದ ಇವರನ್ನು ಮುನಿಯೊಡನೆ ಕಳುಹಿಸಿದನು.

ಗತ್ವಾ ಯಜ್ಞಂ ಮುನೀಂದ್ರಸ್ಯ ಗಾಧಿಪಸ್ಯ ರರಕ್ಷತುಃ ।
ಸ ತಾಟಕಂ ಸುಬಾಹುಂ ತು ಹತ್ವಾ ಪ್ರಕ್ಷಿಪ್ಯ ದೂರತಃ ॥ ೯ ॥
ಮಾರೀಚಂ ಮಾನವಾಸ್ತ್ರೇಣ ವಿಶ್ವಾಮಿತ್ರಮತೋಷಯತ್ ।
ತತಃ ಪ್ರೀತಾನ್ಮುನಿಶ್ರೇಷ್ಠಾದಸ್ತ್ರಗ್ರಾಮಮವಾಪ್ಯ ಚ ॥ ೧೦ ॥
ಉವಾಸ ಸ ಕಿಯತ್ಕಾಲಂ ಸಾನುಜಸ್ತೇನ ಸತ್ಕೃತಃ ।
ವೈದೇಹನಗರಂ ನೀತೋ ವಿಶ್ವಾಮಿತ್ರೇಣ ತತ್ಪರಂ ॥ ೧೧ ॥
ತತಸ್ತು ರಾಜಾ ಜನಕೋ ವಿಶ್ವಾಮಿತ್ರಂ ಸುಸತ್ಕೃತಂ ।
ಪಪ್ರಚ್ಛ ಬಾಲಕಾವೇತೌ ಕಸ್ಯ ಕ್ಷತ್ರಕುಲೇಶಿತುಃ ॥ ೧೨ ॥
ತತಸ್ತಸ್ಮೈ ಮುನಿವರೋ ರಾಜ್ಞೋ ದಶರಥಸ್ಯ ತೌ ।
ಪುತ್ರೌ ನಿವೇದಯಾಮಾಸ ಭ್ರಾತರೌ ರಾಮಲಕ್ಷ್ಮಣೌ ॥ ೧೩ ॥

---

೯. ಆ ರಾಮಲಕ್ಷ್ಮಣರಿಬ್ಬರೂ ವಿಶ್ವಾಮಿತ್ರಮುನಿಯ ಆಶ್ರಮಕ್ಕೆ ಹೋಗಿ ತಾಟಕ, ಸುಬಾಹುಗಳನ್ನು ಸಂಹರಿಸಿ ಯಜ್ಞವು ನಿರ್ವಿಘ್ನವಾಗಿ ನಡೆಯುವಂತೆ ಮಾಡಿದರು.

೧೦. ಮಾನವಾಸ್ತ್ರದಿಂದ ಮಾರೀಚನನ್ನು ದೂರ ಓಡಿಸಿ ವಿಶ್ವಾಮಿತ್ರ ಮುನಿಯನ್ನು ಸಂತೋಷಪಡಿಸಿದನು. ಅದರಿಂದ ಸಂತುಷ್ಟನಾದ ವಿಶ್ವಾಮಿತ್ರ ಮುನಿಯು ಅವರಿಗೆ ಅನೇಕ ಅಸ್ತ್ರಸಮೂಹಗಳನ್ನು ಕೊಟ್ಟನು.

೧೧. ಈರೀತಿ ಮುನಿಯಿಂದ ಸತ್ಕೃತರಾಗಿ ಅವರಿಬ್ಬರೂ ಸ್ವಲ್ಪಕಾಲ ಅಲ್ಲಿಯೇ ವಾಸಮಾಡಿದರು. ಬಳಿಕ ವಿಶ್ವಾಮಿತ್ರಮುನಿಯು ಅವರಿಬ್ಬರನ್ನೂ ವಿದೇಹ ನಗರಕ್ಕೆ ಕರೆದುಕೊಂಡು ಹೋದನು.

೧೨. ಬಳಿಕ ಜನಕರಾಜನು ವಿಶ್ವಾಮಿತ್ರಮುನಿಯನ್ನು ಸ್ವಾಗತ ಪೂರ್ವಕವಾಗಿ ಸತ್ಕರಿಸಿ ಈ ಬಾಲಕರಿಬ್ಬರು ಯಾವ ರಾಜನ ಮಕ್ಕಳು? ಎಂಬುದಾಗಿ ಕೇಳಿದನು.

೧೩. ಮುನಿವರನು ಇವರಿಬ್ಬರು ದಶರಥರಾಜನ ಮಕ್ಕಳು, ಸಹೋದರರು, ರಾಮ, ಲಕ್ಷ್ಮಣ ಎಂದು ಇವರ ಹೆಸರು ಎಂಬುದಾಗಿ ಜನಕರಾಜನಿಗೆ ತಿಳಿಸಿದನು.

ತತೋ ವಿದೇಹಃ ಸುಪ್ರೀತೋ ದೃಷ್ಟ್ವಾ ರಾಮಂ ಚ ಲಕ್ಷ್ಮಣಂ ।
ಸೀತೋರ್ಮಿಲಾಖ್ಯಯೋಃ ಪುತ್ರ್ಯೋಃ ಶ್ಚೇತಸಾಕಲ್ಪಯತ್ಪತೀ ॥ ೧೪ ॥

ತ್ರಿಕಾಲಜ್ಞಸ್ತು ಸ ಮುನಿರ್ಜ್ಞಾತ್ವಾ ತಸ್ಯ ಮನೋಗತಂ ।
ಮೋದಮಾನೋಥ ಜನಕಂ ಪ್ರಾಹ ದರ್ಶಯ ತದ್ಧನುಃ ॥ ೧೫ ॥

ಸೀತಾಸ್ವಯಂವರೇ ನ್ಯಸ್ತಂ ನ್ಯಾಸಭೂತಂ ಮಹೇಶಿತುಃ ।
ರಾಜಾ ಶ್ರುತ್ವಾ ತು ತದ್ವಾಕ್ಯಂ ವಿಶ್ವಾಮಿತ್ರಸ್ಯ ಸತ್ವರಂ ॥ ೧೬ ॥

ಭೃತ್ಯೈಸ್ತ್ರಿಶತ್ಯಾನಾಯ್ಯಾಸ್ಮೈ ದರ್ಶಯಾಮಾಸ ಸಾದರಂ ।
ರಾಮಶ್ಚಂಡೀಶಚಾಪಂ ತದ್ವಾಮದೋಷ್ಣೋದ್ಧರ್ ಕ್ಷಣಾತ್ ॥ ೧೭ ॥

ಸಜ್ಯಂ ವಿಕೃಷ್ಯ ಸಹಸಾ ಬಭಂಜೇಕ್ಷುಮಿವೇಭರಾಟ್ ।
ತತೋತಿ ಮಿಥಿಲಃ ಪ್ರೀತಃ ಸ್ವೇ ಕನ್ಯೇ ರಾಮಲಕ್ಷ್ಮಣೌ ॥ ೧೮ ॥

---

೧೪. ಆದನ್ನು ಕೇಳಿ ವಿದೇಹರಾಜನು ಸಂತೋಷಪಟ್ಟು ನನ್ನ ಕುಮಾರಿಯರಾದ ಸೀತಾ ಮತ್ತು ಊರ್ಮಿಳೆಯರಿಗೆ ರಾಮ ಲಕ್ಷ್ಮಣರು ಪತಿಗಳಾಗಲು ಅರ್ಹರಾಗಿರುವರೆಂದು ಮನಸ್ಸಿನಲ್ಲಿ ತಿಳಿದನು.

೧೫-೧೬. ತ್ರಿಕಾಲಜ್ಞಾನಿಯಾದ ಆ ಮುನಿಯು ವಿದೇಹರಾಜನ ಮನೋಭಿಪ್ರಾಯವನ್ನು ತಿಳಿದು ಸಂತೋಷಪಟ್ಟವನಾಗಿ ಜನಕರಾಜನನ್ನು ಕುರಿತು "ಸೀತಾದೇವಿಯ ಸ್ವಯಂವರಕ್ಕಾಗಿ ಇಟ್ಟಿರುವ, ಮಹೇಶ್ವರನ ನ್ಯಾಸಭೂತವಾದ ಆ ಧನುಸ್ಸನ್ನು ತೋರಿಸು" ಎಂಬುದಾಗಿ ಹೇಳಿದನು.

೧೬-೧೭. ವಿಶ್ವಾಮಿತ್ರನ ಆ ಮಾತನ್ನು ಕೇಳಿ ರಾಜನು ಕೂಡಲೇ ಮುನ್ನೂರು ಜನ ಆಳುಗಳಿಂದ ಆ ಧನುಸ್ಸನ್ನು ತರಿಸಿ ಆದರಪೂರ್ವಕವಾಗಿ ಅವನಿಗೆ ತೋರಿಸಿದನು.

೧೭-೧೮. ಆನೆಯು ಕಬ್ಬಿನ ಜಲ್ಲೆಯನ್ನು ಮುರಿಯುವಂತೆ ರಾಮನು ಕ್ಷಣಮಾತ್ರದಲ್ಲಿ ತನ್ನ ಎಡಗೈಯಿಂದ ಈಶ್ವರ ಧನುಸ್ಸನ್ನು ಎತ್ತಿ ಸೆಳೆದು ಸಿದ್ಧ ಮಾಡಿಕೊಂಡು ಕೂಡಲೇ ಮುರಿದನು.

ಸಮುಭ್ಯಚ್ಯಾರ್ಪಯಾಮಾಸ ತಾಭ್ಯಾಂ ತೇ ವಿಧಿಪೂರ್ವಕಂ ।
ಜ್ಞಾತ್ವಾ ಮುನಿವರಾದನ್ಯೇ ರಾಜ್ಞೋ ದಶರಥಸ್ಯ ತು ॥ ೧೯ ॥
ತಾಭ್ಯಾಂ ಸಹ ತಮಾಹೂಯ ಭ್ರಾತೃಕನ್ಯೇ ಽದಾಪಯತ್ ।
ತತಃ ಸ ಕೃತದಾರೈಸ್ತು ಚತುರ್ಭಿಸ್ತನಯೈಃ ಸಹ ॥ ೨೦ ॥
ಸಮರ್ಚಿತೋ ವಿದೇಹೇನಾಯೋಧ್ಯಾಂ ಮುನ್ಯಾಜ್ಞಯಾ ಯಯೌ ।
ಮಾರ್ಗೇ ಭೃಗುಪತೇರ್ದರ್ಪಂ ಶಮಯಿತ್ವಾ ಸ ರಾಘವಃ ॥ ೨೧ ॥
ಪಿತೃಭ್ರಾತೃಯುತಃ ಶ್ರೀಮಾನ್ಮುಮುದೇ ಬಹುವತ್ಸರಾನ್ ।
ಪಂಡಿತೈಸ್ತು ವಶಿಷ್ಠಾದ್ಯೈರ್ಬೋಧಿತೋಽಸೌ ನಿಜಂ ಮಹಃ ॥ ೨೨ ॥
ಬ್ರಹ್ಮಾಖ್ಯಂ ಬುಬುಧೇ ರಾಮೋ ಮಾನುಷತ್ವಂ ವಿಡಂಬಯನ್ ।
ತತೋ ದಶರಥೋ ರಾಜಾ ಜ್ಞಾತಜ್ಞೇಯಂ ನಿಜಂ ಸುತಂ ॥ ೨೩ ॥

---

೧೮-೧೯. ಜನಕರಾಜನು ಅದನ್ನು ನೋಡಿ ಸಂತೋಷಭರಿತನಾಗಿ ರಾಮಲಕ್ಷ್ಮಣರನ್ನು ಪೂಜಿಸಿ ಅವರಿಬ್ಬರಿಗೆ ತನ್ನ ಮಕ್ಕಳಾದ ಸೀತಾ, ಊರ್ಮಿಳೆಯರನ್ನು ವಿಧಿಪೂರ್ವಕವಾಗಿ ಸಮರ್ಪಿಸಿದನು.

೧೯-೨೦. ಅನಂತರ ಜನಕರಾಜನು ವಿಶ್ವಾಮಿತ್ರಮುನಿಯಿಂದ ದಶರಥ ರಾಜನಿಗೆ ಇನ್ನೂ ಇಬ್ಬರು ಮಕ್ಕಳಿರುವ ವಿಷಯವನ್ನು ತಿಳಿದು ಅವರನ್ನೂ ಕರೆಯಿಸಿ ತನ್ನ ಸೋದರನ ಇಬ್ಬರು ಮಕ್ಕಳನ್ನು ಕೊಡಿಸಿ ವಿವಾಹವನ್ನು ಮಾಡಿಸಿದನು.

೨೦-೨೧. ಹೀಗೆ ವಿವಾಹವನ್ನು ಮಾಡಿಕೊಂಡು ವಿದೇಹ ರಾಜನಿಂದ ಸತ್ಕೃತನಾಗಿ ದಶರಥನು ವಿಶ್ವಾಮಿತ್ರಮುನಿಯ ಅಪ್ಪಣೆಯನ್ನು ಪಡೆದು ಆ ನಾಲ್ಕು ಮಕ್ಕಳ ಸಹಿತನಾಗಿ ಅಯೋಧ್ಯಾಪಟ್ಟಣಕ್ಕೆ ಹೊರಟನು. ಆ ರಾಘವನು ದಾರಿಯಲ್ಲಿ ಪರಶುರಾಮನ ದರ್ಪವನ್ನು ಪರಿಹರಿಸಿದನು.

೨೨-೨೩. ತಂದೆ ಮತ್ತು ತಮ್ಮಂದಿರ ಸಹಿತವಾಗಿ ಶ್ರೀರಾಮನು ಬಹುವರ್ಷಗಳ ಕಾಲ ಸಂತೋಷವಾಗಿದ್ದನು. ಮನುಷ್ಯನಂತೆ ವರ್ತಿಸುತ್ತಿರುವ ಈ ರಾಮನು ವಶಿಷ್ಠರೇ ಮುಂತಾದ ಜ್ಞಾನಿಗಳಿಂದ ಬೋಧಿಸಲ್ಪಟ್ಟವನಾಗಿ ಖ್ಯವಾದ ನಿಜತೇಜಸ್ಸನ್ನು ತಿಳಿದನು.

ರಾಮಂ ಸಮುದ್ಯತೋ ಹೃಷ್ಟೋ ಯೌವರಾಜ್ಯೇಭಿಷೇಚಿತುಂ ।
ಯತ್ ಜ್ಞಾತ್ವಾ ಕೈಕಯೀ ದೇವೀ ರಾಜ್ಞಃ ಪ್ರೇಷ್ಠಾ ಕನೀಯಸೀ ॥೨೪॥

ಸನ್ನಿವಾರ್ಯ ಹಠಾತ್ತಸ್ಯ ಪುತ್ರಸ್ಯ ತದರೋಚತ ।
ತತೋ ರಾಮೋ ಮುದೇ ತಸ್ಯಾಃ ಪಿತ್ರಾಸನುಮತೋ ಯಯೌ ॥ ೨೫ ॥

ಸಭಾರ್ಯಃ ಸಸೌಮಿತ್ರಿಶ್ಚಿತ್ರಕೂಟಂ ಗಿರಿಂ ಶುಭೇ ।
ಕಿಯತ್ಕಾಲಮುವಾಸಾಸೌ ತತ್ರೈವ ಮುನಿವೇಷಧೃಕ್ ॥ ೨೬ ॥

ಮಾತಾಮಹಗೃಹಾತ್ತಚ್ಚ ಶ್ರುತ್ವಾ ಯಾತಃ ಪಿತುರ್ವಧಂ ।
ಸ ವಿಜ್ಞಾಯ ಮೃತಂ ತಾತಂ ಹಾ ರಾಮೇತಿ ವಿರಾವಿಣಂ ॥ ೨೭ ॥

---

೨೩-೨೪. ತರುವಾಯ ದಶರಥರಾಜನು ಕಲಿಯಬೇಕಾದ ವಿದ್ಯೆಯನ್ನೆಲ್ಲಾ ಕಲಿತು ಜ್ಞಾನಿಯಾಗಿರುವ ತನ್ನ ಮಗನಾದ ರಾಮನನ್ನು ನೋಡಿ ಸಂತೋಷವಾಗಿ ಅವನಿಗೆ ಯುವರಾಜಪದವಿಯಲ್ಲಿ ಪಟ್ಟಾಭಿಷೇಕವನ್ನು ಮಾಡಲು ದ್ಯುಕ್ತನಾದನು.

೨೪-೨೫. ಅದನ್ನು ತಿಳಿದು ರಾಜನ ಅತ್ಯಂತವಾಗಿ ಪ್ರೀತಿಪಾತ್ರಳು, ಕನಿಷ್ಠಪತ್ನಿಯೂ ಆದ ಕೈಕೇಯೀ ದೇವಿಯು ಅದನ್ನು ತಡೆದು ಹಠದಿಂದ ತನ್ನ ಮಗನಾದ ಭರತನಿಗೆ ಪಟ್ಟಾಭಿಷೇಕವಾಗಬೇಕೆಂದು ಬಯಸಿದಳು.

೨೫-೨೬. ತರುವಾಯ ರಾಮನು ಆ ಕೈಕೇಯೀ ದೇವಿಯನ್ನು ಸಂತೋಷಪಡಿಸುವುದಕ್ಕಾಗಿ ತಂದೆಗೆ ಇಷ್ಟವಿಲ್ಲದಿದ್ದರೂ ಪತ್ನಿಯಾದ ಸೀತಾದೇವಿ ಮತ್ತು ಲಕ್ಷ್ಮಣರ ಸಹಿತವಾಗಿ ಚಿತ್ರಕೂಟವೆಂಬ ಪರ್ವತಕ್ಕೆ ಹೋಗಿ ಮುನಿವೇಷಧಾರಿಯಾಗಿ ಅಲ್ಲಿಯೇ ಸ್ವಲ್ಪಕಾಲ ವಾಸಮಾಡಿದನು.

೨೭-೨೮. ಮಾತಾಮಹನ ಮನೆಯಲ್ಲಿದ್ದ ಭರತನು ಆ ಸಮಾಚಾರವನ್ನು ಕೇಳಿ ಅಲ್ಲಿಗೆ ಬಂದು "ಅಯ್ಯೋ! ರಾಮ!" ಎಂಬುದಾಗಿ ಅರಚಿಕೊಳ್ಳುತ್ತಾ ತಂದೆಯು ಮೃತನಾದುದನ್ನು ತಿಳಿದು ಕೈಕೇಯಿಯನ್ನು ಧಿಕ್ಕರಿಸಿ

ಧಿಕ್ಕೃತ್ಯ ಕೈಕಯೀಂ ಯಾತೋ ರಾಮಂ ಸ ವಿನಿವರ್ತಿತುಂ |
ತತಃ ಸ್ವಪಾದುಕೇ ದತ್ವಾ ಭರತಂ ವಿನಿವರ್ತ್ಯ ಚ || ೨೮ ||

ರಾಮೋಽತ್ರೇಶ್ಚಾಪ್ಯಗಸ್ತ್ಯಸ್ಯ ಸುತೀಕ್ಷ್ಣಸ್ಯಾಶ್ರಮೇಷ್ವಗಾತ್ |
ತೇಷು ದ್ವಾದಶವರ್ಷಾಣಿ ಗಮಯಿತ್ವಾ ರಘೂದ್ವಹಃ || ೨೯ ||

ಭಾರ್ಯಾನುಜಾನ್ವಿತಃ ಶ್ರೀಮಾಂಸ್ತತಃ ಪಂಚವಟೀಮಗಾತ್ |
ತತ್ರಾವಸಜ್ಜನಸ್ಥಾನೇ ತ್ರಿಶಿರಃಖರದೂಷಣಾನ್ || ೩೦ ||

ಶೂರ್ಪಣಖ್ಯಾ ವಿಕೃತಯಾ ಪ್ರೇರಿತಾನ್ ಸ ವ್ಯನಾಶಯತ್ |
ತತೋ ರಕ್ಷಃಸಹಸ್ರೈಶ್ಚ ಚತುರ್ದಶಭಿರಾಗತಾನ್ || ೩೧ ||

ವಿಚಿತ್ರವಾಜೈರ್ನಾರಾಚೈರ್ಯಮಕ್ಷಯಮನೀನಯತ್ |
ಯಚ್ಛ್ರುತ್ವಾ ರಕ್ಷಸಾಂ ರಾಜಾ ಮಾರೀಚಂ ಕಾಂಚನಂ ಮೃಗಂ || ೩೨ ||

---

ರಾಮನನ್ನು ಹಿಂದಕ್ಕೆ ಕರೆತರಲು ಹೊರಟನು ಆಗ ರಾಮನು ಭರತನಿಗೆ ತನ್ನ ಪಾದುಕೆಗಳನ್ನು ಕೊಟ್ಟು ಅವನನ್ನು ಅಯೋಧ್ಯೆಗೆ ಕಳುಹಿಸಿದನು.

೨೯. ರಾಮನು ಅಲ್ಲಿಂದ ಅತ್ರಿ, ಅಗಸ್ತ್ಯ, ಸುತೀಕ್ಷ್ಣ ಇವರುಗಳ ಆಶ್ರಮಗಳಿಗೆ ಹೋಗಿ ಅಲ್ಲಿ ಹನ್ನೆರಡುವರ್ಷಗಳನ್ನು ಕಳೆದನು.

೩೦-೩೧. ಭಾರ್ಯೆ ಮತ್ತು ತಮ್ಮನ ಸಹಿತನಾಗಿದ್ದ ಶ್ರೀರಾಮನು ಅಲ್ಲಿಂದ ಪಂಚವಟಿಗೆ ಹೋದನು. ಅಲ್ಲಿ ಜನಸ್ಥಾನದಲ್ಲಿ ವಾಸವಾಗಿದ್ದಾಗ ಮೂಗು ಕೊಯಿಸಿಕೊಂಡು ವಿಕಾರ ಹೊಂದಿದ ಶೂರ್ಪಣಖಿಯಿಂದ ಪ್ರೇರಿತರಾಗಿ ಬಂದ ತ್ರಿಶಿರಸ್ಸು, ಖರ, ದೂಷಣ ಇವರನ್ನು ಸಂಹಾರಮಾಡಿದನು.

೩೧-೩೨. ತರುವಾಯ ಬಂದ ಹದಿನಾಲ್ಕು ಸಾವಿರ ರಾಕ್ಷಸರನ್ನು ವಿಚಿತ್ರವೇಗವುಳ್ಳ ಬಾಣಗಳಿಂದ ಯಮಸದನಕ್ಕೆ ಕಳುಹಿಸಿದನು.

೩೨-೩೩. ಅದನ್ನು ಕೇಳಿ ರಾಕ್ಷಸಾಧಿಪತಿಯಾದ ರಾವಣನು ಬಂಗಾರದ ಜಿಂಕೆಯ ರೂಪವನ್ನು ತಾಳಿದ ಮಾರೀಚನನ್ನು ತೋರಿಸಿ ರಾಮ ಲಕ್ಷ್ಮಣ

ದರ್ಶಯಿತ್ವಾಪವಾಹ್ಯೈತೌ ಸೀತಾಂ ಹೃತ್ವಾ ಜಟಾಯುಷಂ ।
ರುಂಧಾನಂ ಮಾರ್ಗ ಆಹತ್ಯ ಲಂಕಾಯಾಂ ಸಮುಪಾನಯತ್ ॥ ೩೩ ॥

ಆಗತ್ಯ ತೌ ಹೃತಾಂ ಸೀತಾಂ ಮಾರ್ಗಮಾಣೌ ಸಮಂತತಃ ।
ದೃಷ್ಟ್ವಾ ಜಟಾಯುಷಂ ಶಾಂತಂ ದಗ್ಧ್ವಾ ಹತ್ವಾ ಕಬಂಧಕಂ ॥ ೩೪ ॥

ಶಬರೀಮನುಕಂಪ್ಯಾಥ ಋಷ್ಯಮೂಕಮುಪಾಗತೌ ।
ತತಸ್ತು ಹನುಮದ್ವಾಕ್ಯಾತ್ ಸ್ವಸಖ್ಯುಃ ಪ್ಲವಗೇಶಿತುಃ ॥ ೩೫ ॥

ವಿದ್ವಿಷಂ ವಾಲಿನಂ ಹತ್ವಾ ಸುಗ್ರೀವಮಕರೋನ್ನೃಪಂ ।
ತದಾಜ್ಞಪ್ತಾಸ್ತು ತೇ ಕೀಶಾಃ ಸರ್ವತಃ ಸಮುಪಾಗತಾಃ ॥ ೩೬ ॥

ಹನುಮತ್ಪ್ರಮುಖಾಃ ಸೀತಾಂ ಮಾರ್ಗಂತೋ ದಕ್ಷಿಣೋದಧಿಂ ।
ಪ್ರಾಪ್ಯ ಸಂಪಾತಿವಚನಾಲ್ಲಂಕಾಯಾಂ ನಿಶ್ಚಯಂ ಗತಾಃ ॥ ೩೭ ॥

---

ರಿಬ್ಬರನ್ನೂ ದೂರಹೋಗುವಂತೆ ಮಾಡಿ ಸೀತೆಯನ್ನಪಹರಿಸಿಕೊಂಡು ಹೋಗುತ್ತಿರುವಾಗ ಮಾರ್ಗದಲ್ಲಿ ತಡೆದ ಜಟಾಯುವನ್ನು ಹೊಡೆದು ಲಂಕೆಗೆ ಸೀತೆಯನ್ನು ಕರೆದುಕೊಂಡು ಬಂದನು.

೩೪-೩೫. ರಾಮಲಕ್ಷ್ಮಣರು ಬಂದು ಸೀತೆಯನ್ನು ಕಾಣದೆ ಸುತ್ತಲೂ ಹುಡುಕುತ್ತಿರಲಾಗಿ ಅಲ್ಲಿ ಶಾಂತವಾಗಿ ಬಿದ್ದಿದ್ದ ಜಟಾಯುವನ್ನು ನೋಡಿ ಅವನನ್ನು ಸುಟ್ಟು ಕಬಂಧನನ್ನು ಕೊಂದು, ಶಬರಿಗೆ ಅನುಗ್ರಹಮಾಡಿ, ಋಷ್ಯಮೂಕಪರ್ವತಕ್ಕೆ ಬಂದರು.

೩೫-೩೬. ತರುವಾಯ ಹನುಮಂತನ ಮಾತಿನಂತೆ ತನಗೆ ಸ್ನೇಹಿತನಾದ ಕಪಿರಾಜನಾದ ಸುಗ್ರೀವನಿಗೆ ವೈರಿಯಾದ ವಾಲಿಯನ್ನು ಸಂಹರಿಸಿ ಸುಗ್ರೀವನಿಗೆ ಪಟ್ಟಾಭಿಷೇಕಮಾಡಿಸಿದನು.

೩೬-೩೭. ಅನಂತರ ಸುಗ್ರೀವನ ಅಪ್ಪಣೆಯಪ್ರಕಾರ ಆ ಕಪಿಗಳು ಎಲ್ಲಾ ದಿಕ್ಕುಗಳಲ್ಲಿಯೂ ಸೀತಾದೇವಿಯನ್ನು ಹುಡುಕಿಕೊಂಡು ಹೊರಟರು. ಹನುಮಂತ ಮುಂತಾದ ಕಪಿಗಳ ಒಂದು ತಂಡವು ದಕ್ಷಿಣದಿಕ್ಕಿಗೆ ಹೊರಟು ದಕ್ಷಿಣಸಮುದ್ರದವರೆಗೆ ಬಂದು ಸಂಪಾತಿವಚನದಿಂದ ಲಂಕೆಯಲ್ಲಿ ಸೀತಾದೇವಿಯಿರುವಳೆಂದು ನಿಶ್ಚಯಿಸಿದರು.

ತತಸ್ತು ಹನುಮಾನೇಕಃ ಪ್ರಾಪ್ಯ ಲಂಕಾಂ ಪುರೀಂ ಕಪಿಃ ।
ಸಮುದ್ರಸ್ಯ ಪರೇ ಪಾರೇ ಪಶ್ಯದ್ರಾಮಪ್ರಿಯಾಂ ಸತೀಂ ॥ ೩೮ ॥
ದತ್ವಾ ರಾಮಾಂಗುಲೀರತ್ನಂ ವಿಶ್ವಾಸಮುಪಪಾದ್ಯ ತಾಂ ।
ತಯೋಃ ಕುಶಲಮಾಶ್ರಾವ್ಯ ಲಬ್ಧ್ವಾ ಚೂಡಾಮಣಿಂ ತತಃ ॥ ೩೯ ॥
ಭಂಕ್ತ್ವಾ ಚಾಶೋಕವನಿಕಾಂ ಹತ್ವಾ ಚಾಕ್ಷಂ ಸಸೈನ್ಯಕಂ ।
ಇಂದ್ರಜಿದ್ಬಂಧನಾತ್ಪ್ರಾಪ್ಯ ಸಂಭಾಷ್ಯಾಪಿ ಚ ರಾವಣಂ ॥ ೪೦ ॥
ದಗ್ಧ್ವಾ ಲಂಕಾಂ ಪುರೀಂ ಕೃತ್ಸ್ನಾಂ ಪುನರ್ದೃಷ್ಟ್ವಾ ತು ಮೈಥಿಲೀಂ ।
ಲಬ್ಧಾಜ್ಞೋಽರ್ಣವಮುಲ್ಲಂಘ್ಯ ರಾಮಾಯೈನಾಂ ನ್ಯವೇದಯತ್ ॥ ೪೧ ॥
ತತೋಽಸೌ ರಾವಣೋ ಭ್ರಾತ್ರಾ ಬೋಧಿತೋಽಪಿ ಕನೀಯಸಾ ।
ಪ್ರದಾಸಂ ತತ್ರ ಮೈಥಿಲ್ಯಾಸ್ತದ್ಭರ್ತ್ರೇ ನ ತ್ವರೋಚಯತ್ ॥ ೪೨ ॥

---

೩೮. ಅನಂತರ ಹನುಮಂತನೆಂಬ ಕಪಿಯೊಬ್ಬನೇ ಸಮುದ್ರವನ್ನು ದಾಟಿ ಅದರ ಆಕಡೆಯ ದಡದಲ್ಲಿದ್ದ ಲಂಕಾಪಟ್ಟಣವನ್ನು ಸೇರಿ ಅಲ್ಲಿ ಶ್ರೀರಾಮನ ಸತಿಯಾದ ಸೀತಾದೇವಿಯನ್ನು ನೋಡಿದನು.

೩೯. ಆ ದೇವಿಗೆ ಶ್ರೇಷ್ಠವಾದ ರಾಮನ ಅಂಗುಳೀಯಕವನ್ನು ಕೊಟ್ಟು ನಂಬಿಕೆಯನ್ನು ಹುಟ್ಟಿಸಿ ಆವಳಿಗೆ ರಾಮಲಕ್ಷ್ಮಣರ ಕುಶಲವಾರ್ತೆಯನ್ನು ತಿಳಿಸಿ ಆವಳಿಂದ ಚೂಡಾಮಣಿಯನ್ನು ಗುರ್ತಿಗಾಗಿ ತೆಗೆದುಕೊಂಡನು.

೪೦. ಬಳಿಕ ಅಶೋಕವನವನ್ನು ಹಾಳುಮಾಡಿ ಅಕ್ಷಕುಮಾರನನ್ನು ಸೈನ್ಯಸಹಿತವಾಗಿ ಸಂಹರಿಸಿ ಇಂದ್ರಜಿತ್ತುಮಾಡಿದ ಬ್ರಹ್ಮಾಸ್ತ್ರಬಂಧನದಿಂದ ರಾವಣನ ಸಮೀಪಕ್ಕೆ ಹೋಗಿ ಅವನೊಡನೆ ಮಾತನಾಡಿದನು

೪೧. ಅನಂತರ ಲಂಕಾಪಟ್ಟಣವನ್ನೆಲ್ಲಾ ಸುಟ್ಟು ಪುನಃ ಜಾನಕೀ ದೇವಿಯ ದರ್ಶನಮಾಡಿ ಅವಳ ಅಪ್ಪಣೆಯನ್ನು ಪಡೆದು ಸಮುದ್ರವನ್ನು ದಾಟಿ ಬಂದು ನಡೆದ ವೃತ್ತಾಂತವನ್ನು ರಾಮನಿಗೆ ಹೇಳಿದನು.

೪೨. ಇತ್ತಲಾಗಿ ಸಹೋದರನಾದ ವಿಭೀಷಣನು ಜಾನಕೀದೇವಿಯನ್ನು ಪತಿಯಾದ ರಾಮನಿಗೆ ಒಪ್ಪಿಸಬೇಕೆಂದು ರಾವಣನಿಗೆ ಬಹುವಾಗಿ ಬೋಧಿಸಿದನು. ಆದರೆ ಅವನಿಗೆ ಅದು ರುಚಿಸಲಿಲ್ಲ.

ಪದಾಹತಸ್ತತಸ್ತೇನ ರಾವಣೇನ ವಿಭೀಷಣಃ ।
ಸಂಪ್ರಾಪ್ತಃ ಶರಣಂ ರಾಮಂ ರಾಮೋ ಲಂಕಾಮುಪಾರುಣತ್ ॥ ೪೩ ॥

ತತಸ್ತು ಮಂತ್ರಿಣೋಮಾತ್ಯಾಃ ಪುತ್ರಾ ಭೃತ್ಯಾಃ ಪ್ರಚೋದಿತಾಃ ।
ಯುದ್ಧಾಯ ತೇ ಕ್ಷಯಂ ನೀತಾಸ್ತಾಭ್ಯಾಂ ಸಂಖ್ಯೇ ಕಪೀಶ್ವರೈಃ ॥ ೪೪ ॥

ಲಕ್ಷ್ಮಣಃ ಶಕ್ರಜೇತಾರಂ ಜಘ್ನಿವಾನ್ನಿಶಿತೈಃ ಶರೈಃ ।
ರಾಮೋಪಿ ಕುಂಭಶ್ರವಣಂ ರಾವಣಂ ಚಾಪ್ಯಜೀಘನತ್ ॥ ೪೫ ॥

ವಿಭೀಷಣೇನ ತತ್ಕೃತ್ಯಂ ಕಾರಯಿತ್ವಾ ನಿಜಾಂ ಪ್ರಿಯಾಂ ।
ವಹ್ನೌ ಸಂಶೋಧ್ಯ ದತ್ವಾಸ್ಮೈ ರಾಮೋ ರಕ್ಷೋಗಣೇಶತಾಂ ॥ ೪೬ ॥

ಲಂಕಾಮಾಯುಶ್ಚ ಕಲ್ಪಾಂತಂ ಯಯೌ ಜೀರ್ಣವ್ರತಃ ಪುರೀಂ ।
ಪುಷ್ಪಕೇಣ ವಿಮಾನೇನ ಸಸುಗ್ರೀವವಿಭೀಷಣಃ ॥ ೪೭ ॥

೪೩. ಅಷ್ಟೇ ಅಲ್ಲ; ರಾವಣನು ವಿಭೀಷಣನನ್ನು ಕಾಲಿನಿಂದ ಒದ್ದನು. ಆಗ ವಿಭೀಷಣನು ರಾಮನನ್ನು ಶರಣುಹೊಂದಿದನು. ರಾಮನು ಬಂದು ಲಂಕೆಗೆ ಮುತ್ತಿಗೆ ಹಾಕಿದನು

೪೪. ಅನಂತರ ಮಂತ್ರಿಗಳು ಅಮಾತ್ಯರು, ಮಕ್ಕಳು ಮತ್ತು ಭೃತ್ಯರನ್ನು ರಾವಣನು ಯುದ್ಧಕ್ಕೆ ಹೋಗಬೇಕೆಂದು ಅಪ್ಪಣೆಮಾಡಲಾಗಿ ಅವರೆಲ್ಲರೂ ಕಪೀಶ್ವರರೊಡನೆ ಯುದ್ಧಕ್ಕೆ ಹೋಗಿ ಮೃತರಾದರು.

೪೫. ಲಕ್ಷ್ಮಣನು ಇಂದ್ರಜಿತ್ತನ್ನು ನಿಶಿತವಾದ ಬಾಣಗಳಿಂದ ಹೊಡೆದು ಕೊಂದನು. ರಾಮನು ಕುಂಭಕರ್ಣ ಮತ್ತು ರಾವಣನನ್ನು ಸಂಹರಿಸಿದನು.

೪೬-೪೭. ಬಳಿಕ ರಾಮನು ಅವರಿಗೆ ವಿಭೀಷಣನಿಂದ ಕ್ರಿಯೆಯನ್ನು ಮಾಡಿಸಿ ಅವನಿಗೆ ರಾಕ್ಷಸ ಕುಲಾಧಿಪತ್ಯವನ್ನು ಕಲ್ಪಾಂತವಾಗಿ ಆಯುಸ್ಸನ್ನೂ ಅನುಗ್ರಹಿಸಿ, ತನ್ನ ಸತಿಯನ್ನು ಅಗ್ನಿಪ್ರವೇಶದಿಂದ ಪರಿಶುದ್ಧಳೆಂದು ತೋರಿಸಿ, ಸುಗ್ರೀವ ವಿಭೀಷಣರೊಡನೆ ಪುಷ್ಪಕವೆಂಬ ವಿಮಾನದಲ್ಲಿ ಕುಳಿತು ಪಟ್ಟಣಕ್ಕೆ ಹಿಂದಿರುಗಿದನು.

ನಂದಿಗ್ರಾಮಸ್ಥಭರತಂ ನೀತ್ವಾಯೋಧ್ಯಾಂ ಸಮಾವಿಶತ್ ।
ಮಾತೄಃ ಪ್ರಣಮ್ಯ ತಾಃ ಸರ್ವಾ ಭ್ರಾತರಸ್ತೇ ಪುರೋಧಸಾ ॥ ೪೮ ॥

ವಸಿಷ್ಠೇನಾನುವಿಜ್ಞಾಪ್ಯ ರಾಮಂ ರಾಜ್ಯೇಽಭಿಷೇಚಯನ್ ।
ತತೋ ರಾಮೋಽಪಿ ಭಗವಾನ್ ಪ್ರಜಾಃ ಶಾಸನ್ನಿವೌರಸಾನ್ ॥ ೪೯ ॥

ಲೋಕಾಪವಾದಾತ್ ಸಂತ್ರಸ್ತಃ ಸೀತಾಂ ತತ್ಯಾಜ ಧರ್ಮವಿತ್ ।
ಸಾ ತು ಸಂಪ್ರಾಪ್ಯ ವಾಲ್ಮೀಕೇರಾಶ್ರಮಂ ನ್ಯವಸತ್ಸುಖಂ ॥ ೫೦ ॥

ಪುತ್ರೌ ಚ ಸುಷುವೇ ತತ್ರ ನಾಮ್ನಾ ಖ್ಯಾತೌ ಕುಶೀಲವೌ ।
ವಾಲ್ಮೀಕಿಸ್ತು ತಯೋಃ ಕೃತ್ವಾ ಯಥಾ ಸಮುದಿತಾಃ ಕ್ರಿಯಾಃ ॥ ೫೧ ॥

---

೪೮-೪೯. ಬರುವಾಗ ನಂದಿಯೆಂಬ ಗ್ರಾಮದಲ್ಲಿದ್ದ ಭರತನನ್ನು ಕರೆದುಕೊಂಡು ಅಯೋಧ್ಯೆಗೆ ಪ್ರವೇಶಿಸಿ ಎಲ್ಲಾ ಮಾತೆಯರಿಗೂ ನಮಸ್ಕರಿಸಿದನು. ಬಳಿಕ ರಾಮನ ತಮ್ಮಂದಿರೆಲ್ಲರೂ ಪುರೋಹಿತನಾದ ವಸಿಷ್ಠ ಮುನಿಯಿಂದ ವಿಜ್ಞಾಪಿಸಲ್ಪಟ್ಟವರಾಗಿ ರಾಜ್ಯದಲ್ಲಿ ರಾಮನಿಗೆ ಪಟ್ಟಾಭಿಷೇಕಮಾಡಿದರು. ಬಳಿಕ ಭಗವಂತನಾದ ರಾಮನೂ ಸಹ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಂತೆ ಪ್ರಜೆಗಳನ್ನು ಕಾಪಾಡುತ್ತಿದ್ದನು.

೫೦. ಧರ್ಮಸೂಕ್ಷ್ಮಜ್ಞಾನಿಯಾದ ರಾಮನು ಲೋಕಾಪವಾದಕ್ಕೆ ಭಯಪಟ್ಟು ಸೀತೆಯನ್ನು ಬಿಟ್ಟನು. ಆ ಸೀತೆಯು ವಾಲ್ಮೀಕಿಮುನಿಯ ಆಶ್ರಮಕ್ಕೆ ಹೋಗಿ ಸುಖವಾಗಿ ವಾಸವಾಗಿದ್ದಳು.

೫೧. ಅಲ್ಲಿ ಸೀತಾದೇವಿಯು ಕುಶ, ಲವ ಎಂದು ವಿಖ್ಯಾತರಾದ ಇಬ್ಬರು ಮಕ್ಕಳನ್ನು ಪ್ರಸವಿಸಿದಳು. ವಾಲ್ಮೀಕಿಮುನಿಯು ಅವರಿಗೆ ವಿಹಿತವಾದ ಜಾತಕರ್ಮಾದಿ ಸಂಸ್ಕಾರಗಳನ್ನು ಮಾಡಿದನು.

ರಾಮಾಯಣಂ ವಿರಚ್ಯೈತಾವಧ್ಯಾಪಯದುದಾರಧೀಃ ।
ತೌ ಗಾಯಮಾನೌ ಸತ್ರೇಷು ಮುನೀನಾಂ ಖ್ಯಾತಿಮಾಗತೌ ॥ ೫೨ ॥

ಯಜ್ಞೇ ರಾಮಸ್ಯ ಸಂಪ್ರಾಪ್ತೌ ವಾಜಿಮೇಧೇ ಪ್ರವರ್ತಿತೇ ।
ತತ್ರ ತಾಭ್ಯಾಂ ತು ತದ್ಗೀತಂ ಸ್ವಚರಿತ್ರಂ ಪ್ರಸನ್ನಧೀಃ ॥ ೫೩ ॥

ಮುನಿಮಾಕಾರಯಾಮಾಸ ಸಸೀತಂ ತತ್ರ ಸಂಸದಿ ।
ಸಾ ತು ರಾಮಾಯ ತೌ ಪುತ್ರೌ ನಿವೇದ್ಯ ಜಗತೀಜನಿಃ ॥ ೫೪ ॥

ಜಗತ್ಯಾ ವಿವರಂ ಭೂಯೋ ವಿವೇಶಾಸೀತ್ತದದ್ಭುತಂ ।
ತತಃ ಪರಂ ಬ್ರಹ್ಮಚರ್ಯಂ ಯಜ್ಞಮೇವ ತ್ರಯೋದಶ ॥ ೫೫ ॥

ಸಹಸ್ರಾಬ್ದಾನ್ ಪ್ರಕುರ್ವಾಣಸ್ತಸ್ಥೌ ಭುವಿ ರಘೂತ್ತಮಃ ।
ತತಸ್ತು ಕಾಲದುರ್ವಾಸಾಃ ಸಂಪ್ರಾಪ್ತೋ ರಾಘವಂ ಪ್ರತಿ ॥ ೫೬ ॥

೫೨. ಉದಾರಚಿತ್ತನಾದ ವಾಲ್ಮೀಕಿಮುನಿಯು ರಾಮಾಯಣವನ್ನು ರಚಿಸಿ ಆ ಇಬ್ಬರು ಮಕ್ಕಳಿಗೆ ಅದನ್ನು ಅಧ್ಯಯನ ಮಾಡಿಸಿದನು. ಅವರಿಬ್ಬರೂ ಮುನಿಗಳ ಯಜ್ಞಗಳಲ್ಲಿ ರಾಮಾಣವನ್ನು ಚೆನ್ನಾಗಿ ಗಾನಮಾಡುತ್ತಾ ಪ್ರಸಿದ್ಧಿಗೆ ಬಂದರು.

೫೩. ಶ್ರೀರಾಮನು ಅಶ್ವಮೇಧಯಜ್ಞವನ್ನು ಮಾಡುತ್ತಿರುವಾಗ ಅಲ್ಲಿ ಆ ಕುಶಲವರು ರಾಮಚರಿತ್ರೆಯನ್ನು ಗಾನಮಾಡಿದರು.

೫೪. ಅದನ್ನು ಕೇಳಿ ಪ್ರಸನ್ನಚಿತ್ತನಾದ ರಾಮನು ಸೀತೆಯ ಸಹಿತವಾಗಿ ವಾಲ್ಮೀಕಿ ಮುನಿಯನ್ನು ಆ ಸಭೆಗೆ ಕರೆಯಿಸಿದನು. ಭೂಮಿಸುತೆಯಾದ ಆ ಸೀತೆಯಾದರೋ ಆ ಇಬ್ಬರು ಮಕ್ಕಳನ್ನು ರಾಮನಿಗೆ ಅರ್ಪಿಸಿದಳು.

೫೫-೫೬. ಬಳಿಕ ಸೀತೆಯು ಪುನಃ ಭೂಮಿಯ ಒಳಕ್ಕೆ ಪ್ರವೇಶ ಮಾಡಿದಳು. ಅದು ಬಹಳ ಆಶ್ಚರ್ಯಕರವಾಗಿದ್ದಿತು. ಅದಾದ ಮೇಲೆ ರಘೂತ್ತಮನು ಬ್ರಹ್ಮಚರ್ಯದಿಂದಲೇ ಹದಿಮೂರು ಸಾವಿರ ವರ್ಷಗಳ ಕಾಲ ಭೂಲೋಕದಲ್ಲಿದ್ದನು.

ಬ್ರಹ್ಮಣಾ ಪ್ರೇಷಿತೋ ಭದ್ರೇ ವೈಕುಂಠಗಮನಾಯ ಚ ।
ಸ ಏಕಾಂತಗತೋ ರಾಮಂ ಪ್ರಾಹ ಕೋಽಪೀಹ ನಾವ್ರಜೇತ್ ॥ ೫೭ ॥

ಆಗತೋ ವಧ್ಯತಾಂ ಯಾತು ರಾಮಸ್ತತ್ಪ್ರತಿಜಜ್ಞಿವಾನ್ ।
ಸ ಲಕ್ಷ್ಮಣಂ ಸಮಾಹೂಯ ಪ್ರೋವಾಚ ರಘುನಂದನಃ ॥ ೫೮ ॥

ದ್ವಾರಿ ತಿಷ್ಠಾತ್ರ ನಿರ್ದಿಷ್ಟೋ ವಧ್ಯತಾಂ ಮೇ ಪ್ರಯಾಸ್ಯತಿ ।
ಸ ತಥೇತಿ ಪ್ರತಿಜ್ಞಾಯ ರಾಮಸ್ಯಾಜ್ಞಾಂ ಸಮಾಚರನ್ ॥ ೫೯ ॥

ಪ್ರವೇಶನಂ ನ ಕಸ್ಯಾಪಿ ಪ್ರದದೌ ರಾಮಸನ್ನಿಧೌ ।
ಏವಮೇಕಾಂತಗಂ ರಾಮಂ ಕಾಲಸಂವಿದಮಾಸ್ಥಿತಂ ॥ ೬೦ ॥

ಜ್ಞಾತ್ವಾಥ ದ್ವಾರಿ ದುರ್ವಾಸಾ ಲಕ್ಷ್ಮಣಂ ಸಮುಪಾಗಮತ್ ।
ತಮಾಗತಂ ತು ಸಂಪ್ರೇಕ್ಷ್ಯ ಸೌಮಿತ್ರಿಃ ಪ್ರಣಿಪತ್ಯ ಚ ॥ ೬೧ ॥

---

೫೬-೫೮. ಭದ್ರೇ! ತರುವಾಯ ಬ್ರಹ್ಮನು ವೈಕುಂಠಕ್ಕೆ ಹೋಗುವುದಕ್ಕಾಗಿ ಕಾಲನನ್ನು ರಾಘವನ ಹತ್ತಿರಕ್ಕೆ ಕಳುಹಿಸಿದನು. ಅವನು ರಹಸ್ಯವಾಗಿ ಬಂದು "ಇಲ್ಲಿಗೆ ಯಾರೂ ಬರಕೂಡದು. ಯಾರಾದರೂ ಬಂದರೆ ಅವರು ಸಾಯುವರು" ಎಂದು ರಾಮನಿಗೆ ಹೇಳಿದನು.

೫೮-೫೯. ಅದನ್ನು ಕೇಳಿ ರಾಮನು ಹಾಗೆಯೇ ಆಗಲೆಂದು ಪ್ರತಿಜ್ಞೆ ಮಾಡಿದನು. ಕೂಡಲೇ ರಘುನಂದನನು ಲಕ್ಷ್ಮಣನನ್ನು ಕರೆದು "ನೀನು ಬಾಗಿಲಲ್ಲಿ ನಿಂತಿರು. ಯಾರನ್ನೂ ಒಳಗೆ ಬರದಂತೆ ತಡೆಮಾಡು. ಹಾಗೂ ಯಾರಾದರೂ ಒಳಗೆ ಬಂದರೆ ನನ್ನಿಂದ ಅವರು ಹತರಾಗುವರು" ಎಂದು ಹೇಳಿದನು.

೫೯-೬೦. ಆ ಲಕ್ಷ್ಮಣನು ಅಪ್ಪಣೆಯನ್ನು ನೆರವೇರಿಸುವೆನೆಂದು ಪ್ರತಿಜ್ಞೆಮಾಡಿ ರಾಮನ ಆಜ್ಞೆಯನ್ನು ಪಾಲಿಸುವವನಾಗಿ ರಾಮನ ಸನ್ನಿಧಾನಕ್ಕೆ ಯಾರೂ ಹೋಗದಂತೆ ತಡೆದಿದ್ದನು.

೬೦-೬೧. ಈ ರೀತಿ ರಾಮನು ರಹಸ್ಯವಾದ ಸ್ಥಾನದಲ್ಲಿ ಕಾಲನೊಡನೆ ಗೋಪ್ಯ ವಿಷಯಗಳ ಸಮಾಲೋಚನೆಯಲ್ಲಿ ತೊಡಗಿರುವನೆಂಬುದನ್ನು ತಿಳಿದು ದುರ್ವಾಸ ಮುನಿಯು ಬಾಗಿಲಿನಲ್ಲಿದ್ದ ಲಕ್ಷ್ಮಣನ ಬಳಿಗೆ ಬಂದನು.

ಮುಹೂರ್ತಂ ಪಾಲಯೇತ್ಯಾಹ ಮಂತ್ರವ್ಯಗ್ರೋಽಸ್ತಿ ರಾಘವಃ ।
ದುರ್ವಾಸಾಸ್ತದ್ವಚಃ ಶ್ರುತ್ವಾ ಕಾಲಸ್ಯಾರ್ಥವಿಧಾಯಕಃ ॥ ೬೨ ॥
ಕ್ರುದ್ಧಃ ಪ್ರೋವಾಚ ಸೌಮಿತ್ರಿಂ ದೇಹಿ ಮೇಽಂತಃಪ್ರವೇಶನಂ ।
ನೋಚೇತ್ತ್ವಾಂ ಭಸ್ಮಸಾತ್ಸದ್ಯಃ ಕರಿಷ್ಯಾಮಿ ವಿಚಾರಯ ॥ ೬೩ ॥
ತತೋ ದುರ್ವಾಸಸಃ ಶ್ರುತ್ವಾ ಲಕ್ಷ್ಮಣೋ ಜಾತಸಂಭ್ರಮಃ ।
ಮುನೇರ್ಭೀತೋ ವಿವೇಶಾಂತರ್ವಿಜ್ಞಾಪಯಿತುಮಗ್ರಜಂ ॥ ೬೪ ॥
ದೃಷ್ಟ್ವಾ ತು ಲಕ್ಷ್ಮಣಂ ಕಾಲ ಉತ್ಥಾಯ ಕೃತಮಂತ್ರಕಃ ।
ಪ್ರತಿಜ್ಞಾಂ ಪಾಲಯೇತ್ಯುಕ್ತ್ವಾ ಯಯೌ ರಾಮವಿಸರ್ಜಿತಃ ॥ ೬೫ ॥
ತತೋ ನಿಷ್ಕ್ರಮ್ಯ ಭಗವಾನ್ರಾಮೋ ಧರ್ಮಭೃತಾಂ ವರಃ ।
ಪ್ರತೋಷ್ಯ ತಂ ಮುನಿಂ ಪ್ರೀತೋ ದುರ್ವಾಸಸಮಭೋಜಯತ್ ॥ ೬೬ ॥

೬೧-೬೨. ಸುಮಿತ್ರಾತನಯನಾದ ಲಕ್ಷ್ಮಣನು ಅಲ್ಲಿಗೆ ಬಂದ ದುರ್ವಾಸ ಮುನಿಯನ್ನು ನೋಡಿ ಅವನಿಗೆ ನಮಸ್ಕಾರ ಮಾಡಿ ರಾಘವನು ಮಂತ್ರಾಲೋಚನೆಯಲ್ಲಿ ವ್ಯಾಪೃತನಾಗಿರುವನು ; ಒಂದು ಮುಹೂರ್ತಕಾಲ ತಡೆಯೆಂದು ಕೈಮುಗಿದು ಹೇಳಿದನು.

೬೨-೬೩. ಕಾಲನಿಂದ ವಿಧಿಸಲ್ಪಟ್ಟಿರುವ ಆ ಮಾತನ್ನು ಕೇಳಿ ದುರ್ವಾಸಮುನಿಯು ಕೋಪಗೊಂಡು “ ನನ್ನನ್ನು ಒಳಗೆ ಬಿಡು ! ಇಲ್ಲದಿದ್ದರೆ ಈಗಲೇ ನಿನ್ನನ್ನು ಸುಟ್ಟುಬಿಡುವೆನು ! ಯೋಚಿಸು ” ಎಂಬುದಾಗಿ ಲಕ್ಷ್ಮಣನಿಗೆ ಹೇಳಿದನು.

೬೪. ಆ ಮಾತನ್ನು ಕೇಳಿ ಲಕ್ಷ್ಮಣನು ಮುನಿಗೆ ಭೀತನಾಗಿ ಆತುರದಿಂದ ಅಣ್ಣನಿಗೆ ಈ ವೃತ್ತಾಂತವನ್ನು ತಿಳಿಸಲು ಒಳಕ್ಕೆ ಹೋದನು.

೬೫. ಕೃತಸಂಕೇತನಾದ ಕಾಲನು ಲಕ್ಷ್ಮಣನನ್ನು ನೋಡಿ ಎದ್ದು ಪ್ರತಿಜ್ಞೆಯನ್ನು ಪಾಲಿಸು ಎಂಬುದಾಗಿ ರಾಮನಿಗೆ ಹೇಳಿ ಹೊರಟು ಹೋದನು.

೬೬. ಬಳಿಕ ಧರ್ಮರಕ್ಷಕವರೇಣ್ಯನಾದ ಶ್ರೀರಾಮಭಗವಂತನು ಹೊರಕ್ಕೆ ಬಂದು ಮುನಿಯನ್ನು ಸಂತೋಷಪಡಿಸಿ ವಿಶ್ವಾಸಪೂರ್ವಕವಾಗಿ ಅವನಿಗೆ ಭೋಜನವನ್ನು ಮಾಡಿಸಿದನು.

ಭೋಜಯಿತ್ವಾ ಪ್ರಣಮ್ಯೈನಂ ವಿಸೃಜ್ಯ ಪ್ರಾಹ ಲಕ್ಷ್ಮಣಂ ।
ಭ್ರಾತರ್ಲಕ್ಷ್ಮಣ ಸಂಪ್ರಾಪ್ತಂ ಸಂಕಟಂ ಧರ್ಮಕಾರಣಾತ್ ॥ ೬೭ ॥
ಯತ್ತ್ವಂ ಮೇ ವಧ್ಯತಾಂ ಪ್ರಾಪ್ತೋ ದೈವಂ ಹಿ ಬಲವತ್ತರಂ ।
ಮಯಾ ತ್ಯಕ್ತಸ್ತತೋ ವೀರ ಯಥೇಚ್ಛಂ ಗಚ್ಛ ಸಾಂಪ್ರತಂ ॥ ೬೮ ॥
ತತಃ ಪ್ರಣಮ್ಯ ತಂ ರಾಮಂ ಸತ್ಯಧರ್ಮೇ ವ್ಯವಸ್ಥಿತಂ ।
ದಕ್ಷಿಣಾಂ ದಿಶಮಾಶ್ರಿತ್ಯ ತಪಶ್ಚಕ್ರೇ ನಗೋಪರಿ ॥ ೬೯ ॥
ತತೋ ರಾಮೋಽಪಿ ಭಗವಾನ್ ಬ್ರಹ್ಮಪ್ರಾರ್ಥನಯಾ ಪುನಃ ।
ಸ್ವಧಾಮಾವಿಶದವ್ಯಗ್ರಃ ಸಸಾಕೇತಃ ಪ್ರಣಮ್ಯ ತಂ ॥ ೭೦ ॥
ಗೋಪ್ರತಾರೇ ಸರಯ್ವಾಂ ಯೇ ರಾಮಂ ಸಂಚಿಂತ್ಯ ಸಂಪ್ಲುತಾಃ ।
ತೇ ರಾಮಧಾಮ ವಿವಿಶುರ್ದಿವ್ಯಾಂಗಾ ಯೋಗಿದುರ್ಲಭಂ ॥ ೭೧ ॥

---

೬೭-೬೮. ದುರ್ವಾಸಮುನಿಗೆ ಭೋಜನವನ್ನುಮಾಡಿಸಿ, ಅವನಿಗೆ ನಮಸ್ಕಾರಮಾಡಿ ಕಳುಹಿಸಿದ ಬಳಿಕ ರಾಮನು ಸಹೋದರಾ! ಲಕ್ಷ್ಮಣಾ! ಧರ್ಮನಿಮಿತ್ತದಿಂದ ಸಂಕಟವು ಬಂದಿತು! ನೀನು ನನ್ನಿಂದಲೇ ವಧ್ಯನಾಗಬೇಕಾಗಿದೆ. ದೈವವು ಬಲಿಷ್ಠವಾದುದು! ಆದಕಾರಣನಾನು ನಿನ್ನನ್ನು ಬಿಟ್ಟಿರುವೆನು! ವೀರಾ! ನಿನ್ನ ಇಚ್ಛಾನುಸಾರ ಈಗ ಹೋಗು! ಎಂದು ಲಕ್ಷ್ಮಣನಿಗೆ ಹೇಳಿದನು.

೬೯. ಬಳಿಕ ಲಕ್ಷ್ಮಣನು ಸತ್ಯಧರ್ಮಗಳಲ್ಲಿ ನಿರತನಾದ ರಾಮನನ್ನು ನಮಸ್ಕರಿಸಿ ದಕ್ಷಿಣದಿಕ್ಕಿಗೆ ಹೋಗಿ ಪರ್ವತದಮೇಲೆ ಕುಳಿತು ತಪಸ್ಸು ಮಾಡಿದನು.

೭೦. ತರುವಾಯ ಬ್ರಹ್ಮದೇವನ ಪ್ರಾರ್ಥನಾನುಸಾರವಾಗಿ ರಾಮನೂ ಸಹ ಸಮಾಧಾನದಿಂದ ಸಾಕೇತಪ್ರಜೆಗಳ ಸಹಿತನಾಗಿ ಹೊರಟು ತನ್ನ ಮೂಲಸ್ಥಾನವಾದ ವೈಕುಂಠವನ್ನು ಸೇರಿದನು.

೭೧. ಆಗ ರಾಮನನ್ನು ನಮಸ್ಕರಿಸಿ ಗೋಪ್ರತಾರಪ್ರದೇಶದಲ್ಲಿ ಸರಯೂನದಿಯಲ್ಲಿ ರಾಮಧ್ಯಾನಪೂರ್ವಕವಾಗಿ ಸ್ನಾನಮಾಡಿದವರು ಮನೋಹರಾಂಗರಾಗಿ ಯೋಗಿಗಳಿಗೂ ದುರ್ಲಭವಾದ ರಾಮಧಾಮುವನ್ನು ಹೊಂದಿದರು.

ಲಕ್ಷ್ಮಣಸ್ತು ಕಿಯತ್ಕಾಲಂ ತಪೋಯೋಗಬಲಾನ್ವಿತಃ |
ರಾಮಾನುಗಮನೇನ್ಯೈವ ಸ್ವಧಾಮಾವಿಶದವ್ಯಯಂ || ೭೨ ||

ಸಾನ್ನಿಧ್ಯಂ ಪರ್ವತೇ ತಸ್ಮಿನ್ ದತ್ವಾ ಸೌಮಿತ್ರಿರನ್ವಹಂ |
ಚಕ್ರೇ ನಿಜಾಧಿಕಾರಂ ಸ ತತಸ್ತತ್ ಕ್ಷೇತ್ರಮುತ್ತಮಂ || ೭೩ ||

ಯೇ ಪಶ್ಯಂತಿ ನರಾ ಭಕ್ತ್ಯಾ ಲಕ್ಷ್ಮಣಂ ಲಕ್ಷ್ಮಣಾಚಲೇ |
ತೇ ಕೃತಾರ್ಥಾ ನ ಸಂದೇಹೋ ಗಚ್ಛಂತಿ ಹರಿಮಂದಿರಂ || ೭೪ ||

ತತ್ರ ದಾನಂ ಪ್ರಶಂಸಂತಿ ಸ್ವರ್ಣಗೋಭೂಮಿವಾಜಿನಾಂ |
ದತ್ತಂ ತತ್ರಾಕ್ಷಯಂ ಸರ್ವಂ ಹುತಂ ಜಪ್ತಂ ಕೃತಂ ತಥಾ || ೭೫ ||

ಬಹುನಾ ಕಿಮಿಹೋಕ್ತೇನ ದರ್ಶನಂ ತಸ್ಯ ದುರ್ಲಭಂ |
ಅಗಸ್ಯ ತ್ವಂತರಾ ದೇವೇ ದೃಷ್ಟೇ ಮುಕ್ತಿರ್ನ ಸಂಶಯಃ || ೭೬ ||

---

೭೨. ಇತ್ತಲಾಗಿ ಲಕ್ಷ್ಮಣನು ಸ್ವಲ್ಪಕಾಲ ತಪಸ್ಸುಮಾಡಿ ಯೋಗಬಲದಿಂದ ಕೂಡಿದವನಾಗಿ ರಾಮನ ಮಾರ್ಗವನ್ನೇ ಅನುಸರಿಸಿ ನಾಶರಹಿತವಾದ ತನ್ನ ಸ್ಥಾನಕ್ಕೆ ಬಂದನು.

೭೩. ಆ ಪರ್ವತದಿಂದ ಹೊರಡುವಾಗ ಲಕ್ಷ್ಮಣನು ತನ್ನ ಸಾನ್ನಿಧ್ಯವನ್ನು ಅಲ್ಲಿಟ್ಟು ತನ್ನ ಹೆಸರಿನಿಂದಲೇ ಆ ಪರ್ವತವು ಪ್ರಸಿದ್ಧವಾಗುವಂತೆ ಮಾಡಿದನು. ಆಗಿನಿಂದ ಆ ಕ್ಷೇತ್ರವು ಉತ್ತಮವಾಯಿತು.

೭೪. ಲಕ್ಷ್ಮಣಾಚಲದಲ್ಲಿ ಭಕ್ತಿಯಿಂದ ಲಕ್ಷ್ಮಣನನ್ನು ದರ್ಶನಮಾಡುವ ಮನುಷ್ಯರು ಕೃತಾರ್ಥರಾಗಿ ಹರಿಮಂದಿರಕ್ಕೆ ಹೋಗುವರು, ಸಂದೇಹವಿಲ್ಲ.

೭೫. ಆ ಕ್ಷೇತ್ರದಲ್ಲಿ ಬಂಗಾರ, ಗೋವು, ಭೂಮಿ, ಅಶ್ವ ಇವುಗಳನ್ನು ದಾನಮಾಡುವುದು ಪ್ರಶಸ್ತವು. ಅಲ್ಲಿ ಮಾಡಿದ ದಾನ, ಹೋಮ, ಜಪ, ಇವೆಲ್ಲವೂ ಅಕ್ಷಯವಾಗುವುವು.

೭೬. ಹೆಚ್ಚು ಹೇಳುವುದರಿಂದೇನು? ದೇವಿ! ಆ ಲಕ್ಷ್ಮಣಾಚಲದ ದರ್ಶನವು ದುರ್ಲಭವು ಅದರಲ್ಲಿ ಲಕ್ಷ್ಮಣದೇವನನ್ನು ದರ್ಶನಮಾಡಿದುದೇ ಆದರೆ ಮುಕ್ತಿಯು ಲಭಿಸುವುದು, ಸಂದೇಹವಿಲ್ಲ.

ಏತದ್ರಾಮಚರಿತ್ರಂ ತು ಲಕ್ಷ್ಮಣಾಖ್ಯಾನಸಂಯುತಂ ।
ಶ್ರಾವಯೇದ್ಯೋಽಪಿ ಶೃಣುಯಾತ್ ಸ್ಯಾತಾಂ ತೌ ರಾಮವಲ್ಲಭೌ ॥ ೭೭ ॥

ಇತಿ ಶ್ರೀನಾರದೀಯಪುರಾಣೋತ್ತರಭಾಗೇ ವಸುಮೋಹಿನೀಸಂವಾದೇ
ರಾಮಲಕ್ಷ್ಮಣಚರಿತ್ರಸಹಿತ ಲಕ್ಷ್ಮಣಾಚಲಮಾಹಾತ್ಮ್ಯಂ
ನಾಮ ಪಂಚಸಪ್ತತಿತಮೋಽಧ್ಯಾಯಃ

ಇತಿ ಲಕ್ಷ್ಮಣಾಚಲಮಾಹಾತ್ಮ್ಯಂ ಸಮಾಪ್ತಂ



---

೭೭. ಲಕ್ಷ್ಮಣೋಪಾಖ್ಯಾನಸಹಿತವಾದ ಈ ರಾಮಚರಿತ್ರೆಯನ್ನು ಶ್ರವಣ ಪಠನಮಾಡುವವರಿಬ್ಬರೂ ಶ್ರೀರಾಮನ ಅನುಗ್ರಹಕ್ಕೆ ಪಾತ್ರರಾಗುವರು

ಇಂತು ಶ್ರೀನಾರದೀಯಪುರಾಣೋತ್ತರಭಾಗದಲ್ಲಿ ವಸು ಮೋಹಿನೀ
ಸಂವಾದದಲ್ಲಿ ರಾಮಲಕ್ಷ್ಮಣರ ಚರಿತ್ರೆಸಹಿತವಾದ ಲಕ್ಷ್ಮಣಾಚಲ
ಮಾಹಾತ್ಮ್ಯಕಥನವೆಂಬ ಎಪ್ಪತ್ತೈದನೆಯ ಅಧ್ಯಾಯವು
ಮುಗಿದುದು



## ಷಟ್ಸಪ್ತತಿತಮೋಽಧ್ಯಾಯಃ



**ಅಥ ಸೇತುಮಾಹಾತ್ಮ್ಯಂ ಪ್ರಾರಭ್ಯತೇ**

**ಮೋಹಿನ್ಯುವಾಚ**

**ಸಾಧು ಸಾಧು ದ್ವಿಜಶ್ರೇಷ್ಠ ಯನ್ಮೇ ರಾಮಾಯಣಂ ತ್ವಯಾ ।**
**ಶ್ರಾವಿತಂ ಸರ್ವಪಾಪಘ್ನಂ ನೃಣಾಂ ಪುಣ್ಯವಿವರ್ಧನಂ ॥ ೧ ॥**

**ಅಧುನಾ ಶ್ರೋತುಮಿಚ್ಛಾಮಿ ಸೇತುಮಾಹಾತ್ಮ್ಯಮುತ್ತಮಂ ।**

**ವಸುರುವಾಚ**

**ಶೃಣು ದೇವಿ ಪ್ರವಕ್ಷ್ಯಾಮಿ ಸೇತುಮಾಹಾತ್ಮ್ಯಮುತ್ತಮಂ ॥ ೨ ॥**

**ಯಂ ದೃಷ್ಟ್ವಾ ಮನುಜೋ ದೇವಿ ಮುಚ್ಯತೇ ಭವಸಾಗರಾತ್ ।**
**ಸೇತೋಃ ಸಂದರ್ಶನಂ ಪುಣ್ಯಂ ಯತ್ರ ರಾಮೇಶ್ವರೋ ವಿಭುಃ ॥ ೩ ॥**

---

### ಎಪ್ಪತ್ತಾರನೆಯ ಅಧ್ಯಾಯ

೧-೨. ಮೋಹಿನಿಯು ಹೇಳಿದಳು:—ದ್ವಿಜಶ್ರೇಷ್ಠಾ! ಒಳ್ಳೆಯದು! ಒಳ್ಳೆಯದು! ಮನುಷ್ಯರಿಗೆ ಸಕಲ ಪಾಪ ಪರಿಹಾರಕವೂ, ಪುಣ್ಯವೃದ್ಧಿಕರವೂ ಆದ ರಾಮಾಯಣವನ್ನು ನನಗೆ ಹೇಳಿರುವೆ. ಈಗ ನಾನು ಸೇತು ಮಾಹಾತ್ಮ್ಯೆಯನ್ನು ಕೇಳಬಯಸುವೆನು.

೨-೩. ವಸುವು ಹೇಳಿದನು:—ದೇವೀ! ಸೇತುಮಹಿಮೆಯನ್ನು ಹೇಳುವೆನು ಕೇಳು. ಮನುಷ್ಯನು ಸೇತುದರ್ಶನ ಮಾಡಿದರೆ ಸಂಸಾರ ಬಂಧವನ್ನು ಕಳೆದುಕೊಂಡು ಮುಕ್ತನಾಗುವನು. ರಾಮೇಶ್ವರಸ್ವಾಮಿಯು ಸನ್ನಿಹಿತನಾಗಿರುವ ಸೇತುವಿನ ದರ್ಶನವು ಪುಣ್ಯಪ್ರದವಾದುದು.

ದರ್ಶನಾದೇವ ಮರ್ತ್ಯಾನಾಮಮರತ್ವಂ ಪ್ರಯಚ್ಛತಿ ।
ರಾಮೇಶ್ವರಂ ತು ಸಂಪೂಜ್ಯ ನರೋ ನಿಯತಮಾನಸಃ ॥ ೪ ॥

ಸರ್ವಾಃ ಸಮಶ್ನುತೇ ಭೂತೀರ್ನಾತ್ರ ಕಾರ್ಯಾ ವಿಚಾರಣಾ ।
ಚಕ್ರತೀರ್ಥಮಿಹಾನ್ಯಚ್ಚ ವರ್ತತೇ ಪಾಪನಾಶನಂ ॥ ೫ ॥

ಸ್ನಾನಂ ದಾನಂ ಜಪೋ ಹೋಮಸ್ತತ್ರಾನಂತ್ಯಂ ವಿಗಾಹತೇ ।
ಕಾಲತೀರ್ಥಂ ತು ಸಂಪ್ರಾಪ್ಯ ಯಃ ಸ್ನಾಯಾತ್ತತ್ರ ಮಾನವಃ ॥ ೬ ॥

ಸ ಉತ್ತಮಾಂ ಜನಿಂ ಲಬ್ಧ್ವಾ ಮೋದತೇ ದೇವವದ್ಭುವಿ ।
ತತಃ ಸಂಪ್ರಾಪ್ಯ ಸುಭಗೇ ತೀರ್ಥಂ ಪಾಪವಿನಾಶನಂ ॥ ೭ ॥

ಸ್ನಾತ್ವಾ ನಿರ್ಧೂತಪಾಪೋಽಸೌ ನರಃ ಸ್ವರ್ಗೇ ಮಹೀಯತೇ ।
ಸೀತಾಕುಂಡಂ ತತಃ ಪ್ರಾಪ್ಯ ಸ್ನಾನಂ ಸಮ್ಯಗ್ವಿಧಾಯ ಚ ॥ ೮ ॥

---

೪-೫. ಸೇತುವಿನ ದರ್ಶನಮಾಡುವ ಮಾತ್ರದಿಂದ ಅದು ಅಮರಸಾರೂಪ್ಯವನ್ನು ಕೊಡುವುದು. ಮನುಷ್ಯನು ನಿಯತ ಚಿತ್ತನಾಗಿ ರಾಮೇಶ್ವರನನ್ನು ಪೂಜೆಮಾಡಿದರೆ ಸಕಲೈಶ್ವರ್ಯಗಳನ್ನೂ ಪೊಂದುವನು. ಈ ವಿಷಯದಲ್ಲಿ ಸಂದೇಹ ಪಡಬಾರದು. ಇಲ್ಲಿ ಚಕ್ರತೀರ್ಥವೆಂಬ ಪಾಪನಾಶಕವಾದ ಇನ್ನೊಂದು ತೀರ್ಥವಿದೆ.

೬-೭. ಅಲ್ಲಿ ಮಾಡುವ ಸ್ನಾನ, ದಾನ, ಜಪ, ಹೋಮ, ಇವೆಲ್ಲವೂ ಅನಂತ ಫಲದಾಯಕವಾಗುವುವು. ಅಲ್ಲಿಯೇ ಇರುವ ಕಾಲತೀರ್ಥಕ್ಕೆ ಹೋಗಿ ಸ್ನಾನಮಾಡಿದ ಮನುಷ್ಯನು ಭೂಲೋಕದಲ್ಲಿ ಉತ್ತಮ ಜನ್ಮವನ್ನು ತಾಳಿ ದೇವತೆಯಂತೆ ಸುಖಪಡುವನು.

೭-೮. ಸುಂದರಿಯೇ! ಅನಂತರ ಪಾಪವಿನಾಶನ ತೀರ್ಥಕ್ಕೆ ಹೋಗಿ ಸ್ನಾನ ಮಾಡಿದರೆ ಮನುಷ್ಯನು ತನ್ನ ಪಾಪವನ್ನೆಲ್ಲಾ ಕಳೆದುಕೊಂಡು ಸ್ವರ್ಗ ಲೋಕದಲ್ಲಿ ಸುಖಭಾಗಿಯಾಗುವನು.

ತರ್ಪಯಿತ್ವಾ ಪಿತೄನ್ ದೇವಾನ್ ಸರ್ವಾನ್ಕಾಮಾನವಾಪ್ನುಯಾತ್ ।
ಮಂಗಲಂ ತೀರ್ಥಮಾಸಾದ್ಯ ಸ್ನಾತ್ವಾ ಮುಚ್ಯೇತ ಪಾತಕಾತ್ ॥ ೯ ॥

ಸ್ನಾತ್ವೈವಾಮೃತವಾಪ್ಯಾಂ ತು ಮಾನವೋಽಮರತಾಂ ಲಭೇತ್ ।
ಬ್ರಹ್ಮಕುಂಡೇ ನರಃ ಸ್ನಾತ್ವಾ ನರೋ ಯೋಗಗತಿಂ ವ್ರಜೇತ್ ॥ ೧೦ ॥

ಜಟಾತೀರ್ಥೇ ನರಃ ಸ್ನಾತ್ವಾ ನೀರೋಗೋ ಬ್ರಹ್ಮಲೋಕಭಾಕ್ ।
ಹನುಮತ್ಕುಂಡಕೇ ಸ್ನಾತ್ವಾ ದುರ್ಜಯೋ ಜಾಯತೇಽರಿಭಿಃ ॥ ೧೧ ॥

ಅಗಸ್ತ್ಯತೀರ್ಥಂ ಆಪ್ಲುತ್ಯ ಪುತ್ರವಾನ್ ಧನವಾನ್ ಭವೇತ್ ।
ರಾಮಕುಂಡೇ ಪ್ಲುತೋ ಮರ್ತ್ಯೋ ರಾಮಸಾಲೋಕ್ಯಮಾಪ್ನುಯಾತ್ ।

ಸ್ನಾತ್ವಾ ಲಕ್ಷ್ಮಣತೀರ್ಥೇ ವೈ ನರೋ ಯೋಗಗತಿಂ ವ್ರಜೇತ್ ।
ಜಟಾತೀರ್ಥೇ ನರಃ ಸ್ನಾತ್ವಾ ನೀರೋಗೋ ಜಾಯತೇ ಭುವಿ ॥ ೧೩ ॥

---

೮-೯. ತರುವಾಯ ಸೀತಾಕುಂಡಕ್ಕೆ ಹೋಗಿ ಚೆನ್ನಾಗಿ ಸ್ನಾನಮಾಡಿ ಪಿತೃದೇವತೆಗಳಿಗೆ ತರ್ಪಣ ಕೊಟ್ಟರೆ ಇಷ್ಟಾರ್ಥಗಳೆಲ್ಲಾ ಸಿದ್ಧಿಸುವುದು. ಮಂಗಳ ತೀರ್ಥದಲ್ಲಿ ಸ್ನಾನಮಾಡಿದರೆ ಪಾಪವಿಮೋಚನೆಯಾಗುವುದು.

೧೦. ಅಮೃತವಾಪಿಯಲ್ಲಿ ಸ್ನಾನಮಾಡಿದರೆ ಮಾನವನು ಅಮರ ಸದೃಶನಾಗುವನು. ಬ್ರಹ್ಮ ಕುಂಡದಲ್ಲಿ ಸ್ನಾನಮಾಡಿದ ನರನು ಯೋಗಮಾರ್ಗ ವನ್ನು ಹೊಂದುವನು.

೧೧. ಮನುಷ್ಯನು ಜಟಾತೀರ್ಥದಲ್ಲಿ ಸ್ನಾನಮಾಡಿದರೆ ರೋಗವನ್ನು ಪರಿಹರಿಸಿಕೊಂಡು ಬ್ರಹ್ಮಲೋಕಭಾಗಿಯಾಗುವನು ಹನುಮತ್ಕುಂಡದಲ್ಲಿ ಸ್ನಾನ ಮಾಡುವವನು ಶತ್ರುಗಳಿಗೆ ಅಜೇಯನಾಗುವನು

೧೨. ಅಗಸ್ತ್ಯತೀರ್ಥದಲ್ಲಿ ಸ್ನಾನಮಾಡಿದರೆ ಪುತ್ರವಂತನು, ಧನ ವಂತನೂ ಆಗುವನು. ರಾಮಕುಂಡದಲ್ಲಿ ಮುಳುಗಿ ಸ್ನಾನಮಾಡಿದ ಮನು ಷ್ಯನು ರಾಮಸಾಲೋಕ್ಯವನ್ನು ಪಡೆಯುವನು.

೧೩. ಲಕ್ಷ್ಮಣತೀರ್ಥದಲ್ಲಿ ಸ್ನಾನಮಾಡುವುದರಿಂದ ಮನುಷ್ಯನು ಯೋಗಗತಿಯನ್ನು ಹೊಂದುವನು ಜಟಾತೀರ್ಥದಲ್ಲಿ ಸ್ನಾನಮಾಡಿದರೆ ಮನು ಷ್ಯನು ಭೂಮಿಯಲ್ಲಿ ನೀರೋಗಿಯಾಗುವನು.

ಲಕ್ಷ್ಮೀತೀರ್ಥಾಭಿಷೇಕೇನ ಲಕ್ಷ್ಮೀವಾನ್ ರೂಪವಾನ್ಭವೇತ್ |
ಅಗ್ನಿತೀರ್ಥೇ ನರಃ ಸ್ನಾತ್ವಾ ಮುಚ್ಯತೇ ಸರ್ವಕಿಲ್ಬಿಷೈಃ || ೧೪ ||

ಸ್ನಾನೇನ ಶಿವತೀರ್ಥೇ ತು ಶಿವಲೋಕಗತಿರ್ಭವೇತ್ |
ಶಂಖತೀರ್ಥೇ ತು ಸಂಸ್ನಾತೋ ನ ನರೋ ದುರ್ಗತಿಂ ವ್ರಜೇತ್ || ೧೫ ||

ಯಮುನಾದಿಷು ತೀರ್ಥೇಷು ನರಃ ಸ್ನಾತ್ವಾ ದಿವಂ ವ್ರಜೇತ್ |
ಕೋಟಿತೀರ್ಥಂ ತು ಸಂಪ್ಲುತ್ಯ ಸರ್ವತೀರ್ಥಫಲಂ ಲಭೇತ್ || ೧೬ ||

ಸಾಧ್ಯಾಮೃತೇ ಪ್ಲುತೋ ಯಾತಿ ನರಃ ಸಾಧ್ಯಸಲೋಕತಾಂ |
ಸರ್ವತೀರ್ಥೇ ನರಃ ಸ್ನಾತ್ವಾ ಲಭೇತ್ಕಾಮಾನಭೀಪ್ಸಿತಾನ್ || ೧೭ ||

ಧನುಷ್ಕೋಟ್ಯಾಂ ತು ವಿಧಿವತ್ ಸ್ನಾತೋ ಮುಚ್ಯೇತ ಬಂಧನಾತ್ |
ಕ್ಷೀರಕುಂಡಾಪ್ಲುತೋ ಮರ್ತ್ಯೋ ಭೋಗಾನುಚ್ಚಾವಚಾಂಲ್ಲಭೇತ್ ||೧೮||

---

೧೪. ಲಕ್ಷ್ಮೀತೀರ್ಥದಲ್ಲಿ ಸ್ನಾನಮಾಡಿದರೆ ಐಶ್ವರ್ಯವಂತನು, ರೂಪವಂತನೂ ಆಗುವನು. ಅಗ್ನಿತೀರ್ಥದಲ್ಲಿ ಸ್ನಾನಮಾಡಿದ ಮನುಷ್ಯನು ಸಕಲ ಪಾಪಗಳನ್ನೂ ಕಳೆದುಕೊಳ್ಳುವನು.

೧೫. ಶಿವತೀರ್ಥದಲ್ಲಿ ಸ್ನಾನಮಾಡುವುದರಿಂದ ಶಿವಲೋಕಪ್ರಾಪ್ತಿಯಾಗುವುದು ಶಂಖತೀರ್ಥದಲ್ಲಿ ಸ್ನಾನಮಾಡಿದ ಮನುಷ್ಯನು ದುರ್ಗತಿಯನ್ನು ಹೊಂದುವುದಿಲ್ಲ.

೧೬. ಯಮುನಾ ಮುಂತಾದ ತೀರ್ಥಗಳಲ್ಲಿ ಸ್ನಾನಮಾಡುವುದರಿಂದ ಮನುಷ್ಯನಿಗೆ ಸ್ವರ್ಗಪ್ರಾಪ್ತಿಯಾಗುವುದು. ಕೋಟಿತೀರ್ಥದಲ್ಲಿ ಅವಗಾಹನ ಸ್ನಾನಮಾಡಿದರೆ ಸಕಲ ತೀರ್ಥಸ್ನಾನಗಳ ಫಲವೂ ಬರುವುದು.

೧೭. ಸಾಧ್ಯಾಮೃತವೆಂಬ ತೀರ್ಥದಲ್ಲಿ ಸ್ನಾನಮಾಡಿದ ನರನು ಸಾಧ್ಯಸಾಲೋಕ್ಯವನ್ನು ಹೊಂದುವನು. ಮನುಜನು ಸರ್ವತೀರ್ಥದಲ್ಲಿ ಸ್ನಾನಮಾಡುವುದರಿಂದ ಬಯಸಿದ ಇಷ್ಟಾರ್ಥಗಳೆಲ್ಲವೂ ಲಭಿಸುವುದು.

೧೮ ಧನುಷ್ಕೋಟಿಯಲ್ಲಿ ವಿಧಿವತ್ತಾಗಿ ಸ್ನಾನಮಾಡಿದವನಿಗೆ ಸಂಸಾರ ಬಂಧದಿಂದ ಬಿಡುಗಡೆಯಾಗುವುದು ಕ್ಷೀರಕುಂಡದಲ್ಲಿ ಸ್ನಾನಮಾಡಿದವನು ಉತ್ತಮಾಧಮ ಭೋಗಗಳನ್ನು ಪಡೆಯುವನು

ಕಪಿತೀರ್ಥೇ ನರಃ ಸ್ನಾತ್ವಾ ನಯೋನಿಂ ಸಮಾಲಭೇತ್ ।
ಗಾಯತ್ರ್ಯಾಂ ಚ ಸರಸ್ವತ್ಯಾಂ ಸ್ನಾತೋ ಮುಚ್ಯೇತ ಕಿಲ್ಬಿಷಾತ್ ॥ ೧೯ ॥

ಋಣಮೋಚನತೀರ್ಥಾದೌ ಸ್ನಾತ್ವಾ ಮುಕ್ತೋ ಭವೇದೃಣಾತ್ ।
ಇತ್ಯೇತ್ಸೇತುತೀರ್ಥಾನಾಂ ಮಾಹಾತ್ಮ್ಯಂ ಗದಿತಂ ಶುಭೇ ॥ ೨೦ ॥
ಪಠತಾಂ ಶೃಣ್ವತಾಂ ಚೈವ ಸರ್ವಪಾತಕನಾಶನಂ ॥ ೨೧ ॥

ಇತಿ ಶ್ರೀನಾರದೀಯಪುರಾಣೋತ್ತರಭಾಗೇ ವಸುಮೋಹಿನೀಸಂವಾದೇ
ಸೇತುಮಾಹಾತ್ಮ್ಯಂ ನಾಮ ಷಟ್ಸಪ್ತತಿತಮೋಽಧ್ಯಾಯಃ
ಇತಿ ಸೇತುಮಾಹಾತ್ಮ್ಯಂ ಸಮಾಪ್ತಂ

---

೧೯. ಕಪಿತೀರ್ಥದಲ್ಲಿ ಸ್ನಾನಮಾಡಿದ ಮನುಷ್ಯನಿಗೆ ಮುಂದೆ ಹೊಸ ಜನ್ಮ ಬರುವುದಿಲ್ಲ. ಗಾಯತ್ರೀ ಮತ್ತು ಸರಸ್ವತೀ ತೀರ್ಥಗಳಲ್ಲಿ ಸ್ನಾನಮಾಡುವುದರಿಂದ ಪಾಪವಿಮೋಚನೆಯಾಗುವುದು.

೨೦. ಋಣಮೋಚನ ತೀರ್ಥದಲ್ಲಿ ಸ್ನಾನಮಾಡಿದರೆ ಋಣಪರಿಹಾರವಾಗುವುದು- ಮಂಗಳಸ್ವರೂಪಳೇ ! ಈ ರೀತಿಯಾಗಿ ಸೇತುವಿನಲ್ಲಿರುವ ತೀರ್ಥಗಳ ಮಾಹಾತ್ಮ್ಯೆಯನ್ನು ನಿನಗೆ ಹೇಳಿರುವೆನು.

೨೧. ಈ ಮಾಹಾತ್ಮ್ಯೆಯು ಶ್ರವಣ ಪಠನೆ ಮಾಡುವವರ ಸಕಲ ಪಾಪಗಳನ್ನೂ ನಾಶಪಡಿಸುವುದು.

ಇಂತು ಶ್ರೀನಾರದೀಯಪುರಾಣೋತ್ತರಭಾಗದೊಳು ವಸು ಮೋಹಿನೀ
ಸಂವಾದದಲ್ಲಿ ಸೇತುಮಾಹಾತ್ಮ್ಯೆಕಥನೆಯೆಂಬ ಎಪ್ಪತ್ತಾರನೆಯ
ಅಧ್ಯಾಯವು ಮುಗಿದುದು.

---

## ಸಪ್ತಸಪ್ತತಿತಮೋಽಧ್ಯಾಯಃ

---

### ಅಥ ನರ್ಮದಾತೀರ್ಥಮಾಹಾತ್ಮ್ಯಂ ಪ್ರಾರಭ್ಯತೇ

ಮೋಹಿನ್ಯುವಾಚ

**ಶ್ರುತಂ ಮಯಾ ದ್ವಿಜಶ್ರೇಷ್ಠ ಸೇತುಮಾಹಾತ್ಮ್ಯಮುತ್ತಮಂ |**
**ಅಧುನಾ ಶ್ರೋತುಮಿಚ್ಛಾಮಿ ನರ್ಮದಾತೀರ್ಥಸಂಗ್ರಹಂ ॥ ೧ ॥**

ವಸುರುವಾಚ

**ಶೃಣು ಮೋಹಿನಿ ವಕ್ಷ್ಯಾಮಿ ನರ್ಮದೋಭಯತೀರಗಂ |**
**ಚತುಃಶತಂ ಮುಖ್ಯತಮಂ ಪ್ರೋಕ್ತಂ ತೀರ್ಥಕದಂಬಕಂ ॥ ೨ ॥**

**ಏಕಾದಶೋತ್ತರೇ ತೀರೇ ದಕ್ಷಿಣೇ ಚ ತ್ರಿವಿಂಶತಿಃ |**
**ಪಂಚತ್ರಿಂಶತ್ತಥಾ ಪ್ರೋಕ್ತಾ ರೇವಾಸಾಗರಸಂಗಮೇ ॥ ೩ ॥**

---

### ಎಪ್ಪತ್ತೇಳನೆಯ ಅಧ್ಯಾಯ

೧. ದ್ವಿಜಶ್ರೇಷ್ಠಾ! ಉತ್ತಮವಾದ ಸೇತು ಮಾಹಾತ್ಮ್ಯೆಯನ್ನು ನಿನ್ನಿಂದ ಕೇಳಿದೆನು. ಈಗ ನರ್ಮದಾತೀರ್ಥದ ಮಾಹಾತ್ಮ್ಯೆಯನ್ನು ಕೇಳಬಯಸುವೆನು ಎಂಬುದಾಗಿ ಮೋಹಿನಿಯು ವಸುವಿಗೆ ಹೇಳಿದಳು.

೨. ವಸುವು ಹೇಳಿದನು :—ಮೋಹಿನಿಯೇ! ಕೇಳು! ನರ್ಮದಾನದಿಯ ಎರಡು ತೀರಗಳಲ್ಲಿ ನಾಲ್ಕುನೂರು ತೀರ್ಥಗಳನ್ನೊಳಗೊಂಡ ತೀರ್ಥ ಕದಂಬವು ಬಹು ಪ್ರಾಮುಖ್ಯವಾದುದೆಂದು ಉಕ್ತವಾಗಿದೆ.

೩. ನರ್ಮದಾನದಿಯು ಸಮುದ್ರಕ್ಕೆ ಸೇರುವ ಸ್ಥಳದಲ್ಲಿ ಅದರ ಉತ್ತರ ತೀರದಲ್ಲಿ ಹನ್ನೊಂದು, ದಕ್ಷಿಣ ತೀರದಲ್ಲಿ ಇಪ್ಪತ್ತುಮೂರು, ಸಂಗಮಕ್ಷೇತ್ರ ಎಂಬುದಾಗಿ ಮೂವತ್ತೈದು ತೀರ್ಥಗಳಿವೆಯೆಂದು ಉಕ್ತವಾಗಿದೆ.

ಓಂಕಾರತೀರ್ಥಂ ಪರಿತೋ ನಗಾದಮರಕಂಟಕಾತ್ |
ಕ್ರೋಶದ್ವಯೇ ಸರ್ವದಿಕ್ಷು ಸಾರ್ಧಕೋಟಿತ್ರಯೀ ಸ್ಥಿತಾ || ೪ ||

ಕೋಟಿರೇಕಾ ತು ತೀರ್ಥಾನಾಂ ಕಪಿಲಾಸಂಗಮೇ ಸ್ಥಿತಾ |
ಅಶೋಕವನಿಕಾಯಾಂ ಚ ತೀರ್ಥಲಕ್ಷಂ ಪ್ರತಿಷ್ಠಿತಂ || ೫ ||

ಶತಮಂಗಾರಗರ್ತಾಯಾಃ ಕುಬ್ಜಾಯಾ ಅಯುತಂ ತಥಾ |
ಸಹಸ್ರಂ ವಾಯುಸಂಗೇ ತು ಸರಸ್ವತ್ಯಾಃ ಶತಂ ಸ್ಥಿತಂ || ೬ ||

ಶತದ್ವಯಂ ಶುಕ್ಲತೀರ್ಥೇ ಸಹಸ್ರಂ ವಿಷ್ಣುತೀರ್ಥಕೇ |
ಮಾಹಿಷ್ಮತ್ಯಾಂ ಚ ಸಾಹಸ್ರಂ ಶೂಲಭೇದೇಯುತಂ ವಿದುಃ || ೭ ||

ದೇವಗ್ರಾಮೇ ಸಹಸ್ರಂ ಚೋಲೂಕೇ ಸಪ್ತಶತೀ ಸ್ಥಿತಾ |
ತೀರ್ಥಾನ್ಯಷ್ಟೋತ್ತರಶತಂ ಮಣಿನದ್ಯಾಶ್ಚ ಸಂಗಮೇ || ೮ ||

---

೪. ಸುತ್ತಲೂ ಓಂಕಾರವೆಂಬ ತೀರ್ಥವಿದೆ. ಅಮರಕಂಟಕಪರ್ವತಕ್ಕೆ ಎರಡು ಕ್ರೋಶಗಳ ಪ್ರದೇಶದಲ್ಲಿ ಸಕಲ ದಿಕ್ಕುಗಳಲ್ಲಿಯೂ ಮೂರೂವರೆ ಕೋಟಿ ತೀರ್ಥಗಳಿವೆ.

೫. ಕಪಿಲಾಸಂಗಮದಲ್ಲಿ ಒಂದು ಕೋಟಿ ತೀರ್ಥಗಳಿವೆ. ಅಶೋಕ ವನಿಕೆಯಲ್ಲಿ ಒಂದು ಲಕ್ಷ ತೀರ್ಥಗಳಿವೆ.

೬ ಅಂಗಾರಗರ್ತದಲ್ಲಿ ನೂರು, ಕುಬ್ಜಾ (ಕಜ್ವಾ) ಸಂಗಮದಲ್ಲಿ ಹತ್ತು ಸಾವಿರ, ವಾಯುತೀರ್ಥಸಂಗಮದಲ್ಲಿ ಒಂದು ಸಾವಿರ, ಸರಸ್ವತೀಸಂಗಮದಲ್ಲಿ ನೂರು ತೀರ್ಥಗಳೂ ಇವೆ.

೭. ಶುಕ್ಲತೀರ್ಥದಲ್ಲಿ ಇನ್ನೂರು, ವಿಷ್ಣುತೀರ್ಥದಲ್ಲಿ ಒಂದು ಸಾವಿರ, ಮಾಹಿಷ್ಮತಿಯಲ್ಲಿ ಸಾವಿರ, ಶೂಲಭೇದದಲ್ಲಿ ಹತ್ತುಸಾವಿರ ತೀರ್ಥಗಳೂ ಇವೆ ಯೆಂದು ಜ್ಞಾನಿಗಳು ತಿಳಿದಿರುವರು.

೮. ದೇವಗ್ರಾಮದಲ್ಲಿ ಸಾವಿರ, ಉಲೂಕದಲ್ಲಿ ಏಳುನೂರು, ಮಣಿ ನದಿಯ ಸಂಗಮದಲ್ಲಿ ಒಂದುನೂರೆಂಟು ತೀರ್ಥಗಳೂ ಸನ್ನಿಹಿತವಾಗಿವೆ.

ವೈದ್ಯನಾಥೇ ಚ ತಾವಂತಿ ತಾವಂತ್ಯೇವ ಘಟೇಶ್ವರೇ ।
ಸಾರ್ಧಲಕ್ಷಂ ಚ ತೀರ್ಥಾನಾಂ ಸ್ಥಿತಂ ರೇವಾಬ್ಧಿಸಂಗಮೇ ॥ ೯ ॥

ಅಷ್ಟಾಶೀತಿಸಹಸ್ರಾಣಿ ವ್ಯಾಸೇ ದ್ವೀಪಶತಾನಿ ಚ ।
ಸಂಗಮೇ ತು ಕರಂಜಾಯಾಃ ಸ್ಥಿತಮಷ್ಟೋತ್ತರಾಯುತಂ ॥ ೧೦ ॥

ಏರಂಡೀಸಂಗಮೇ ತದ್ವತ್ತೀರ್ಥಾನ್ಯಷ್ಟಾಧಿಕಂ ಶತಂ ।
ಧೂತಪಾಪೇಷ್ವಷಷ್ಟಿಶ್ಚ ಸಾರ್ಧಕೋಟಿಶ್ಚ ಕೋಕಿಲೇ ॥ ೧೧ ॥

ಸಹಸ್ರಂ ರೋಮಕೇಶೇ ಚ ದ್ವಾದಶಾರ್ಕೇ ಸಹಸ್ರಕಂ ।
ಲಕ್ಷಾಧಿಕೇ ಸಹಸ್ರೇ ದ್ವೇ ಶುಕ್ಲತೀರ್ಥೇ ನರೇಶ್ವರಿ ॥ ೧೨ ॥

ಸಂಗಮೇಷು ತು ಸರ್ವೇಷು ಶತಮಷ್ಟಾಧಿಕಂ ವಿದುಃ ।
ಕಾವೇರ್ಯಾಃ ಸಂಗಮೇ ನಂದೇ ತೀರ್ಥಪಂಚಶತೀ ಸ್ಥಿತಾ ॥ ೧೩ ॥

---

೯. ವೈದ್ಯನಾಥಕ್ಷೇತ್ರದಲ್ಲಿಯೂ ಮತ್ತು ಘಟೇಶ್ವರದಲ್ಲಿಯೂ ಒಂದು ನೂರೆಂಟು ತೀರ್ಥಗಳಿವೆ. ನರ್ಮದಾಸಾಗರಸಂಗಮದಲ್ಲಿ ಒಂದೂವರೆ ಲಕ್ಷ ತೀರ್ಥಗಳಿವೆ.

೧೦. ವ್ಯಾಸಕ್ಷೇತ್ರದಲ್ಲಿ ಎಂಬತ್ತೆಂಟುಸಾವಿರ ತೀರ್ಥಗಳು ಮತ್ತು ಒಂದುನೂರು ದ್ವೀಪಗಳೂ ಇವೆ. ಕರಂಜಾಸಂಗಮದಲ್ಲಿ ಹತ್ತುಸಾವಿರದೆಂಟು ತೀರ್ಥಗಳಿವೆ.

೧೧. ಏರಂಡೀ ಸಂಗಮದಲ್ಲಿಯೂ ಸಹ ಒಂದುನೂರೆಂಟು ತೀರ್ಥಗಳಿವೆ. ಧೂತಪಾಪೇಶ್ವರನ ಸನ್ನಿಧಿಯಲ್ಲಿ ಅರವತ್ತೆಂಟು, ಕೋಕಿಲದಲ್ಲಿ ಒಂದೂವರೆ ಕೋಟಿ ತೀರ್ಥಗಳೂ ಇವೆ.

೧೨. ರೋಮಕೇಶದಲ್ಲಿ ಒಂದು ಸಾವಿರ, ದ್ವಾದಶಾರ್ಕದಲ್ಲಿ ಸಾವಿರ, ಶುಕ್ಲತೀರ್ಥದಲ್ಲಿ ಒಂದು ಲಕ್ಷದ ಎರಡು ಸಾವಿರ ತೀರ್ಥಗಳೂ ಇವೆ.

೧೩. ಸಕಲ ಸಂಗಮಗಳಲ್ಲಿಯೂ ಒಂದುನೂರೆಂಟು ತೀರ್ಥಗಳು ಇರುತ್ತವೆ. ಕಾವೇರೀ ಸಂಗಮದಲ್ಲಿ ಐದುನೂರು ತೀರ್ಥಗಳಿವೆ.

ಭೃಗೋಃ ಕ್ಷೇತ್ರೇ ಚ ತೀರ್ಥಾನಾಂ ಕೋಟಿರೇಕಾ ವ್ಯವಸ್ಥಿತಾ ।
ಭಾರಭೂತ್ಯಾಂ ಚ ತೀರ್ಥಾನಾಂ ಶತಮಷ್ಟೋತ್ತರಂ ಸ್ಥಿತಂ ॥ ೧೪ ॥

ಅಕ್ರೂರೇಶೇ ಸಾರ್ಧಶತಂ ವಿಮಲೇಶೇ ದಶಾಯುತಂ ।
ಸಾ ಸಾರ್ಧಕೋಟಿರಿತ್ಯೇಷಾ ತೀರ್ಥಸಂಜ್ಞಾ ಚ ನಾರ್ಮದೇ ॥ ೧೫ ॥

ದಶಾದಿತ್ಯಸ್ಯ ನವ ಚ ಕಪಿಲಸ್ಯಾಷ್ಟ ವೈ ವಿಧೋಃ ।
ನಂದಿನಃ ಕೋಟಿಸಂಜ್ಞಾನಿ ತಥೈವಾಷ್ಟ ಶುಭಾನನೇ ॥ ೧೬ ॥

ನಾಗಾಗ್ನಿಸಿದ್ಧಾವರ್ತಾನಿ ಸಪ್ತಸಂಖ್ಯಾನಿ ಮೋಹಿನಿ ।
ಕೇದಾರೇಂದ್ರಿಯವಾರೀಶನಂದಿದ್ವೈನಾನಿ ಪಂಚ ವೈ ॥ ೧೭ ॥

ಯಮೇಶಾ ವೈದ್ಯನಾಥಾಶ್ಚ ವಾಮನಾಂಗಾರಕೇಶ್ವರಾಃ ।
ಸಾರಸ್ವತಾ ಮುನೀಶಾಶ್ಚ ದಾರುಕೇಶಾಶ್ಚ ಗೌತಮಾಃ ॥ ೧೮ ॥

---

೧೪. ಭೃಗುಕ್ಷೇತ್ರದಲ್ಲಿ ಒಂದು ಕೋಟಿ ತೀರ್ಥಗಳು ಪ್ರತಿಷ್ಠಿತವಾಗಿವೆ. ಭಾರಭೂತಿಯಲ್ಲಿ ಒಂದುನೂರೆಂಟು ತೀರ್ಥಗಳಿವೆ.

೧೫. ಅಕ್ರೂರೇಶಕ್ಷೇತ್ರದಲ್ಲಿ ಒಂದುನೂರು ಐವತ್ತು, ವಿಮಲೇಶದಲ್ಲಿ ಒಂದು ಲಕ್ಷ ಈ ರೀತಿಯಾಗಿ ನರ್ಮದಾ ಸನ್ನಿಧಿಯಲ್ಲಿ ಒಂದುವರೆ ಕೋಟಿ ತೀರ್ಥಗಳು ನಾಮಗ್ರಹಣಪೂರ್ವಕವಾಗಿ ಉಕ್ತವಾಗಿವೆ.

೧೬. ಆ ತೀರ್ಥಗಳಲ್ಲಿ ಹತ್ತು ಸೂರ್ಯತೀರ್ಥಗಳು, ಒಂಬತ್ತು ಕಪಿಲದೇವನ ತೀರ್ಥಗಳು, ಚಂದ್ರದೇವತಾಕ ತೀರ್ಥಗಳು ಎಂಟು, ಒಂದು ಕೋಟಿ ಎಂಟು ನಂದಿಯ ತೀರ್ಥಗಳು.

೧೭. ಮೋಹಿನೀ! ನಾಗ, ಅಗ್ನಿ, ಸಿದ್ಧಾವರ್ತರ ತೀರ್ಥಗಳು ಏಳು, ಕೇದಾರ, ಇಂದ್ರಿಯ, ವಾರಿ, ಈಶ ಮತ್ತು ನಂದಿದೇವತಾಕಗಳಾದ ತೀರ್ಥಗಳು ಐದೈದು.

೧೮-೧೯ ಯಮೇಶ, ವೈದ್ಯನಾಥ, ವಾಮನ, ಅಂಗಾರಕ, ಈಶ್ವರ, ಸಾರಸ್ವತಮುನೀಶರು, ದಾರುಕೇಶ, ಗೌತಮ ಇವರುಗಳಲ್ಲಿ ಪ್ರತ್ಯೇಕವಾಗಿ

ಚತ್ವಾರ ಏವ ಗದಿತಾಸ್ತ್ರಯೋ ವೈ ವಿಮಲೇಶ್ವರಾಃ ।
ಸಹಸ್ರಯಜ್ಞಭೀಷ್ಮೇಶಾಃ ಸ್ವರ್ಣತೀರ್ಥಾನಿ ಚಾಪಿ ಹಿ ॥ ೧೯ ॥

ಧೌತಪಾಪಕಗಂಜೇಶಋಣಮುಕ್ತಿಗುಹಾಹ್ವಯಂ ।
ದಶಾಶ್ವಮೇಧನಂದಾಖ್ಯಂ ಮನ್ಮಥೇಶಾಖ್ಯಭಾರ್ಗವಂ ॥ ೨೦ ॥

ಪರಾಶರಾಯೋನಿಸಂಜ್ಞಂ ವ್ಯಾಸಾಖ್ಯಪಿತೃನಂದಿಕಂ ।
ಗೋಪೇಶಮಾರುತೇಶಾಖ್ಯಂ ಜಂಗಲೇಶಾಖ್ಯಶುಕ್ತಕಂ ॥ ೨೧ ॥

ಅಪ್ಸರೇಶಂ ಪಿಪ್ಪಲೇಶಂ ಮಾಂಡವ್ಯದೀಪಕೇಶ್ವರಂ ।
ಉತ್ತರೇಶಮಶೋಕೇಶಂ ಯೋಧನೇಶಂ ಚ ರೌಹಿಣಂ ॥ ೨೨ ॥

ಉಕೇಶಂ ಚ ದ್ವಿಸಂಖ್ಯಾಕಂ ಪ್ರತ್ಯೇಕಂ ಗದಿತಂ ಶುಭೇ ।
ಸೈಕೋನವಿಂಶತಿಶತಂ ತೀರ್ಥಾನ್ಯೇಕೈಕಶಃ ಶುಭೇ ॥ ೨೩ ॥

ಸ್ತವಕೇಷು ಚ ತೀರ್ಥಾನಿ ದ್ವಿಶತಂ ಚ ಚತುರ್ದಶಂ ।
ಶೈವಾನ್ಯೇತಾನಿ ತೀರ್ಥಾನಿ ವೈಷ್ಣವಾನಿ ದ್ವಿವಿಂಶತಿಃ ॥ ೨೪ ॥

---

ಒಬ್ಬೊರೂ ನಾಲ್ಕು ತೀರ್ಥಗಳಲ್ಲಿ ಸನ್ನಿಹಿತರಾಗಿರುವರು. ವಿಮಲೇಶ್ವರರು ಮೂರು ತೀರ್ಥಗಳ ಅಭಿಮಾನಿಗಳಾಗಿರುವರು. ಸಹಸ್ರಯಜ್ಞ, ಭೀಷ್ಮೇಶರು ಸ್ವರ್ಣತೀರ್ಥಾಭಿಮಾನಿಗಳು.

೨೦-೨೩. ಧೌತಪಾಪ, ಕಂಜೇಶ, ಋಣಮುಕ್ತಿ, ಗುಹಾ, ದಶಾಶ್ವಮೇಧ, ನಂದ, ಮನ್ಮಥೇಶ, ಭಾರ್ಗವ, ಪರಾಶರಯೋನಿ, ವ್ಯಾಸ, ಪಿತೃ, ನಂದಿ, ಗೋಪೇಶ, ಮಾರುತೇಶ, ಜಂಗಲೇಶ, ಶುಕ್ತಕ, ಅಪ್ಸರೇಶ, ಪಿಪ್ಪಲೇಶ, ಮಾಂಡವ್ಯ, ದೀಪಕೇಶ್ವರ, ಉತ್ತರೇಶ, ಅಶೋಕೇಶ, ಯೋಧನೇಶ, ರೌಹಿಣ, ಉಕೇಶ ಈ ನಾಮಧೇಯಗಳುಳ್ಳ ಎರಡೆರಡು ತೀರ್ಥಗಳು ಪ್ರಸಿದ್ಧವಾಗಿವೆ. ಒಂದೊಂದಾಗಿ ನೂರುಹತ್ತೊಂಬತ್ತು ತೀರ್ಥಗಳಿವೆ.

೨೪. ಸ್ತಬಕಗಳಲ್ಲಿ ಇನ್ನೂರುಹದಿನಾಲ್ಕು ತೀರ್ಥಗಳಿವೆ. ಈ ತೀರ್ಥಗಳೆಲ್ಲವೂ ಶೈವತೀರ್ಥಗಳು. ಇಪ್ಪತ್ತೆರಡು ವೈಷ್ಣವ ತೀರ್ಥಗಳಿವೆ.

ಬ್ರಾಹ್ಮಾಣಿಸರ್ವತೀರ್ಥಾನಿ ಶಾಕ್ತಾನ್ಯಷ್ಟೌ ಚ ವಿಂಶತಿಃ |
ತೇಷು ಸಪ್ತ ಚ ಮಾತೄಣಾಂ ತ್ರೀಣಿ ಬ್ರಾಹ್ಮ್ಯಃ ಶುಭಾನನೇ || ೨೫ ||

ವೈಷ್ಣವ್ಯಾ ದ್ವೇ ತಥಾ ಭದ್ರೇ ರೌದ್ರೀ ಶೇಷೇಷು ಸಂಸ್ಥಿತಾ |
ತಥೈಕಂ ಕ್ಷೇತ್ರಪಾಲಸ್ಯ ತೀರ್ಥಮುಕ್ತಂ ಶುಭಾನನೇ || ೨೬ ||

ಅವಾಂತರಾಣಿ ಗುಹ್ಯಾನಿ ಪ್ರಕಟಾನಿ ಚ ಮೋಹಿನಿ |
ಸಾರ್ಧತ್ರಿಕೋಟಿತೀರ್ಥಾನಿ ಗದಿತಾನೀಹ ವಾಯುನಾ || ೨೭ ||

ದಿವಿ ಭುವ್ಯಂತರಿಕ್ಷೇ ಚ ರೇವಾಯಾಂ ತಾನಿ ಸಂತಿ ಚ |
ಯಸ್ತ್ವೇತೇಷು ಮಹಾಭಾಗೇ ಯತ್ರ ಕುತ್ರಾಪಿ ಮಾನವಃ || ೨೮ ||

ಸ್ನಾನಂ ಕರೋತಿ ಶುದ್ಧಾತ್ಮಾ ಸ ಲಭೇದುತ್ತಮಾಂ ಗತಿಂ |
ಸ್ನಾನಂ ದಾನಂ ಜಪೋ ಹೋಮೋ ವೇದಾಧ್ಯಯನಮರ್ಚನಂ || ೨೯ ||

---

೨೫-೨೬. ಸಕಲ ತೀರ್ಥಗಳೂ ಬ್ರಹ್ಮದೇವತಾಕಗಳಾಗಿವೆ. ಶಾಕ್ತ ತೀರ್ಥಗಳು ಇಪ್ಪತ್ತೆಂಟು. ಅವುಗಳಲ್ಲಿ ಮಾತೃತೀರ್ಥಗಳು ಏಳು, ಬ್ರಾಹ್ಮೀ ತೀರ್ಥವು ಮೂರು, ವೈಷ್ಣವೀತೀರ್ಥವೆರಡು. ಉಳಿದುವು ರೌದ್ರೀ ತೀರ್ಥಗಳೆಂದು ತಿಳಿಯಬೇಕು. ಅಂತೆಯೇ ಒಂದು ಕ್ಷೇತ್ರಪಾಲತೀರ್ಥವೆಂದೂ ಉಕ್ತವಾಗಿದೆ.

೨೭. ಮೋಹಿನೀ! ಇವಲ್ಲದೇ ಮಧ್ಯದಲ್ಲಿ ಗುಹ್ಯವಾಗಿಯೂ, ಪ್ರಕಟವಾಗಿಯೂ ಅನೇಕ ತೀರ್ಥಗಳಿವೆ. ವಾಯುದೇವನು ಇಲ್ಲಿ ಮೂರುವರೆ ಕೋಟಿ ತೀರ್ಥಗಳಿವೆಯೆಂದು ಹೇಳಿರುವನು.

೨೮-೨೯. ಅವು ರೇವಾನದಿಯ ಸನ್ನಿಧಿಯಲ್ಲಿ ದ್ಯುಲೋಕ, ಅಂತರಿಕ್ಷ, ಭೂಮಿ ಇವುಗಳಲ್ಲಿವೆ. ಮಹಾಶಯಳೇ! ಈ ತೀರ್ಥಗಳಲ್ಲಿ ಎಲ್ಲಿಯಾದರೂ ಸ್ನಾನಮಾಡಿದರೆ ಮಾನವನು ಪರಿಶುದ್ಧಾತ್ಮನಾಗಿ ಉತ್ತಮಗತಿಯನ್ನು ಹೊಂದುವನು.

ಸರ್ವಮಕ್ಷಯತಾಂ ಯಾತಿ ನರ್ಮದಾಯಾಸ್ತಟೇ ಕೃತಂ ।
ತ್ರ್ಯಹಾತ್ಸಾರಸ್ವತಂ ತೋಯಂ ಸಪ್ತಾಹಾದ್ಯಾಮುನಂ ಸತಿ ॥ ೩೦ ॥

ಗಾಂಗಂ ಸಕೃತ್ಸ್ನಾನಾತ್ಪುಣ್ಯಂ ದರ್ಶನಾದೇವನಾರ್ಮದಂ ।
ಇತ್ಯೇಷ ಕಥಿತೋ ದೇವಿ ನರ್ಮದಾತೀರ್ಥಸಂಗ್ರಹಃ ॥ ೩೧ ॥

ಸ್ಮರತಾಮಪಿ ಮರ್ತ್ಯಾನಾಂ ಮಹಾಪಾತಕಶಾಂತಿದಃ ।
ಯ ಇಮಂ ಶೃಣುಯಾನ್ಮರ್ತ್ಯೋ ನರ್ಮದಾತೀರ್ಥಸಂಗ್ರಹಂ ॥ ೩೨ ॥

ಶ್ರಾವಯೇದ್ವಾ ಪಠೇದ್ಭದ್ರೇ ಸೋಽಪಿ ಪಾಪೈಃ ಪ್ರಮುಚ್ಯತೇ ।
ಯದ್ಗೃಹೇ ಲಿಖಿತಂ ಚೈತನ್ಮಾಹಾತ್ಮ್ಯಂ ನರ್ಮದಾಭವಂ ॥ ೩೩ ॥

ವಿದ್ಯತೇಽಭ್ಯರ್ಚಿತಂ ತತ್ರ ನ ಮಾರೀ ನಾಗ್ನಿಜಂ ಭಯಂ ।
ನ ರಾಜಚೋರಶತ್ರುಭ್ಯೋ ಭಯಂ ರೋಗಭಯಂ ನ ಚ ॥ ೩೪ ॥

---

೨೯-೩೦. ನರ್ಮದಾತೀರದಲ್ಲಿ ಮಾಡಿದ ಸ್ನಾನ, ದಾನ, ಜಪ, ಹೋಮ, ವೇದಾಧ್ಯಯನ, ದೇವಪೂಜೆ ಇವುಗಳೆಲ್ಲವೂ ಅಕ್ಷಯವಾಗುವುವು.

೩೦-೩೧. ಸರಸ್ವತೀ ನದಿಯ ನೀರಿನಲ್ಲಿ ಮೂರುದಿನಗಳು ಸ್ನಾನಮಾಡುವುದರಿಂದಲೂ, ಯಮುನಾನದಿಯಲ್ಲಿ ಏಳುದಿನಗಳ ಸ್ನಾನದಿಂದಲೂ, ಗಂಗೆಯಲ್ಲಿ ಒಂದಾವರ್ತಿ ಸ್ನಾನಮಾಡುವುದರಿಂದಲೂ ಪುಣ್ಯ ಬರುವುದು. ನರ್ಮದಾನದಿಯಾದರೋ ದರ್ಶನಮಾತ್ರದಿಂದಲೇ ಪುಣ್ಯಪ್ರದವು. ದೇವೀ! ಈ ರೀತಿ ನರ್ಮದಾತೀರ್ಥಗಳ ಮಹಿಮೆಯನ್ನು ಸಂಗ್ರಹವಾಗಿ ನಿನಗೆ ಹೇಳಿರುವೆನು.

೩೨-೩೩. ಈ ನರ್ಮದಾತೀರ್ಥ ಸಂಗ್ರಹವನ್ನು ಸ್ಮರಿಸುವ ಮಾತ್ರದಿಂದ ಸುಖವು ಲಭಿಸುವುದು. ಈ ಆಖ್ಯಾನವನ್ನು ಶ್ರವಣಪಠನೆ ಮಾಡುವ ಮನುಷ್ಯನೂ ಸಹ ಪಾಪಮುಕ್ತನಾಗುವನು.

೩೩-೩೪. ಈ ನರ್ಮದಾತೀರ್ಥ ಮಾಹಾತ್ಮ್ಯೆಯ ಪುಸ್ತಕವನ್ನು ಪೂಜಿಸುತ್ತಿರುವ ಮನೆಯಲ್ಲಿ ಮಾರಿಕಾ, ಅಗ್ನಿ ಇವುಗಳ ಭಯವುಂಟಾಗುವುದಿಲ್ಲ. ಅಲ್ಲಿ ರಾಜ, ಚೋರ, ಶತ್ರು ಇವರಿಂದಲೂ ಭಯವು ಸಂಭವಿಸುವುದಿಲ್ಲ. ರೋಗಭೀತಿಯಂತೂ ಅತ್ತ ಸುಳಿಯುವುದೇ ಇಲ್ಲ.

ತದ್ಗೃಹಂ ಪೂರ್ಯತೇ ಲಕ್ಷ್ಮ್ಯಾ ಧನೈರ್ಧಾನ್ಯೈರ್ನಿರಂತರಂ ।
ಪುತ್ರಪೌತ್ರಾದಿಕಾನಾಂ ಚ ವಿವಾಹಾದ್ಯೈಃ ಸುಮಂಗಲಂ ॥ ೩೫ ॥

ಇತಿ ಶ್ರೀನಾರದೀಯಮಹಾಪುರಾಣೋತ್ತರಭಾಗೇ ವಸುಮೋಹಿನೀ
ಸಂವಾದೇ ನರ್ಮದಾತೀರ್ಥಮಾಹಾತ್ಮ್ಯಂ ನಾಮ
ಸಪ್ತಸಪ್ತತಿತಮೋಽಧ್ಯಾಯಃ

ಇತಿ ನರ್ಮದಾತೀರ್ಥಮಾಹಾತ್ಮ್ಯಂ ಸಮಾಪ್ತಂ

---

೩೫. ಆ ಮನೆಯು ಯಾವಾಗಲೂ ಲಕ್ಷ್ಮೀದೇವಿಯ ಸನ್ನಿಧಾನಯುಕ್ತವಾಗಿ ಧನ, ಧಾನ್ಯ, ಪುತ್ರ, ಪೌತ್ರಾದಿಗಳಿಂದ ಪರಿಪೂರ್ಣವಾಗಿರುವುದು. ಮತ್ತು ಅಲ್ಲಿ ವಿವಾಹಾದಿ ಶುಭಕಾರ್ಯಗಳು ಯಾವಾಗಲೂ ನಡೆಯುತ್ತಿರುವುವು.

ಇಂತು ಶ್ರೀ ನಾರದೀಯ ಪುರಾಣೋತ್ತರ ಭಾಗದೊಳು ವಸುಮೋಹಿನೀ
ಸಂವಾದದಲ್ಲಿ ನರ್ಮದಾತೀರ್ಥಮಾಹಾತ್ಮ್ಯ ಕಥನೆಯೆಂಬ
ಎಪ್ಪತ್ತೇಳನೆಯ ಅಧ್ಯಾಯವು ಮುಗಿದುದು.



# ಅಷ್ಟಸಪ್ತತಿತಮೋಽಧ್ಯಾಯಃ

## ಅವಂತೀಮಾಹಾತ್ಮ್ಯಂ ಪ್ರಾರಭ್ಯತೇ

### ಮೋಹಿನ್ಯುವಾಚ

ಅತ್ಯದ್ಭುತಮಿದಂ ವಿಪ್ರ ಮಾಹಾತ್ಮ್ಯಂ ನರ್ಮದಾಭವಂ |
ಶ್ರುತಂ ತ್ವಯಾ ನಿಗದಿತಂ ನೃಣಾಂ ಪಾಪವಿನಾಶನಂ || ೧ ||

ಅಧುನಾ ತು ಮಹಾಭಾಗ ಬ್ರೂಹಿ ಮೇವಂತಿಸಂಭವಂ |
ಮಾಹಾತ್ಮ್ಯಂ ದೇವವಂದ್ಯಸ್ಯ ಮಹಾಕಾಲಸ್ಯ ಚ ಪ್ರಭೋ || ೨ ||

### ವಸುರುವಾಚ

ಶೃಣು ಭದ್ರೇ ಪ್ರವಕ್ಷ್ಯಾಮಿ ಹ್ಯವಂತ್ಯಾಃ ಪುಣ್ಯದಂ ನೃಣಾಂ |
ಮಾಹಾತ್ಮ್ಯಂ ಸರ್ವಪಾಪಘ್ನಂ ಯಥಾವತ್ಪರಿಕೀರ್ತಿತಂ || ೩ ||

---

## ಎಪ್ಪತ್ತೆಂಟನೆಯ ಅಧ್ಯಾಯ

೧. ಮೋಹಿನಿಯು ಹೇಳಿದಳು:—ಬ್ರಾಹ್ಮಣನೇ! ನೀನು ಹೇಳಿದ ಅತ್ಯದ್ಭುತವಾದ, ಮನುಷ್ಯರ ಪಾಪಗಳನ್ನೆಲ್ಲಾ ಪರಿಹರಿಸುವಂತಹ ನರ್ಮದಾತೀರ್ಥಮಾಹಾತ್ಮ್ಯೆಯನ್ನು ಶ್ರವಣಮಾಡಿದೆನು.

೨. ಮಹಾಶಯಾ! ಸ್ವಾಮೀ! ಈಗ ಅವಂತೀಕ್ಷೇತ್ರ ಮತ್ತು ಅಲ್ಲಿರುವ ದೇವವಂದ್ಯನಾದ ಮಹಾಕಾಲದೇವನ ಮಾಹಾತ್ಮ್ಯೆಯನ್ನು ನನಗೆ ಹೇಳು.

೩. ವಸುವು ಹೇಳಿದನು. ಭದ್ರೇ! ಮನುಷ್ಯರಿಗೆ ಪುಣ್ಯದಾಯಕವು, ಪಾಪಪರಿಹಾರಕವೂ ಆದ ಅವಂತೀಕ್ಷೇತ್ರ ಮಾಹಾತ್ಮ್ಯೆಯನ್ನು ಯಥಾವತ್ತಾಗಿ ಹೇಳುವೆನು ಕೇಳು!

ಮಹಾಕಾಲವನಂ ಪುಣ್ಯಂ ತಪಃಸ್ಥಾನಮನುತ್ತಮಂ ।
ಯತ್ರ ದೇವೋ ಮಹಾಕಾಲಃ ಸ್ಥಿತಸ್ತಪಸಿ ನಿತ್ಯದಾ ॥ ೪ ॥

ಮಹಾಕಾಲವನಾತ್ ಕ್ಷೇತ್ರಂ ನಾಪರಂ ವಿದ್ಯತೇ ಭುವಿ ।
ಯತ್ರ ಗತ್ವಾ ನರೋ ದೇವಿ ಸ್ಪರ್ಧತೇ ದೈವತೈಃ ಸಹ ॥ ೫ ॥

ಕಪಾಲಮೋಚನಂ ನಾಮ ಯತ್ರ ತೀರ್ಥಂ ಸುಲೋಚನೇ ।
ತತ್ರ ಸ್ನಾತ್ವಾ ನರೋ ಭಕ್ತ್ಯಾ ಬ್ರಹ್ಮಹಾಪಿ ವಿಶುಧ್ಯತಿ ॥ ೬ ॥

ತಥಾ ಕಲಕಲೇಶಾಖ್ಯೇ ದೇವಮಭ್ಯರ್ಚ್ಯ ಮಾನವಃ ।
ವಿವಾದೇ ಜಯಮಾಪ್ನೋತಿ ಕಾರ್ಯಸಿದ್ಧಿಂ ಚ ಸಂತತಂ ॥ ೭ ॥

ಅತ್ರಾನ್ಯದಪ್ಸರಃಕುಂಡಂ ತೀರ್ಥಂ ತತ್ರಾಪ್ಲುತೋ ನರಃ ।
ಸುಭಗೋ ಭೋಗವಾನ್ ಭೂಯಾತ್ ಸಾಕ್ಷಾತ್ಕಂದರ್ಪಸನ್ನಿಭಃ ॥ ೮ ॥

---

೪. ಅಲ್ಲಿ ಶ್ರೇಷ್ಠವೂ, ಪುಣ್ಯಕರವೂ ಆದ ಮಹಾಕಾಲವನವೆಂಬ ತಪಃಸ್ಥಾನವಿದೆ. ಅಲ್ಲಿ ಮಹಾಕಾಲದೇವನು ಯಾವಾಗಲೂ ತಪಸ್ಸನ್ನು ಮಾಡುತ್ತಿರುವನು.

೫. ಮಹಾಕಾಲವನಕ್ಕಿಂತ ಬೇರೆ ಉತ್ತಮ ಕ್ಷೇತ್ರವು ಭೂಲೋಕದಲ್ಲಿಲ್ಲ. ದೇವೀ! ಮನುಷ್ಯನು ಅಲ್ಲಿಗೆ ಹೋದರೆ ಅವನು ದೇವತೆಗಳೊಡನೆ ಸ್ಪರ್ಧಿಸುವಂತಹ ಯೋಗ್ಯತೆಯನ್ನು ಪಡೆಯುವನು.

೬. ಸುಲೋಚನೇ! ಅಲ್ಲಿ ಕಪಾಲಮೋಚನವೆಂಬ ತೀರ್ಥವಿದೆ. ಮನುಷ್ಯನು ಭಕ್ತಿಯಿಂದ ಅಲ್ಲಿ ಸ್ನಾನಮಾಡಿದರೆ ಬ್ರಹ್ಮಹತ್ಯೆಯೂ ಸಹ ಪರಿಹಾರವಾಗಿ ಶುದ್ಧನಾಗುವನು.

೭. ಅಂತೆಯೇ ಕಲಕಲೇಶಕ್ಷೇತ್ರದಲ್ಲಿ ದೇವನನ್ನು ಪೂಜಿಸಿದರೆ ಮನುಷ್ಯನು ವಿವಾದದಲ್ಲಿ ಜಯವನ್ನು, ಇಷ್ಟಕಾರ್ಯಸಿದ್ಧಿಯನ್ನೂ ಯಾವಾಗಲೂ ಪಡೆಯುವನು.

೮. ಇಲ್ಲಿ ಅಪ್ಸರಃಕುಂಡವೆಂಬ ಇನ್ನೊಂದು ತೀರ್ಥವಿದೆ. ಅಲ್ಲಿ ಸ್ನಾನ ಮಾಡಿದ ಮನುಜನು ಸಾಕ್ಷಾನ್ಮನ್ಮಥನಿಗೆ ಸಮಾನನು, ಮನೋಹರನೂ ಆಗಿ ಭೋಗಗಳನ್ನು ಅನುಭವಿಸುವನು.

ಮಹಿಷಾಖ್ಯೇ ತಥಾ ಕುಂಡೇ ಸ್ನಾತಃ ಶತ್ರೂಂಜಯೋದ್ರಣೇ ।
ಸ್ನಾತಸ್ತು ರುದ್ರಸರಸಿ ರುದ್ರಲೋಕೇ ಮಹೀಯತೇ ॥ ೯ ॥

ಕುಡವೇಶ್ವರಮಾಸಾದ್ಯ ಸಮಭ್ಯರ್ಚ್ಯ ವಿಧಾನತಃ ।
ವ್ಯಾಪಾರೇ ಲಾಭಮಾಪ್ನೋತಿ ಕಾರ್ಯಸಿದ್ಧಿಂ ಚ ಸಂತತಂ ॥ ೧೦ ॥

ವಿದ್ಯಾಧರಾಹ್ವಯೇ ತೀರ್ಥೇ ನರಃ ಸ್ನಾತ್ವಾ ವಿಶುಧ್ಯತಿ ।
ಮಾರ್ಕಂಡೇಶ್ವರಮಭ್ಯರ್ಚ್ಯ ದೀರ್ಘಾಯುಶ್ಚ ಧನೀ ಭವೇತ್ ॥ ೧೧ ॥

ಸಂಪೂಜ್ಯ ಶೀತಲಾಂ ದೇವೀಂ ನರಃ ಕಾಲವನೇ ಸ್ಥಿತಾಂ ।
ವಿಸ್ಫೋಟಕಭಯಂ ನೈವ ಕದಾಚಿತ್ತಸ್ಯ ಜಾಯತೇ ॥ ೧೨ ॥

ಸ್ವರ್ಗದ್ವಾರಂ ಸಮಾಸಾದ್ಯ ಸ್ನಾತ್ವಾಭ್ಯರ್ಚ್ಯ ಸದಾಶಿವಂ ।
ನರೋ ನ ದುರ್ಗತಿಂ ಯಾತಿ ಸ್ವರ್ಗಲೋಕೇ ಮಹೀಯತೇ ॥ ೧೩ ॥

---

೯. ಮಹಿಷಕುಂಡದಲ್ಲಿ ಸ್ನಾನಮಾಡಿದರೆ ಯುದ್ಧದಲ್ಲಿ ಶತ್ರುಜಯು ವಾಗುವುದು. ರುದ್ರಸರೋವರದಲ್ಲಿ ಸ್ನಾನಮಾಡಿದವನು ರುದ್ರಲೋಕದಲ್ಲಿ ಪೂಜ್ಯನಾಗುವನು.

೧೦. ಕುಡವೇಶ್ವರಸನ್ನಿಧಿಗೆ ಹೋಗಿ ವಿಧಾನೋಕ್ತಪ್ರಕಾರವಾಗಿ ದೇವನನ್ನು ಪೂಜಿಸಿದವನು ವ್ಯಾಪಾರದಲ್ಲಿ ಲಾಭವನ್ನು ಹೊಂದಿ ಶಿವನ ಅನುಗ್ರಹಕ್ಕೆ ಪಾತ್ರನಾಗುವನು.

೧೧. ಮನುಷ್ಯನು ವಿದ್ಯಾಧರವೆಂಬ ತೀರ್ಥದಲ್ಲಿ ಸ್ನಾನಮಾಡಿದರೆ ಪರಿಶುದ್ಧನಾಗುವನು. ಮಾರ್ಕಂಡೇಶ್ವರನನ್ನು ಪೂಜಿಸುವುದರಿಂದ ದೀರ್ಘಾಯುಷ್ಮಂತನೂ ಮತ್ತು ಧನಿಕನೂ ಆಗುವನು.

೧೨. ಕಾಲವನದಲ್ಲಿರುವ ಶೀತಲಾದೇವಿಯನ್ನು ಪೂಜಿಸಿದರೆ ಯಾವಾಗಲೂ ಅವನಿಗೆ ಜ್ವರಾದಿಗಳ ಬಾಧೆಯಾಗುವುದಿಲ್ಲ.

೧೩. ಅಲ್ಲಿರುವ ಸ್ವರ್ಗದ್ವಾರಕ್ಕೆ ಹೋಗಿ ಸ್ನಾನಮಾಡಿ ಸದಾಶಿವನನ್ನು ಪೂಜಿಸುವುದರಿಂದ ಮನುಷ್ಯನು ದುರ್ಗತಿಗೀಡಾಗುವುದಿಲ್ಲ. ಸ್ವರ್ಗಲೋಕದಲ್ಲಿ ಪೂಜಿಸಲ್ಪಡುವನು.

ರಾಜಸ್ಥಲಂ ನರಃ ಪ್ರಾಪ್ಯ ತತಃ ಸಾಮುದ್ರಿಕೇ ಪ್ಲುತಃ |
ಸ್ನಾನಸ್ಯ ಸರ್ವತೀರ್ಥಾನಾಂ ಲಭತೇ ಫಲಮುತ್ತಮಂ || ೧೪ ||

ಶಂಕರಸ್ಯ ತಥಾ ವಾಪ್ಯಾಂ ಸ್ನಾತ್ವಾ ನಿಯಮವಾನ್ನರಃ |
ಪ್ರಾಪ್ಯೇಹ ವಾಂಛಿತಾನ್ ಭೋಗಾನಂತೇ ರುದ್ರಪುರಂ ವ್ರಜೇತ್ || ೧೫ ||

ಶಂಕರಾದಿತ್ಯಮಭ್ಯರ್ಚ್ಯ ನರಃ ಸ್ಯಾದ್ದುಷ್ಪ್ರಧರ್ಷಣಃ |
ಸ್ನಾತಸ್ತು ನೀಲಗಂಗಾಯಾಂ ದೇವೀಂ ಗಂಧವತೀಂ ನರಃ || ೧೬ ||

ಸಂಪೂಜ್ಯ ಭಕ್ತಿಭಾವೇನ ಸರ್ವಪಾಪೈಃ ಪ್ರಮುಚ್ಯತೇ |
ದಶಾಶ್ವಮೇಧಿಕೇ ಸ್ನಾತ್ವಾ ವಾಜಿಮೇಧಫಲಂ ಲಭೇತ್ || ೧೭ ||

ಅಥ ಮರ್ತ್ಯಃ ಸಮಾಸಾದ್ಯ ಏಕಾಂಸಂಶಾಂ ಸುರೇಶ್ವರೀಂ |
ಸಂಪೂಜ್ಯ ಗಂಧಪುಷ್ಪಾದ್ಯೈಃ ಸರ್ವಾನ್ಕಾಮಾನವಾಪ್ನುಯಾತ್ || ೧೮ ||

---

೧೪. ರಾಜಸ್ಥಳಕ್ಕೆ ಹೋಗಿ ಅಲ್ಲಿ ಸಮುದ್ರ ಜಲದಲ್ಲಿ ಸ್ನಾನಮಾಡಿದವನು ಉತ್ತಮವಾದ ಸಕಲ ತೀರ್ಥಗಳ ಸ್ನಾನಫಲವನ್ನೂ ಪಡೆಯುವನು.

೧೫. ನಿಯಮವಂತನಾದ ಮನುಷ್ಯನು ಶಂಕರವಾಪಿಯಲ್ಲಿ ಸ್ನಾನಮಾಡಿದರೆ ಈ ಲೋಕದಲ್ಲಿ ಇಷ್ಟಭೋಗಗಳನ್ನೆಲ್ಲಾ ಅನುಭವಿಸಿ ಕೊನೆಗೆ ಕೈಲಾಸಕ್ಕೆ ಹೋಗುವನು.

೧೬-೧೭. ಶಂಕರಾದಿತ್ಯನನ್ನು ಪೂಜಿಸಿದರೆ ಮನುಷ್ಯನು ಯಾರಿಂದಲೂ ಹಿಂಸಿಸಲ್ಪಡುವುದಿಲ್ಲ. ನೀಲಗಂಗೆಯಲ್ಲಿ ಸ್ನಾನಮಾಡಿ ಭಕ್ತಿಭಾವದಿಂದ ಗಂಧವತೀದೇವಿಯನ್ನು ಪೂಜಿಸಿದರೆ ಸಕಲ ಪಾಪಗಳಿಂದಲೂ ವಿಮೋಚನೆಯಾಗುವುದು. ದಶಾಶ್ವಮೇಧಿಕತೀರ್ಥದಲ್ಲಿ ಸ್ನಾನಮಾಡಿದರೆ ಅಶ್ವಮೇಧಯಜ್ಞದ ಫಲವು ಬರುವುದು.

೧೮. ಬಳಿಕ ಮನುಷ್ಯನು ಏಕಾನಂಶಸುರೇಶ್ವರಿಯ ಸನ್ನಿಧಿಗೆ ಹೋಗಿ ದೇವಿಯನ್ನು ಗಂಧಪುಷ್ಪಾದಿಗಳಿಂದ ಪೂಜಿಸಿದರೆ ಸಕಲೇಷ್ಟಾರ್ಥಗಳನ್ನೂ ಪಡೆಯುವನು.

ಹರಸಿದ್ಧಿಂ ನರೋಽಭ್ಯರ್ಚ್ಯ ಸರ್ವಸಿದ್ಧೀಶ್ವರೋ ಭವೇತ್ ।
ಪಿಶಾಚಕಾದಿಕಾ ಮರ್ತ್ಯಃ ಸಮಭ್ಯರ್ಚ್ಯ ಚತುರ್ದಶ ॥ ೧೯ ॥

ಸರ್ವಾನ್ಕಾಮಾನವಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ।
ಹನುಮತ್ಕೇಶ್ವರಂ ಪ್ರಾರ್ಚೇತ್ ಸ್ನಾತ್ವಾ ರುದ್ರಸರೋವರೇ ॥ ೨೦ ॥

ಯೋ ನರಃ ಶ್ರದ್ಧಯಾ ಯುಕ್ತಃ ಸ ಲಭೇತ್ಸಂಪದೋಽಖಿಲಾಃ ।
ವಾಲ್ಮೀಕೇಶ್ವರಮಭ್ಯರ್ಚ್ಯ ಸರ್ವವಿದ್ಯಾನಿಧಿರ್ಭವೇತ್ ॥ ೨೧ ॥

ಶುಕ್ರೇಶ್ವರಾದಿಲಿಂಗಾನಿ ಯೋಽರ್ಚಯೇಚ್ಛ್ರದ್ಧಯಾ ನರಃ ।
ಸ ಸ್ಯಾದಖಿಲಭೋಗಾಢ್ಯಃ ಸರ್ವರೋಗವಿವರ್ಜಿತಃ ॥ ೨೨ ॥

ಪಂಚೇಶಾನಂ ಸಮಭ್ಯರ್ಚ್ಯ ಸ್ಯಾನ್ನರಃ ಸರ್ವಸಿದ್ಧಿಭಾಕ್ ।
ಕುಶಸ್ಥಲೀಂ ಪರಿಕ್ರಮ್ಯ ವಾಂಛಿತಂ ಲಭತೇ ಫಲಂ ॥ ೨೩ ॥

---

೧೯-೨೦. ಹರಸಿದ್ಧಿಯನ್ನು ಪೂಜಿಸಿದರೆ ಮನುಷ್ಯನು ಸಕಲ ಸಿದ್ಧೀಶ್ವರನಾಗುವನು. ಪಿಶಾಚಿಕಾ ಮುಂತಾದ ಹದಿನಾಲ್ಕು ಭೂತಗಳನ್ನು ಪೂಜಿಸಿದರೆ ಮನುಷ್ಯನು ಸಕಲೇಷ್ಟಾರ್ಥಗಳನ್ನೂ ಹೊಂದುವನು. ಈ ವಿಷಯದಲ್ಲಿ ಸಂದೇಹ ಪಡಬಾರದು.

೨೦-೨೧. ರುದ್ರಸರೋವರದಲ್ಲಿ ಸ್ನಾನಮಾಡಿ ಶ್ರದ್ಧೆಯಿಂದ ಹನುಮತ್ಕೇಶ್ವರನನ್ನು ಪೂಜಿಸುವ ಮನುಷ್ಯನು ಸಕಲ ಸಂಪತ್ತುಗಳನ್ನೂ ಪಡೆಯುವನು. ವಾಲ್ಮೀಕೇಶ್ವರನನ್ನು ಪೂಜಿಸಿದರೆ ವಿದ್ಯೆಗಳಿಗೆಲ್ಲಾ ನಿಧಿಯಾಗುವನು.

೨೨. ಶುಕ್ರೇಶ್ವರ ಮುಂತಾದ ಲಿಂಗಗಳನ್ನು ಶ್ರದ್ಧೆಯಿಂದ ಪೂಜಿಸುವ ಮನುಷ್ಯನು ಸಕಲ ಭೋಗಪೂರ್ಣನಾಗಿ ಸರ್ವರೋಗ ರಹಿತನಾಗುವನು.

೨೩. ಪಂಚೇಶನನ್ನು ಪೂಜಿಸಿದರೆ ಮನುಷ್ಯನು ಎಲ್ಲಾ ಸಿದ್ಧಿಗಳಿಗೂ ಭಾಗಿಯಾಗುವನು. ಕುಶಸ್ಥಲಿಯನ್ನು ಪ್ರದಕ್ಷಿಣೆಮಾಡಿದರೆ ಇಷ್ಟಫಲವು ಲಭಿಸುವುದು

ಅಕ್ರೂರೇಶಂ ತು ಸಂಪೂಜ್ಯ ಕ್ರೂರೇಭ್ಯೋಽಪ್ಯಭಯಂ ಲಭೇತ್ ।
ಮಂದಾಕಿನ್ಯಾಂ ಸಮಾಪ್ಲುತ್ಯ ಗಂಗಾಸ್ನಾನಫಲಂ ಲಭೇತ್ ॥ ೨೪ ॥

ಅಂಕಪಾದಂ ನರೋಽಭ್ಯರ್ಚ್ಯ ಶಿವಸ್ಯಾನುಚರೋ ಭವೇತ್ ।
ಚಂದ್ರಾದಿತ್ಯಂ ಪ್ರಪೂಜ್ಯಾಥ ಭೋಗಾನ್ನಾನಾವಿಧಾಂಲ್ಲಭೇತ್ ॥ ೨೫ ॥

ಕರಭೇಶ್ವರಮಭ್ಯರ್ಚ್ಯ ಯಾನಸೌಖ್ಯಮವಾಪ್ನುಯಾತ್ ।
ಲಡ್ಡುಕಪ್ರಿಯವಿಘ್ನೇಶಂ ಸಮಭ್ಯರ್ಚ್ಯ ಸುಖೀ ಭವೇತ್ ॥ ೨೬ ॥

ಕುಸುಮೇಶಾದಿಕಾನ್ ಪ್ರಾರ್ಚ್ಯ ಸರ್ವಾನ್ ಭೋಗಾನ್ ಸಮಶ್ನುತೇ ।
ಯಜ್ಞವಾಪ್ಯಾಂ ನರಃ ಸ್ನಾತ್ವಾ ಮಾರ್ಕಂಡೇಶಂ ಸಮರ್ಚ್ಯ ಚ ॥ ೨೭ ॥

ಸರ್ವಯಜ್ಞಫಲಂ ಲಬ್ಧ್ವಾ ಯುಗಮೇಕಂ ವಸೇದ್ದಿವಿ ।
ಸೋಮವತ್ಯಾಂ ನರಃ ಸ್ನಾತ್ವಾಭ್ಯರ್ಚ್ಯ ಸೋಮೇಶ್ವರಂ ಸತಿ ॥ ೨೮ ॥

---

೨೪. ಅಕ್ರೂರೇಶನನ್ನು ಪೂಜಿಸಿದರೆ ಕ್ರೂರರದೆಶೆಯಿಂದಲೂ ಅಭಯವನ್ನು ಪಡೆಯುವನು. ಮಂದಾಕಿನಿಯಲ್ಲಿ ಸ್ನಾನಮಾಡಿದರೆ ಗಂಗಾಸ್ನಾನ ಫಲವು ಲಭಿಸುವುದು.

೨೫. ಅಂಕಪಾದಸ್ವಾಮಿಯನ್ನು ಪೂಜಿಸಿದರೆ ಮನುಷ್ಯನು ಶಿವನ ಅನುಚರನಾಗುವನು. ಆಮೇಲೆ ಚಂದ್ರಾದಿತ್ಯನನ್ನು ಪೂಜಿಸಿದರೆ ನಾನಾ ವಿಧ ಭೋಗಗಳು ಲಭಿಸುವುವು.

೨೬. ಕರಭೇಶ್ವರನನ್ನು ಪೂಜಿಸುವುದರಿಂದ ಯಾನಸೌಖ್ಯವುಂಟಾಗುವುದು. ಲಡ್ಡುಕಪ್ರಿಯನಾದ ವಿಘ್ನೇಶ್ವರನನ್ನು ಪೂಜಿಸುವುದರಿಂದ ಮನುಷ್ಯನು ಸುಖಿಯಾಗುವನು.

೨೭-೨೮. ಕುಸುಮೇಶ ಮುಂತಾದವರನ್ನು ಪೂಜಿಸುವುದರಿಂದ ಸಕಲ ಭೋಗಗಳನ್ನೂ ಹೊಂದುವನು. ಯಜ್ಞವಾಪಿಯಲ್ಲಿ ಮನುಷ್ಯನು ಸ್ನಾನಮಾಡಿ ಮಾರ್ಕಂಡೇಶನನ್ನು ಪೂಜಿಸಿದರೆ ಎಲ್ಲಾ ಯಜ್ಞಗಳ ಫಲವನ್ನೂ ಹೊಂದಿ ಒಂದು ಯುಗದ ಪರ್ಯಂತವಾಗಿ ಸ್ವರ್ಗಲೋಕದಲ್ಲಿ ವಾಸಿಸುವನು.

ಹರಸಿದ್ಧಿಂ ನರೋಭ್ಯರ್ಚ್ಯ ಸರ್ವಸಿದ್ಧೀಶ್ವರೋ ಭವೇತ್ ।
ಪಿಶಾಚಿಕಾದಿಕಾ ಮರ್ತ್ಯಃ ಸಮಭ್ಯರ್ಚ್ಯ ಚತುರ್ದಶ ॥ ೧೯ ॥

ಸರ್ವಾನ್ಕಾಮಾನವಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ।
ಹನುಮತ್ಕೇಶ್ವರಂ ಪ್ರಾರ್ಚೇತ್ ಸ್ನಾತ್ವಾ ರುದ್ರಸರೋವರೇ ॥ ೨೦ ॥

ಯೋ ನರಃ ಶ್ರದ್ಧಯಾ ಯುಕ್ತಃ ಸ ಲಭೇತ್ಸಂಪದೋಽಖಿಲಾಃ ।
ವಾಲ್ಮೀಕೇಶ್ವರಮಭ್ಯರ್ಚ್ಯ ಸರ್ವವಿದ್ಯಾನಿಧಿರ್ಭವೇತ್ ॥ ೨೧ ॥

ಶುಕ್ರೇಶ್ವರಾದಿಲಿಂಗಾನಿ ಯೋಽರ್ಚಯೇಚ್ಛ್ರದ್ಧಯಾ ನರಃ ।
ಸ ಸ್ಯಾದಖಿಲಭೋಗಾಢ್ಯಃ ಸರ್ವರೋಗವಿವರ್ಜಿತಃ ॥ ೨೨ ॥

ಪಂಚೇಶಾನಂ ಸಮಭ್ಯರ್ಚ್ಯ ಸ್ಯಾನ್ನರಃ ಸರ್ವಸಿದ್ಧಿಭಾಕ್ ।
ಕುಶಸ್ಥಲೀಂ ಪರಿಕ್ರಮ್ಯ ವಾಂಛಿತಂ ಲಭತೇ ಫಲಂ ॥ ೨೩ ॥

---

೧೯-೨೦. ಹರಸಿದ್ಧಿಯನ್ನು ಪೂಜಿಸಿದರೆ ಮನುಷ್ಯನು ಸಕಲ ಸಿದ್ಧೀಶ್ವರನಾಗುವನು. ಪಿಶಾಚಿಕಾ ಮುಂತಾದ ಹದಿನಾಲ್ಕು ಭೂತಗಳನ್ನು ಪೂಜಿಸಿದರೆ ಮನುಷ್ಯನು ಸಕಲೇಷ್ಟಾರ್ಥಗಳನ್ನೂ ಹೊಂದುವನು. ಈ ವಿಷಯದಲ್ಲಿ ಸಂದೇಹ ಪಡಬಾರದು.

೨೦-೨೧. ರುದ್ರಸರೋವರದಲ್ಲಿ ಸ್ನಾನಮಾಡಿ ಶ್ರದ್ಧೆಯಿಂದ ಹನುಮತ್ಕೇಶ್ವರನನ್ನು ಪೂಜಿಸುವ ಮನುಷ್ಯನು ಸಕಲ ಸಂಪತ್ತುಗಳನ್ನೂ ಪಡೆಯುವನು. ವಾಲ್ಮೀಕೇಶ್ವರನನ್ನು ಪೂಜಿಸಿದರೆ ವಿದ್ಯೆಗಳಿಗೆಲ್ಲಾ ನಿಧಿಯಾಗುವನು.

೨೨. ಶುಕ್ರೇಶ್ವರ ಮುಂತಾದ ಲಿಂಗಗಳನ್ನು ಶ್ರದ್ಧೆಯಿಂದ ಪೂಜಿಸುವ ಮನುಷ್ಯನು ಸಕಲ ಭೋಗಪೂರ್ಣನಾಗಿ ಸರ್ವರೋಗ ರಹಿತನಾಗುವನು.

೨೩. ಪಂಚೇಶನನ್ನು ಪೂಜಿಸಿದರೆ ಮನುಷ್ಯನು ಎಲ್ಲಾ ಸಿದ್ಧಿಗಳಿಗೂ ಭಾಗಿಯಾಗುವನು. ಕುಶಸ್ಥಲಿಯನ್ನು ಪ್ರದಕ್ಷಿಣೆಮಾಡಿದರೆ ಇಷ್ಟಫಲವು ಲಭಿಸುವುದು

ಅಕ್ರೂರೇಶಂ ತು ಸಂಪೂಜ್ಯ ಕ್ರೂರೇಭ್ಯೋಽಪ್ಯಭಯಂ ಲಭೇತ್ ।
ಮಂದಾಕಿನ್ಯಾಂ ಸಮಾಪ್ಲುತ್ಯ ಗಂಗಾಸ್ನಾನಫಲಂ ಲಭೇತ್ ॥ ೨೪ ॥

ಅಂಕಪಾದಂ ನರೋಽಭ್ಯರ್ಚ್ಯ ಶಿವಸ್ಯಾನುಚರೋ ಭವೇತ್ ।
ಚಂದ್ರಾದಿತ್ಯಂ ಪ್ರಪೂಜ್ಯಾಥ ಭೋಗಾನ್ನಾನಾವಿಧಾಂಲ್ಲಭೇತ್ ॥ ೨೫ ॥

ಕರಭೇಶ್ವರಮಭ್ಯರ್ಚ್ಯ ಯಾನಸೌಖ್ಯಮವಾಪ್ನುಯಾತ್ ।
ಲಡ್ಡುಕಪ್ರಿಯವಿಘ್ನೇಶಂ ಸಮಭ್ಯರ್ಚ್ಯ ಸುಖೀ ಭವೇತ್ ॥ ೨೬ ॥

ಕುಸುಮೇಶಾದಿಕಾನ್ ಪ್ರಾರ್ಚ್ಯ ಸರ್ವಾನ್ ಭೋಗಾನ್ ಸಮಶ್ನುತೇ ।
ಯಜ್ಞವಾಪ್ಯಾಂ ನರಃ ಸ್ನಾತ್ವಾ ಮಾರ್ಕಂಡೇಶಂ ಸಮರ್ಚ್ಯ ಚ ॥ ೨೭ ॥

ಸರ್ವಯಜ್ಞಫಲಂ ಲಬ್ಧ್ವಾ ಯುಗಮೇಕಂ ವಸೇದ್ದಿವಿ ।
ಸೋಮವತ್ಯಾಂ ನರಃ ಸ್ನಾತ್ವಾಭ್ಯರ್ಚ್ಯ ಸೋಮೇಶ್ವರಂ ಸತಿ ॥ ೨೮ ॥

---

೨೪. ಅಕ್ರೂರೇಶನನ್ನು ಪೂಜಿಸಿದರೆ ಕ್ರೂರರದೆಶೆಯಿಂದಲೂ ಅಭಯವನ್ನು ಪಡೆಯುವನು. ಮಂದಾಕಿನಿಯಲ್ಲಿ ಸ್ನಾನಮಾಡಿದರೆ ಗಂಗಾಸ್ನಾನಫಲವು ಲಭಿಸುವುದು.

೨೫. ಅಂಕಪಾದಸ್ವಾಮಿಯನ್ನು ಪೂಜಿಸಿದರೆ ಮನುಷ್ಯನು ಶಿವನ ಅನುಚರನಾಗುವನು. ಆಮೇಲೆ ಚಂದ್ರಾದಿತ್ಯನನ್ನು ಪೂಜಿಸಿದರೆ ನಾನಾ ವಿಧ ಭೋಗಗಳು ಲಭಿಸುವುವು.

೨೬. ಕರಭೇಶ್ವರನನ್ನು ಪೂಜಿಸುವುದರಿಂದ ಯಾನಸೌಖ್ಯವುಂಟಾಗುವುದು. ಲಡ್ಡುಕಪ್ರಿಯನಾದ ವಿಘ್ನೇಶ್ವರನನ್ನು ಪೂಜಿಸುವುದರಿಂದ ಮನುಷ್ಯನು ಸುಖಿಯಾಗುವನು.

೨೭-೨೮. ಕುಸುಮೇಶ ಮುಂತಾದವರನ್ನು ಪೂಜಿಸುವುದರಿಂದ ಸಕಲ ಭೋಗಗಳನ್ನೂ ಹೊಂದುವನು. ಯಜ್ಞವಾಪಿಯಲ್ಲಿ ಮನುಷ್ಯನು ಸ್ನಾನಮಾಡಿ ಮಾರ್ಕಂಡೇಶನನ್ನು ಪೂಜಿಸಿದರೆ ಎಲ್ಲಾ ಯಜ್ಞಗಳ ಫಲವನ್ನೂ ಹೊಂದಿ ಒಂದು ಯುಗದ ಪರ್ಯಂತವಾಗಿ ಸ್ವರ್ಗಲೋಕದಲ್ಲಿ ವಾಸಿಸುವನು.

ವಾಂಛಿತಾಂಲ್ಲಭತೇ ಕಾಮಾನಿಹಾಮುತ್ರ ಚ ಮೋಹಿನಿ |
ಯಾತನಾಕಲನೇ ಸ್ನಾತ್ವಾ ಯಾತನಾಂ ನೈವ ಪಶ್ಯತಿ || ೨೯ ||

ನರಕೇಶಂ ಸಮಭ್ಯರ್ಚ್ಯ ಸ್ವರ್ಗಲೋಕಗತಿಂ ಲಭೇತ್ |
ಕೇದಾರೇಶಂ ತತಃ ಪ್ರಾರ್ಚ್ಯ ರಾಮೇಶ್ವರಮಥಾಪಿ ವಾ || ೩೦ ||

ಸೌಭಾಗ್ಯೇಶಂ ನರಾದಿತ್ಯಂ ಲಭತೇ ವಾಂಛಿತಂ ಫಲಂ |
ಕೇಶವಾರ್ಕಂ ತು ಸಂಪೂಜ್ಯ ನರಃ ಸ್ಯಾತ್ಕೇಶವಪ್ರಿಯಃ || ೩೧ ||

ಶಕ್ತಿಭೇದೇ ತತಃ ಸ್ನಾತ್ವಾ ಮುಚ್ಯತೇತ್ಯುಗ್ರಸಂಕಟಾತ್ |
ಸ್ವರ್ಣಕ್ಷುರಬ್ರಹ್ಮವಾಪ್ಯಾಂ ಸ್ನಾತ್ವಾಭ್ಯರ್ಚ್ಯಾಭಯೇಶ್ವರಂ || ೩೨ ||

ಅಗಸ್ತ್ಯೇಶಂ ಚ ವಿಧಿಜೇ ಸಂಪದಾಮಯನಂ ಭವೇತ್ |
ಓಂಕಾರೇಶಾದಿಲಿಂಗಾನಿ ಯೋ ನರಃ ಸಮ್ಯಗರ್ಚಯೇತ್ || ೩೩ ||

---

೨೮-೨೯. ಸೋಮವತೀತೀರ್ಥದಲ್ಲಿ ಸ್ನಾನವನ್ನು ಮಾಡಿ ಸೋಮೇಶ್ವರನನ್ನು ಪೂಜಿಸುವುದರಿಂದ ಈ ಲೋಕ ಪರಲೋಕಗಳಲ್ಲಿ ಬಯಸಿದ ಕಾಮವೆಲ್ಲವೂ ಪೂರ್ಣವಾಗುವುದು. ಯಾತನಾಕಲನವೆಂಬ ತೀರ್ಥದಲ್ಲಿ ಸ್ನಾನಮಾಡಿದರೆ ಯಾತನೆಯನ್ನು ನೋಡುವುದೇ ಇಲ್ಲ.

೩೦-೩೧ ನರಕೇಶನನ್ನು ಪೂಜಿಸಿದರೆ ಮನುಜನು ಸ್ವರ್ಗಲೊಕವನ್ನು ಹೊಂದುವನು. ಅನಂತರ ಕೇದಾರೇಶ, ರಾಮೇಶ್ವರ, ಸೌಭಾಗ್ಯೇಶ, ನರಾದಿತ್ಯ ಇವರನ್ನು ಪೂಜಿಸಿದರೆ ಇಷ್ಟಾರ್ಥಲಾಭವಾಗುವುದು. ಕೇಶವಾರ್ಕನನ್ನು ಪೂಜಿಸಿದರೆ ಮನುಷ್ಯನು ಕೇಶವನ ಅನುಗ್ರಹಕ್ಕೆ ಪಾತ್ರನಾಗುವನು.

೩೨-೩೩. ತರುವಾಯ ಶಕ್ತಿಭೇದವೆಂಬ ತೀರ್ಥದಲ್ಲಿ ಸ್ನಾನಮಾಡಿದರೆ ಭಯಂಕರ ಸಂಕಟದಿಂದ ಪಾರಾಗುವನು. ಸ್ವರ್ಣಕ್ಷುರಬ್ರಹ್ಮವಾಪಿಯಲ್ಲಿ ಸ್ನಾನಮಾಡಿ ಅಭಯೇಶ್ವರನನ್ನು ಮತ್ತು ಅಗಸ್ತ್ಯೇಶನನ್ನೂ ಪೂಜಿಸಿದರೆ ಸಂಪತ್ತುಗಳಿಗಾಕರನಾಗುವನು.

೩೩-೩೪. ಓಂಕಾರೇಶಾದಿ ಲಿಂಗಗಳನ್ನು ಯಾವ ಮನುಷ್ಯನು ಪೂಜಿಸುವನೋ ಅವನು ಮಹೇಶ್ವರನ ಪ್ರಸಾದದಿಂದ ಇಷ್ಟಾರ್ಥಗಳನ್ನೆಲ್ಲಾ ಪಡೆಯು

ಸ ಲಭೇದಖಿಲಾನ್ಕಾಮಾನ್ ಮಹೇಶಸ್ಯ ಪ್ರಸಾದತಃ ।
ಮಹಾಕಾಲವನೇ ದೇವಿ ಲಿಂಗಸಂಖ್ಯಾ ನ ವಿದ್ಯತೇ ॥ ೩೪ ॥

ಯತ್ರ ತತ್ರ ಸ್ಥಿತಂ ಲಿಂಗಂ ಸಂಪೂಜ್ಯ ಸ್ಯಾಚ್ಛಿವಪ್ರಿಯಃ ।
ತಥಾ ಕನಕಶೃಂಗಾಹ್ವಾ ಕುಶಸ್ಥಲ್ಯಪ್ಯವಂತಿಕಾ ॥ ೩೫ ॥

ತಥಾ ಪದ್ಮಾವತೀ ದೇವಿ ಕುಮುದ್ವತ್ಯುಜ್ಜಯಿನ್ಯಪಿ ।
ಪ್ರತಿಕಲ್ಪಾಭಿಧಾ ಭಿನ್ನಾ ವಿಶಾಲಾಖ್ಯಾಮರಾವತೀ ॥ ೩೬ ॥

ಕ್ಷಿಪ್ರಾಯಾಂ ವೈ ನರಃ ಸ್ನಾತ್ವಾ ಯೋ ಮಹೇಶಂ ಸಮರ್ಚಯೇತ್ ।
ಸ ಲಭೇತ್ಸಕಲಾನ್ ಕಾಮಾನ್ ದೇವಯೋಸ್ತು ಪ್ರಸಾದತಃ ॥ ೩೭ ॥

ಸ್ನಾತ್ವಾ ತು ಗೋಮತೀಕುಂಡೇ ಸ್ವರ್ಗತಿಂ ಲಭತೇ ನರಃ ।
ಕುಂಡೇ ತು ವಾಮನೇ ಸ್ನಾತ್ವಾ ಸ್ತೌತಿ ನಾಮಸಹಸ್ರತಃ ॥ ೩೮ ॥

---

ವನು. ದೇವೀ! ಮಹಾಕಾಲವನದಲ್ಲಿ ಲಿಂಗಗಳು ಅಸಂಖ್ಯಾಕಗಳಾಗಿವೆ. ಅವುಗಳಲ್ಲಿ ಯಾವ ಲಿಂಗವನ್ನಾದರೂ ಪೂಜಿಸಿ ಶಿವಾನುಗ್ರಹವನ್ನು ಪಡೆಯಬಹುದು. ಅದರಂತೆಯೇ ಕನಕಶೃಂಗನಾಮಕವಾದ ಕುಶಸ್ಥಲಿಯೂ ಸಹ ಅವಂತಿಕಾಕ್ಷೇತ್ರಾಂತರ್ಗತವಾದುದು.

೩೬. ಹಾಗೆಯೇ ಪದ್ಮಾವತೀ, ಕುಮುದ್ವತೀ ಮತ್ತು ಉಜ್ಜಯನಿಗಳೂ ಸಹ ಅವಂತಿಕಾಕ್ಷೇತ್ರಾಂತರ್ಗತಗಳು. ಪ್ರತಿಕಲ್ಪವೆಂಬುದು ಪ್ರತ್ಯೇಕವಾಗಿರುವುದು. ಅದು ವಿಶಾಲಾಖ್ಯವಾದ ಅಮರಾವತಿಯು.

೩೭. ಕ್ಷಿಪ್ರಾತೀರ್ಥದಲ್ಲಿ ಸ್ನಾನಮಾಡಿ ಮಹೇಶನನ್ನು ಪೂಜಿಸುವ ಮನುಷ್ಯನು ದೇವದೇವಿಯರ ಪ್ರಸಾದದಿಂದ ಸಕಲಕಾಮನೆಗಳನ್ನೂ ಪೂರ್ಣ ಮಾಡಿಕೊಳ್ಳುವನು.

೩೮-೩೯. ಗೋಮತೀಕುಂಡದಲ್ಲಿ ಸ್ನಾನಮಾಡಿದರೆ ಮನುಷ್ಯನು ಸ್ವರ್ಗವನ್ನು ಪಡೆಯುವನು. ವಾಮನಕುಂಡದಲ್ಲಿ ಸ್ನಾನಮಾಡಿ ಸರ್ವದೇವೇಶ್ವರನಾದ ಶ್ರೀಧರಸ್ವಾಮಿಯನ್ನು ಸಹಸ್ರನಾಮದಿಂದ ಸ್ತೋತ್ರಮಾಡಿದರೆ ಅವನು ಹರಿಯ ಅನುಗ್ರಹಕ್ಕೆ ಪಾತ್ರನಾಗುವನು.

ಶ್ರೀಧರಂ ಸರ್ವದೇವೇಶಂ ಯಃ ಸ ಸಾಕ್ಷಾದ್ಧರಿರ್ಭುವಿ ।
ಸ್ನಾತ್ವಾ ವೀರೇಶಸರಸಿ ಯೋಽರ್ಚಯೇತ್ಕಾಲಭೈರವಂ ॥ ೩೯ ॥

ಸ ಸರ್ವಾಃ ಸಂಪದೋ ಭುಕ್ತ್ವಾ ಶಿವಲೋಕಮವಾಪ್ನುಯಾತ್ ।
ಯಃ ಕುಟುಂಬೇಶ್ವರಂ ಪ್ರಾಪ್ಯ ಪೂಜಯೇದುಪಚಾರಕೈಃ ॥ ೪೦ ॥

ಸಂಪ್ರಾಪ್ಯ ವಿವಿಧಾನ್ಕಾಮಾನಂತೇ ಸ್ವರ್ಗಗತಿಂ ಲಭೇತ್ ।
ದೇವಪ್ರಯಾಗಸರಸಿ ಯೋಽರ್ಚಯೇದ್ದೇವಮಾಧವಂ ॥ ೪೧ ॥

ಸ ಭಕ್ತಿಂ ಮಾಧವೇ ಪ್ರಾಪ್ಯ ಪದಂ ವಿಷ್ಣೋಃ ಸಮಾಪ್ನುಯಾತ್ ।
ಕರ್ಕರಾಜಸ್ಯ ತೀರ್ಥೇ ತು ಸ್ನಾತ್ವಾ ಪ್ರಯತಮಾನಸಃ ॥ ೪೨ ॥

ಸರ್ವರೋಗವಿನಿರ್ಮುಕ್ತೋ ಧನೀ ಭೋಗೀ ಭವೇತ್ಸತಿ ।
ಅಂತರ್ಗೃಹಸ್ಯ ಯಾತ್ರಾಯಾಂ ವಿಘ್ನೇಶಂ ಭೈರವಂ ಹ್ಯುಮಾಂ ॥ ೪೩ ॥

---

೩೯-೪೦. ವೀರೇಶ ಸರೋವರದಲ್ಲಿ ಸ್ನಾನಮಾಡಿ ಕಾಲಭೈರವನನ್ನು ಪೂಜಿಸುವವನು ಸಕಲ ಸಂಪತ್ತುಗಳನ್ನೂ ಭೋಗಿಸಿ ಶಿವಲೋಕವನ್ನು ಪಡೆಯುವನು.

೪೦-೪೧. ಕುಟುಂಬೇಶ್ವರಸನ್ನಿಧಿಗೆ ಹೋಗಿ ನಾನಾವಿಧೋಪಚಾರಗಳನ್ನರ್ಪಿಸಿ ಪೂಜಿಸಿದರೆ ಇಷ್ಟಾರ್ಥಗಳೆಲ್ಲವನ್ನೂ ಪಡೆದು ಕೊನೆಗೆ ಸ್ವರ್ಗಕ್ಕೆ ಹೋಗುವನು.

೪೧-೪೨. ದೇವಪ್ರಯಾಗವೆಂಬ ಸರೋವರದಲ್ಲಿ ದೇವಮಾಧವನನ್ನು ಪೂಜಿಸುವವನು ಮಾಧವದೇವನಲ್ಲಿ ಭಕ್ತಿಯನ್ನು ಹೊಂದಿ ವಿಷ್ಣುಸ್ಥಾನವನ್ನು ಪಡೆಯುವನು.

೪೨-೪೩. ಸಾಧ್ವಿಯೇ! ಜಿತಮನಸ್ಕನಾಗಿ ಕರ್ಕರಾಜ ತೀರ್ಥದಲ್ಲಿ ಸ್ನಾನಮಾಡಿದರೆ ರೋಗಗಳ ಸೋಂಕಿಲ್ಲದೆ ಧನಿಕನೂ, ಭೋಗಿಯೂ ಆಗುವನು.

೪೩-೪೪. ಅಂತರ್ಗೃಹಯಾತ್ರೆಯನ್ನು ಮಾಡುವಾಗ ವಿಘ್ನೇಶ್ವರ, ಭೈರವ, ಉಮಾದೇವಿ, ರುದ್ರ, ಆದಿತ್ಯ ಮತ್ತು ಇತರ ದೇವತೆಗಳನ್ನು ತನ್ನ ಶಕ್ತ್ಯನು

ರುದ್ರಾದಿತ್ಯಾರ್ಕ ಸುರಾನನ್ಯಾನ್ಯೋಽರ್ಚಯೇಚ್ಛ್ರದ್ಧಯಾ ನರಃ |
ಯಥಾ ಲಬ್ಧೋಪಚಾರಾದ್ಯೈಃ ಸ ಭವೇತ್ಸ್ವರ್ಗಲೋಕಭಾಕ್ || ೪೪ ||

ರುದ್ರಸರಃ ಪ್ರಭೃತಿಷು ತೀರ್ಥಾನ್ಯನ್ಯಾನಿ ಭಾಮಿನಿ |
ಬಹೂನಿ ತೇಷು ಚಾಭ್ಯರ್ಚ್ಯ ಶಂಕರಂ ಸ್ಯಾತ್ಸುಖೀ ನರಃ || ೪೫ ||

ಅಷ್ಟತೀರ್ಥೇ ನರಃ ಸ್ನಾತ್ವಾ ಸಾಂಗಂ ಯಾತ್ರಾಫಲಂ ಲಭೇತ್ |
ಕಾಲಾರಣ್ಯಸ್ಯ ವಿಧಿಜೇ ಸತ್ಯಂ ಸತ್ಯಂ ಮಯೋದಿತಂ || ೪೬ ||

ಏತತ್ತೇ ಸರ್ವಮಾಖ್ಯಾತಂ ಮಾಹಾತ್ಮ್ಯಂ ಪಾಪನಾಶನಂ |
ಅವಂತ್ಯಾ ಯನ್ನರಃ ಶ್ರುತ್ವಾ ಸರ್ವಪಾಪೈಃ ಪ್ರಮುಚ್ಯತೇ || ೪೭ ||

ಇತಿ ಶ್ರೀನಾರದೀಯಮಹಾಪುರಾಣೋತ್ತರಭಾಗೇ ವಸುಮೋಹಿನೀ
ಸಂವಾದೇ ಅವಂತಿಕಾಮಾಹಾತ್ಮ್ಯಂ ನಾಮ
ಅಷ್ಟಸಪ್ತತಿತಮೋಽಧ್ಯಾಯಃ

---

ಸಾರವಾಗಿ ಲಭಿಸಿದ ಪೂಜಾಸಾಮಗ್ರಿಗಳಿಂದ ಶ್ರದ್ಧಾಪೂರ್ವಕವಾಗಿ ಪೂಜಿಸುವ ಮನುಷ್ಯನು ಸ್ವರ್ಗಲೋಕಭಾಗಿಯಾಗುವನು.

೪೫. ಭಾಮಿನೀ! ರುದ್ರಸರೋವರ ಮುಂತಾದುವುಗಳಲ್ಲಿ ಇನ್ನೂ ಬಹುತೀರ್ಥಗಳಿವೆ. ಅವುಗಳಲ್ಲಿ ಸ್ನಾನಮಾಡಿ ಶಂಕರನನ್ನು ಪೂಜಿಸಿದರೆ ಅವನು ಸುಖಿಯಾಗುವನು.

೪೬-೪೭. ಅಷ್ಟತೀರ್ಥದಲ್ಲಿ ಮನುಷ್ಯನು ಸ್ನಾನಮಾಡಿದರೆ ಸಾಂಗ ಯಾತ್ರೆಯ ಫಲವು ಬರುವುದು. ಬ್ರಹ್ಮಕುಮಾರೀ! ಪಾಪನಾಶಕವಾದ ಕಾಲಾರಣ್ಯದ ಮತ್ತು ಅವಂತಿಯ ಮಾಹಾತ್ಮ್ಯೆಯನ್ನೆಲ್ಲಾ ನಿನಗೆ ಹೇಳಿರುವೆನು. ಇದು ಸತ್ಯ! ಸತ್ಯ! ಇದನ್ನು ಶ್ರವಣಮಾಡಿದರೆ ಮನುಷ್ಯನು ಸಕಲ ಪಾಪಗಳಿಂದಲೂ ಮುಕ್ತನಾಗುವನು.

ಇಂತು ಶ್ರೀನಾರದೀಯಪುರಾಣೋತ್ತರಭಾಗದೊಳು ವಸುಮೋಹಿನೀ
ಸಂವಾದದಲ್ಲಿ ಅವಂತಿಕಾಮಾಹಾತ್ಮ್ಯೆ ಕಥನವೆಂಬ ಎಪ್ಪತ್ತೆಂಟ
ನೆಯ ಅಧ್ಯಾಯವು ಮುಗಿದುದು.

---

## ಏಕೋನಾಶೀತಿತಮೋಽಧ್ಯಾಯಃ



### ಮಧುರಾಮಾಹಾತ್ಮ್ಯಂ ಪ್ರಾರಭ್ಯತೇ

**ಮೋಹಿನ್ಯುವಾಚ**

**ಶ್ರುತಂ ಹ್ಯವಂತ್ಯಾ ಮಾಹಾತ್ಮ್ಯಂ ವಸೋ ಪಾಪಹರಂ ನೃಣಾಂ ।**
**ಅಧುನಾ ಶ್ರೋತುಮಿಚ್ಛಾಮಿ ಮಾಹಾತ್ಮ್ಯಂ ಮಧುರಾಭವಂ ॥ ೧ ॥**

**ವಸುರುವಾಚ**

**ಶೃಣು ಮೋಹಿನಿ ವಕ್ಷ್ಯಾಮಿ ಮಧುರಾಯಾಃ ಶುಭಾವಹಂ ।**
**ವೈಭವಂ ಯತ್ರ ಭಗವಾಂಜಾತಃ ಪದ್ಮಭುವಾರ್ಥಿತಃ ॥ ೨ ॥**

**ಆವಿರ್ಭೂಯ ವಿಭುಸ್ತತ್ರ ಸಂಪ್ರಾಪ್ತೋ ನಂದಗೋಕುಲಂ ।**
**ತತ್ರ ಸ್ಥಿತ್ವಾಖಿಲಾಃ ಕ್ರೀಡಾಶ್ಚಕಾರ ಸಹ ಗೋಪಕೈಃ ॥ ೩ ॥**

---

### ಎಪ್ಪತ್ತೊಂಬತ್ತನೆಯ ಅಧ್ಯಾಯ

೧. ವಸುವೇ! ಮನುಷ್ಯರ ಪಾಪಗಳನ್ನು ಪರಿಹರಿಸುವಂತಹ ಅವಂತೀಮಾಹಾತ್ಮ್ಯೆಯನ್ನು ಶ್ರವಣಮಾಡಿದೆನು. ಈಗ ಮಧುರಾಮಾಹಾತ್ಮ್ಯೆಯನ್ನು ಕೇಳಲು ಬಯಸುವೆನು ಎಂದು ಮೋಹಿನಿಯು ಹೇಳಿದಳು.

೨. ವಸುವು ಹೇಳಿದನು:—ಮೋಹಿನಿಯೇ! ಕೇಳು ! ಚತುರ್ಮುಖನಿಂದ ಪ್ರಾರ್ಥಿತನಾದ ಭಗವಂತನು ಅವತಾರ ಮಾಡಿದ, ಮಂಗಳಕರವಾದ ಮಧುರೆಯ ವೈಭವವನ್ನು ಹೇಳುವೆನು.

೩. ಸ್ವಾಮಿಯು ಅಲ್ಲಿ ಆವಿರ್ಭವಿಸಿ ನಂದಗೋಕುಲಕ್ಕೆ ಹೋಗಿ ಅಲ್ಲಿಯೇ ನೆಲೆಸಿ ಗೋಪಾಲ ಬಾಲಕರ ಸಂಗಡ ಸಮಸ್ತವಾದ ಆಟಗಳನ್ನೂ ಆಡಿದನು.

ಹತ್ವಾ ಚ ಕಂಸಪ್ರಹಿತಾನ್ ಪೂತನಾದೀನ್ನಿಶಾಚರಾನ್ ।
ವಿಜಹಾರ ಸ ಗೋಪೀಭಿರ್ವನೇಷು ದ್ವಾದಶಸ್ವಪಿ ॥ ೪ ॥

ವನೇಷು ಯಾನಿ ತೀರ್ಥಾನಿ ಸಂತಿ ಯಾನಿ ಚ ಮಾಥುರೇ ।
ತಾನಿ ತೇಹಂ ಪ್ರವಕ್ಷ್ಯಾಮಿ ಶೃಣು ಮೋಹಿನಿ ಸಾಂಪ್ರತಂ ॥ ೫ ॥

ಆದ್ಯಂ ಮಧುವನಂ ನಾಮ ಸ್ನಾತೋ ಯತ್ರ ನರೋತ್ತಮಃ ।
ಸಂತರ್ಪ್ಯ ದೇವರ್ಷಿಪಿತೄನ್ವಿಷ್ಣುಲೋಕೇ ಮಹೀಯತೇ ॥ ೬ ॥

ಅಥ ತಾಲಾಹ್ವಯಂ ದೇವಿ ದ್ವಿತೀಯಂ ವನಮುತ್ತಮಂ ।
ಯತ್ರ ಸ್ನಾತೋ ನರೋ ಭಕ್ತ್ಯಾ ಕೃತಕೃತ್ಯಃ ಪ್ರಜಾಯತೇ ॥ ೭ ॥

ಕುಮುದಾಖ್ಯಂ ತೃತೀಯಂ ತು ಯತ್ರ ಸ್ನಾತ್ವಾ ಸುಲೋಚನೇ ।
ಲಭತೇ ವಾಂಛಿತಾನ್ ಕಾಮಾನಿಹಾಮುತ್ರ ಚ ಮೋದತೇ ॥ ೮ ॥

---

೪. ಕಂಸನು ಕಳುಹಿಸಿದ ಪೂತನೆ ಮುಂತಾದ ರಾಕ್ಷಸರನ್ನು ಸಂಹರಿಸಿ ಅವನು ಹನ್ನೆರಡು ವನಗಳಲ್ಲಿಯೂ ಗೋಪಿಕಾಸ್ತ್ರೀಯರೊಡನೆ ಕ್ರೀಡಿಸಿದನು.

೫. ಮೋಹಿನೀ! ಮಧುರಾಕ್ಷೇತ್ರದ ವನಗಳಲ್ಲಿರುವ ತೀರ್ಥಗಳನ್ನು ಈಗ ನಿನಗೆ ಹೇಳುವೆನು ಕೇಳು.

೬. ಮೊದಲನೆಯದು ಮಧುವನವೆಂಬುದು ಅಲ್ಲಿನ ತೀರ್ಥದಲ್ಲಿ ಸ್ನಾನಮಾಡಿ ದೇವ, ಋಷಿ, ಪಿತೃಗಳಿಗೆ ತರ್ಪಣ ಮಾಡುವ ಮನುಷ್ಯೋತ್ತಮನು ವಿಷ್ಣುಲೋಕದಲ್ಲಿ ಭೋಗಿಸುವನು

೭. ದೇವೀ! ತಾಲವನವೆಂಬುದು ಉತ್ತಮವಾದ ಎರಡನೆಯ ವನವು. ಅಲ್ಲಿ ಭಕ್ತಿಯಿಂದ ಸ್ನಾನಮಾಡಿದ ಮನುಷ್ಯನು ಕೃತಕೃತ್ಯನಾಗುವನು.

೮. ಸುಲೋಚನೇ! ಕುಮುದ ಎಂಬ ಮೂರನೆಯ ವನದಲ್ಲಿ ಸ್ನಾನ ಮಾಡಿದರೆ ಈ ಲೋಕ ಪರಲೋಕಗಳಲ್ಲಿ ಬಯಸಿದುದನ್ನೆಲ್ಲಾ ಹೊಂದಿ ಸುಖ ಪಡುವನು.

ತತಃ ಕಾಮ್ಯವನಂ ನಾಮ ಚತುರ್ಥಂ ಪರಿಕೀರ್ತಿತಂ ।
ಬಹುತೀರ್ಥಾನ್ವಿತಂ ಯತ್ರ ಗತ್ವಾ ಸ್ಯಾದ್ವಿಷ್ಣುಲೋಕಭಾಕ್ ॥ ೯ ॥

ಯತ್ತತ್ರ ವಿಮಲಂ ಕುಂಡಂ ಸರ್ವತೀರ್ಥೋತ್ತಮೋತ್ತಮಂ ।
ಯತ್ರ ಸ್ನಾತೋ ನರೋ ಭದ್ರೇ ಲಭತೇ ವೈಷ್ಣವಂ ಪದಂ ॥ ೧೦ ॥

ಪಂಚಮಂ ಬಹುಲಾಖ್ಯಂ ತು ವನಂ ಪಾಪವಿನಾಶನಂ ।
ಯತ್ರ ಸ್ನಾತಸ್ತು ಮನುಜಃ ಸರ್ವಾನ್ಕಾಮಾನವಾಪ್ನುಯಾತ್ ॥ ೧೧ ॥

ಅಸ್ತಿ ಭದ್ರವನಂ ನಾಮ ಷಷ್ಠಂ ಸ್ನಾತೋತ್ರ ಮಾನವಃ ।
ಕೃಷ್ಣದೇವಪ್ರಸಾದೇನ ಸರ್ವಭದ್ರಾಣಿ ಪಶ್ಯತಿ ॥ ೧೨ ॥

ಖಾದಿರಂ ತು ವನಂ ದೇವಿ ಸಪ್ತಮಂ ಯತ್ರ ಮಾನವಃ ।
ಸ್ನಾನಮಾತ್ರೇಣ ಲಭತೇ ತದ್ವಿಷ್ಣೋಃ ಪರಮಂ ಪದಂ ॥ ೧೩ ॥

---

೯. ಕಾಮ್ಯವನವೆಂಬುದು ನಾಲ್ಕನೆಯದೆಂದು ಉಕ್ತವಾಗಿದೆ. ಅದರಲ್ಲಿ ಬಹುತೀರ್ಥಗಳಿವೆ. ಅಲ್ಲಿಗೆ ಹೋಗಿ ಅವನ್ನು ಸೇವಿಸಿದರೆ ವಿಷ್ಣುಲೋಕಪ್ರಾಪ್ತಿಯಾಗುವುದು.

೧೦. ಆ ವನದಲ್ಲಿ ವಿಮಲವೆಂಬ ಕುಂಡವು ಸಕಲ ತೀರ್ಥೋತ್ತಮವು. ಭದ್ರೇ! ಅಲ್ಲಿ ಸ್ನಾನಮಾಡಿದವನು ವೈಕುಂಠಲೋಕಕ್ಕೆ ಹೋಗುವನು.

೧೧. ಬಹುಲವೆಂಬ ವನವು ಐದನೆಯದು. ಅದು ಸಕಲ ಪಾಪಗಳನ್ನೂ ಪರಿಹರಿಸುತ್ತದೆ. ಅಲ್ಲಿ ಸ್ನಾನಮಾಡಿದರೆ ಮನುಷ್ಯನು ಇಷ್ಟಾರ್ಥಗಳನ್ನೆಲ್ಲಾ ಪಡೆಯುವನು.

೧೨. ಭದ್ರವನವೆಂಬುದು ಆರನೆಯದು ಅಲ್ಲಿ ಸ್ನಾನಮಾಡಿದ ಮನುಷ್ಯನು ಕೃಷ್ಣದೇವನ ಅನುಗ್ರಹದಿಂದ ಶ್ರೇಯಸ್ಸುಗಳನ್ನೆಲ್ಲಾ ಹೊಂದುವನು.

೧೩. ದೇವೀ! ಖಾದಿರವನವೇ ಏಳನೆಯದು. ಅಲ್ಲಿ ಸ್ನಾನಮಾಡುವ ಮಾತ್ರದಿಂದ ಮಾನವನು ವಿಷ್ಣುವಿನ ಪರಮಪದವನ್ನು ಹೊಂದುವನು.

ಮಹಾವನಂ ಚಾಷ್ಟಮಂ ತು ಸದೈವ ಹರಿವಲ್ಲಭಂ ।
ತದ್ದೃಷ್ಟ್ವಾ ಮನುಜೋ ಭಕ್ತ್ಯಾ ಶಕ್ರಲೋಕೇ ಮಹೀಯತೇ ॥ ೧೪ ॥
ಲೋಹಜಂಘಂ ತು ನವಮಂ ವನಂ ಯತ್ರಾಪ್ಲುತೋ ನರಃ ।
ಮಹಾವಿಷ್ಣುಪ್ರಸಾದೇನ ಭುಕ್ತಿಂ ಮುಕ್ತಿಂ ಚ ವಿಂದತಿ ॥ ೧೫ ॥
ಬಿಲ್ವಾರಣ್ಯಂ ತು ದಶಮಂ ಯತ್ರ ಸ್ನಾತಃ ಸುಮಧ್ಯಮೇ ।
ಶೈವಂ ವಾ ವೈಷ್ಣವಂ ವಾಪಿ ಯಾತಿ ಲೋಕಂ ನಿಜೇಚ್ಛಯಾ ॥ ೧೬ ॥
ಏಕಾದಶಂ ತು ಭಾಂಡೀರಂ ಯೋಗಿನಾಮತಿವಲ್ಲಭಂ ।
ಯತ್ರ ಸ್ನಾತೋ ನರೋ ಭಕ್ತ್ಯಾ ಸರ್ವಪಾಪೈರ್ವಿಮುಚ್ಯತೇ ॥ ೧೭ ॥
ವೃಂದಾವನಂ ದ್ವಾದಶಂ ತು ಸರ್ವಪಾಪನಿಕೃಂತನಂ ।
ಯತ್ಸಮಂ ನ ಧರಾಪೃಷ್ಠೇ ವನಮಸ್ತ್ಯಪರಂ ಸತಿ ॥ ೧೮ ॥

---

೧೪. ಮಹಾವನವೆಂಬ ಎಂಟನೆಯ ವನವು ಯಾವಾಗಲೂ ಹರಿಗೆ ಪ್ರೀತಿಪಾತ್ರವಾದುದು. ಮನುಷ್ಯನು ಭಕ್ತಿಯಿಂದ ಅದನ್ನು ದರ್ಶನಮಾಡಿದರೆ ಇಂದ್ರಲೋಕದಲ್ಲಿ ಆನಂದಿಸುವನು.

೧೫. ಲೋಹಜಂಘವೆಂಬುದು ಒಂಬತ್ತನೆಯ ವನವು. ಅಲ್ಲಿ ಸ್ನಾನ ಮಾಡಿದ ಮನುಷ್ಯನು ಮಹಾವಿಷ್ಣುವಿನ ಅನುಗ್ರಹವನ್ನು ಪಡೆದು ಭೋಗಮೋಕ್ಷಗಳನ್ನು ಹೊಂದುವನು.

೧೬. ಹತ್ತನೆಯದಾದ ಬಿಲ್ವಾರಣ್ಯದಲ್ಲಿ ಸ್ನಾನಮಾಡುವುದರಿಂದ ಮನುಷ್ಯನು ಇಷ್ಟಾನುಸಾರವಾಗಿ ಶೈವ ಅಥವಾ ವೈಷ್ಣವ ಲೋಕವನ್ನು ಹೊಂದುವನು.

೧೭. ಭಾಂಡೀರವನವು ಹನ್ನೊಂದನೆಯದು. ಅದು ಯೋಗಿಗಳಿಗೆ ಅತ್ಯಂತಪ್ರಿಯವಾದುದು. ಅಲ್ಲಿ ಭಕ್ತಿಯಿಂದ ಸ್ನಾನಮಾಡಿದ ಮನುಷ್ಯನು ಸಕಲ ಪಾಪಗಳಿಂದ ಮುಕ್ತನಾಗುವನು.

೧೮. ಸಾಧ್ವಿಯೇ ! ಸಕಲ ಪಾಪವಿನಾಶಕವಾದ ವೃಂದಾವನವು ಹನ್ನೆರಡನೆಯದು. ಭೂಮಂಡಲದಲ್ಲಿ ಅದಕ್ಕೆ ಸಮಾನವಾದ ಇನ್ನೊಂದು ವನವಿಲ್ಲ.

ಯತ್ರ ಸ್ನಾತಸ್ತು ಮನುಜೋ ದೇವರ್ಷಿಪಿತೃತರ್ಪಣಂ |
ಕೃತ್ವಾ ಋಣತ್ರಯಾನ್ಮುಕ್ತೋ ವಿಷ್ಣುಲೋಕೇ ಮಹೀಯತೇ || ೧೯ ||

ವಿಂಶತಿರ್ಯೋಜನಾನಾಂ ತು ಮಾಥುರಂ ಪರಿಮಂಡಲಂ |
ಯತ್ರ ಕುತ್ರಾಪ್ಲುತಸ್ತತ್ರ ವಿಷ್ಣುಭಕ್ತಿಮವಾಪ್ನುಯಾತ್ || ೨೦ ||

ತನ್ಮಧ್ಯೇ ಮಥುರಾ ನಾಮ ಪುರೀ ಸರ್ವೋತ್ತಮೋತ್ತಮಾ |
ಯಸ್ಯಾ ದರ್ಶನಮಾತ್ರೇಣ ಭಕ್ತಿಂ ವಿಂದತಿ ಮಾಧವೇ || ೨೧ ||

ವಿಶ್ರಾಂತಿಸಂಜ್ಞಕಂ ಯತ್ರ ತೀರ್ಥರತ್ನಂ ನರೇಶ್ವರಿ |
ತತ್ರ ಸ್ನಾತೋ ನರೋ ಭಕ್ತ್ಯಾ ವೈಷ್ಣವಂ ಲಭತೇ ಪದಂ || ೨೨ ||

ವಿಶ್ರಾಂತೇರ್ನಿಕಟೇ ದಕ್ಷೇ ವಿಮುಕ್ತಂ ತೀರ್ಥಮುತ್ತಮಂ |
ತತ್ರ ಸ್ನಾತೋ ನರೋ ಭಕ್ತ್ಯಾ ಮುಕ್ತಿಮಾಪ್ನೋತಿ ನಿಶ್ಚಿತಂ || ೨೩ ||

---

೧೯. ಮನುಷ್ಯನು ಅಲ್ಲಿ ಸ್ನಾನಮಾಡಿ ದೇವ, ಋಷಿ, ಪಿತೃಗಳಿಗೆ ತರ್ಪಣಮಾಡಿದರೆ ಮೂರು ಋಣಗಳನ್ನೂ ಪರಿಹರಿಸಿಕೊಂಡು ವಿಷ್ಣುಲೋಕಕ್ಕೆ ಹೋಗುವನು.

೨೦. ಮಥುರಾಕ್ಷೇತ್ರದ ಸುತ್ತಳತೆಯು ಇಪ್ಪತ್ತು ಗಾವುದಗಳು. ಆ ಸರಹದ್ದಿನಲ್ಲಿ ಯಾವ ತೀರ್ಥದಲ್ಲಿ ಸ್ನಾನಮಾಡಿದರೂ ವಿಷ್ಣುಭಕ್ತಿಯು ಲಭಿಸುವುದು.

೨೧. ಅದರ ಮಧ್ಯಭಾಗದಲ್ಲಿ ಮಥುರೆಯೆಂಬ ಸರ್ವೋತ್ಕೃಷ್ಟಪಟ್ಟಣವಿದೆ. ಅದರ ದರ್ಶನಮಾತ್ರದಿಂದ ಮನುಷ್ಯನು ಮಾಧವನಲ್ಲಿ ಭಕ್ತಿಯನ್ನು ಹೊಂದುವನು.

೨೨. ನರೇಶ್ವರೀ! ಅಲ್ಲಿ ವಿಶ್ರಾಂತಿ ಎಂಬ ಉತ್ತಮ ತೀರ್ಥವಿದೆ. ಅಲ್ಲಿ ಭಕ್ತಿಯಿಂದ ಸ್ನಾನಮಾಡಿದ ಮನುಷ್ಯನಿಗೆ ವೈಕುಂಠಸ್ಥಾನವು ದೊರೆಯುವುದು.

೨೩. ವಿಶ್ರಾಂತಿತೀರ್ಥದ ಹತ್ತಿರ ಅದರ ದಕ್ಷಿಣಭಾಗದಲ್ಲಿ ಉತ್ತಮವಾದ ವಿಮುಕ್ತತೀರ್ಥವಿದೆ. ಅಲ್ಲಿ ಭಕ್ತಿಯಿಂದ ಸ್ನಾನಮಾಡಿದ ಮನುಷ್ಯನಿಗೆ ಖಂಡಿತವಾಗಿ ಮುಕ್ತಿಯಾಗುವುದು.

ತತೋಽಪಿ ದಕ್ಷಿಣೇ ಭಾಗೇ ರಾಮತೀರ್ಥಂ ಜನೇಶ್ವರಿ ।
ಯತ್ರ ಸ್ನಾತೋ ನರೋಽಜ್ಞಾನಬಂಧಾನ್ಮುಕ್ತೋ ಭವೇದ್ಧ್ರುವಂ ॥ ೨೪ ॥

ಸಂಸಾರಮೋಕ್ಷಣಂ ತಸ್ಮಾದ್ದಕ್ಷಿಣೇ ತೀರ್ಥಮುತ್ತಮಂ ।
ತತ್ರ ಸ್ನಾತ್ವಾ ತು ಮನುಜೋ ವಿಷ್ಣುಲೋಕೇ ಮಹೀಯತೇ ॥ ೨೫ ॥

ಪ್ರಯಾಗಾಖ್ಯಂ ತತೋ ದಕ್ಷೇ ತೀರ್ಥಂ ತ್ರಿದಶದುರ್ಲಭಂ ।
ಸ್ನಾತಸ್ತತ್ರ ನರೋ ದಕ್ಷೇ ತೀರ್ಥಂ ತ್ರಿದಶದುರ್ಲಭಂ । ೨೬ ॥

ತತಃ ಕನಖಲಂ ತೀರ್ಥಂ ಯತ್ರ ಸ್ನಾತೋ ನರಃ ಸತಿ ।
ಸ್ವರ್ಗಮಾಸಾದ್ಯ ದೇಹಾಂತೇ ಮೋದತೇ ನಂದನಾದಿಷು ॥ ೨೭ ॥

ತದ್ದಕ್ಷೇ ತಿಂದುಕಂ ತೀರ್ಥಂ ಯಸ್ಮಿನ್ ಸ್ನಾತೋ ನರೋತ್ತಮಃ ।
ರಾಜಸೂಯಫಲಂ ಪ್ರಾಪ್ಯ ಮೋದತೇ ದಿವಿ ದೇವವತ್ ॥ ೨೮ ॥

---

೨೪. ಜನೇಶ್ವರೀ! ಅದರಕ್ಕೂ ದಕ್ಷಿಣಭಾಗದಲ್ಲಿ ರಾಮತೀರ್ಥವಿದೆ. ಅಲ್ಲಿ ಸ್ನಾನಮಾಡುವುದರಿಂದ ಮನುಷ್ಯನು ಖಂಡಿತವಾಗಿಯೂ ಅಜ್ಞಾನಬಂಧೆವನ್ನು ಹೋಗಲಾಡಿಸಿಕೊಳ್ಳುವನು.

೨೫. ಅದರ ದಕ್ಷಿಣಭಾಗದಲ್ಲಿ ಸಂಸಾರಮೋಕ್ಷಣವೆಂಬ ಉತ್ತಮ ತೀರ್ಥವಿದೆ. ಅಲ್ಲಿ ಸ್ನಾನಮಾಡುವುದರಿಂದ ಮನುಷ್ಯನು ವಿಷ್ಣುಲೋಕಕ್ಕೆ ಹೋಗಿ ಸುಖಪಡುವನು.

೨೬. ಅದರ ದಕ್ಷಿಣ ಪಾರ್ಶ್ವದಲ್ಲಿ ದೇವತೆಗಳಿಗೂ ದುರ್ಲಭವಾದ ಪ್ರಯಾಗವೆಂಬ ತೀರ್ಥವಿದೆ. ದೇವೀ! ಅಲ್ಲಿ ಸ್ನಾನಮಾಡಿದ ಮನುಷ್ಯನು ಅಗ್ನಿಷ್ಟೋಮ ಫಲವನ್ನು ಹೊಂದುವನು.

೨೭. ಸಾಧ್ವೀ! ಬಳಿಕ ಕನಖಲತೀರ್ಥದಲ್ಲಿ ಸ್ನಾನ ಮಾಡಿದ ಮನುಷ್ಯನು ಸ್ವರ್ಗಕ್ಕೆ ಹೋಗಿ ನಂದನ ಮುಂತಾದ ವನಗಳಲ್ಲಿ ಕ್ರೀಡಿಸುವನು.

೨೮. ಅದರ ದಕ್ಷಿಣದಿಕ್ಕಿನಲ್ಲಿರುವ ತಿಂದುಕವೆಂಬ ತೀರ್ಥದಲ್ಲಿ ಸ್ನಾನಮಾಡಿದ ನರೋತ್ತಮನು ರಾಜಸೂಯಯಾಗದ ಫಲವನ್ನು ಹೊಂದಿ ಸ್ವರ್ಗದಲ್ಲಿ ದೇವತೆಯಂತೆ ಸುಖಪಡುವನು.

ತತಃ ಪರಂ ಪಟುಸ್ವಾಮಿತೀರ್ಥಂ ಭಾಸ್ಕರವಲ್ಲಭಂ ।
ಸ್ನಾತ್ವಾ ಯತ್ರ ರವಿಂ ದೃಷ್ಟ್ವಾ ಭುಕ್ತಭೋಗೋ ದಿವಂ ವ್ರಜೇತ್ ॥೨೯॥
ತಸ್ಮಾದ್ದಕ್ಷಿಣತೋ ಭದ್ರೇ ಧ್ರುವತೀರ್ಥಮನುತ್ತಮಂ ।
ಯತ್ರ ಸ್ನಾತೋ ಧ್ರುವಂ ದೃಷ್ಟ್ವಾ ಲಭತೇ ವೈಷ್ಣವಂ ಪದಂ ॥ ೩೦ ॥
ಧ್ರುವತೀರ್ಥಾತ್ತತೋ ದಕ್ಷೇ ತೀರ್ಥಂ ಸಪ್ತರ್ಷಿಸೇವಿತಂ ।
ತತ್ರ ಸ್ನಾತ್ವಾ ಮುನೀನ್ ದೃಷ್ಟ್ವಾ ಋಷಿಲೋಕೇ ಪ್ರಮೋದತೇ ॥ ೩೧ ॥
ದಕ್ಷಿಣೇ ಋಷಿತೀರ್ಥಸ್ಯ ಮೋಕ್ಷತೀರ್ಥಮನುತ್ತಮಂ ।
ಯತ್ರ ವೈ ಸ್ನಾನಮಾತ್ರೇಣ ಮುಚ್ಯತೇ ಸರ್ವಪಾಪತಃ ॥ ೩೨ ॥
ತದ್ದಕ್ಷೇ ಬೋಧಿನೀತೀರ್ಥಂ ಸ್ನಾತ್ವಾ ಯತ್ರ ತು ಮಾನವಃ ।
ದತ್ವಾ ಪಿಂಡಂ ಪಿತೃಭ್ಯಶ್ಚ ನಯೇತ್ತಾಂಸ್ತ್ರಿದಶಾಲಯಂ ॥ ೩೩ ॥

---

೨೯. ಆದಾದಮೇಲೆ ಸೂರ್ಯನಿಗೆ ಅತ್ಯಂತಪ್ರಿಯವಾದ ಪಟುಸ್ವಾಮಿತೀರ್ಥದಲ್ಲಿ ಸ್ನಾನಮಾಡಿ ಸೂರ್ಯದರ್ಶನ ಮಾಡಿದರೆ ಈ ಲೋಕದಲ್ಲಿ ಭೋಗಗಳನ್ನೆಲ್ಲಾ ಅನುಭವಿಸಿ ನಂತರ ಸ್ವರ್ಗಕ್ಕೆ ಹೋಗುವನು.

೩೦. ಭದ್ರೇ! ಅದಕ್ಕೂ ದಕ್ಷಿಣದಲ್ಲಿ ಸರ್ವೋತ್ತಮವಾದ ಧ್ರುವತೀರ್ಥವಿದೆ. ಅಲ್ಲಿ ಸ್ನಾನಮಾಡಿ ಧ್ರುವನನ್ನು ದರ್ಶನಮಾಡಿದರೆ ವೈಕುಂಠಪ್ರಾಪ್ತಿಯಾಗುವುದು.

೩೧. ಆ ಧ್ರುವತೀರ್ಥಕ್ಕೆ ದಕ್ಷಿಣದಲ್ಲಿ ಸಪ್ತರ್ಷಿಗಳಿಂದ ಸೇವಿತವಾದ ತೀರ್ಥವಿದೆ. ಅಲ್ಲಿ ಸ್ನಾನಮಾಡಿ ಋಷಿಗಳನ್ನು ದರ್ಶನಮಾಡಿದರೆ ಋಷಿಲೋಕಕ್ಕೆ ಹೋಗಿ ಭೋಗಪಡುವನು.

೩೨. ಋಷಿತೀರ್ಥದ ದಕ್ಷಿಣದಲ್ಲಿ ಸರ್ವೋತ್ತಮವಾದ ಮೋಕ್ಷತೀರ್ಥವಿದೆ. ಅಲ್ಲಿ ಸ್ನಾನಮಾಡುವ ಮಾತ್ರದಿಂದ ಸಕಲ ಪಾಪವಿಮೋಚನೆಯಾಗುವುದು.

೩೩. ಅದರ ದಕ್ಷಿಣ ಭಾಗದಲ್ಲಿರುವ ಬೋಧಿನೀತೀರ್ಥದಲ್ಲಿ ಸ್ನಾನಮಾಡಿ ಮನುಷ್ಯನು ಪಿತೃಗಳಿಗೆ ಪಿಂಡದಾನಮಾಡಿದರೆ ಅವನ ಪಿತೃಗಳು ದೇವಲೋಕಕ್ಕೆ ಹೋಗುವರು.

ತದ್ದಕ್ಷೇ ಕೋಟಿತೀರ್ಥಂ ವೈ ಯತ್ರ ಸ್ನಾನೇನ ಮಾನವಃ |
ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕಮವಾಪ್ನುಯಾತ್ || ೩೪ ||

ವಿಶ್ರಾಂತೇರುತ್ತರೇ ಭಾಗೇ ತೀರ್ಥಮಸ್ತ್ಯಸಿಕುಂಡಕಂ |
ಯತ್ರ ಸ್ನಾತೋ ನರೋ ದೇವಿ ವೈಷ್ಣವಂ ಲಭತೇ ಪದಂ || ೩೫ ||

ಅಸಿಕುಂಡಸ್ಯ ಸೌಮ್ಯೇ ತು ನವತೀರ್ಥಂ ಸುಲೋಚನೇ |
ಯತ್ರ ವೈ ಸ್ನಾನತೋ ಮರ್ತ್ಯಃ ಸ್ವರ್ಗಲೋಕೇ ಮಹೀಯತೇ || ೩೬ ||

ತೀರ್ಥಂ ಸಂಯಮನಂ ನಾಮ ತತ ಉತ್ತರತಃ ಸ್ಥಿತಂ |
ತತ್ರ ಸ್ನಾನೇನ ದಾನೇನ ಯಮಲೋಕಂ ನ ಪಶ್ಯತಿ || ೩೭ ||

ತದುತ್ತರೇ ಪರಂ ತೀರ್ಥಂ ಧಾರಾಯತನಸಂಜ್ಞಕಂ |
ತತ್ರ ಸ್ನಾತ್ವಾ ತು ಮನುಜಃ ಪಿತೃಭಿಃ ಸಹ ಮೋದತೇ || ೩೮ ||

---

೩೪. ಅದರ ದಕ್ಷಿಣಭಾಗದಲ್ಲಿರುವ ಕೋಟಿತೀರ್ಥದಲ್ಲಿ ಸ್ನಾನಮಾಡುವುದರಿಂದ ಮನುಷ್ಯನು ಸಕಲ ಪಾಪವಿಮೋಚನೆಯಾಗಿ ವಿಷ್ಣುಲೋಕವನ್ನು ಹೊಂದುವನು.

೩೫. ವಿಶ್ರಾಂತಿತೀರ್ಥದ ಉತ್ತರಭಾಗದಲ್ಲಿ ಅಸಿಕುಂಡಕವೆಂಬ ತೀರ್ಥವಿದೆ. ದೇವೀ! ಅಲ್ಲಿ ಸ್ನಾನಮಾಡಿದ ಮನುಷ್ಯನು ವೈಷ್ಣವಸ್ಥಾನ (ವೈಕುಂಠ)ವನ್ನು ಹೊಂದುವನು.

೩೬. ಅಸಿಕುಂಡದ ಈಶಾನ್ಯದಿಕ್ಕಿನಲ್ಲಿ ನವತೀರ್ಥವಿದೆ. ಸುಲೋಚನೇ! ಅಲ್ಲಿ ಸ್ನಾನಮಾಡುವುದರಿಂದ ಮನುಷ್ಯನು ಸ್ವರ್ಗಲೋಕಕ್ಕೆ ಹೋಗಿ ಆನಂದಿಸುವನು.

೩೭. ಅದಕ್ಕೂ ಉತ್ತರದಲ್ಲಿರುವ ಸಂಯಮನವೆಂಬ ತೀರ್ಥದಲ್ಲಿ ಸ್ನಾನಮಾಡಿ ದಾನಮಾಡಿದರೆ ಯಮಲೋಕದರ್ಶನವಾಗುವುದಿಲ್ಲ.

೩೮. ಅದರ ಉತ್ತರದಲ್ಲಿ ಧಾರಾಯತನವೆಂಬ ಉತ್ತಮತೀರ್ಥವಿದೆ. ಅಲ್ಲಿ ಸ್ನಾನಮಾಡಿದರೆ ಮನುಷ್ಯನು ಪಿತೃಗಳೊಡನೆ ಸಂಗತನಾಗಿ ಆನಂದಿಸುವನು.

ತದುತ್ತರೇ ನಾಗತೀರ್ಥಂ ಯತ್ರ ಸ್ನಾನೇನ ಮೋಹಿನಿ ।
ಸರ್ವೇಭ್ಯೋ ಹ್ಯಭಯಂ ಲಬ್ಧ್ವಾ ಸ್ವರ್ಗೇ ಲೋಕೇ ಮಹೀಯತೇ ॥

ತದುತ್ತರೇ ಬ್ರಹ್ಮಲೋಕಂ ಘಂಟಾಭರಣಕಾಹ್ವಯಂ ।
ಸ್ನಾನಾತ್ಪಾಪಹಂ ತೀರ್ಥಂ ಬ್ರಹ್ಮಲೋಕಗತಿಪ್ರದಂ ॥ ೪೦ ॥

ಅಸ್ಮಾತ್ಸೌಮ್ಯೇ ಪರಂ ತೀರ್ಥಂ ಸೋಮಾಖ್ಯಂ ಯತ್ರ ಸಂಪ್ಲುತಃ ।
ಸೋಮಲೋಕಮವಾಪ್ನೋತಿ ವಿಪಾಪೋ ಮನುಜೋತ್ತಮಃ ॥ ೪೧ ॥

ಸ್ನಾತ್ವಾ ಪ್ರಾಚೀಸರಸ್ವತ್ಯಾಂ ತಸ್ಮಾದುತ್ತರತಃ ಶುಭೇ ।
ಯತ್ರ ವೈ ಸ್ನಾನಮಾತ್ರೇಣ ನರೋ ವಾಗೀಶ್ವರೋ ಭವೇತ್ ॥ ೨ ॥

ತದುತ್ತರೇ ಚಕ್ರತೀರ್ಥಂ ಯತ್ರ ಸ್ನಾತಸ್ತು ಮಾನವಃ ।
ಜಿತ್ವಾ ಶತ್ರುಗಣಂ ಸ್ವರ್ಗೇ ಮೋದತೇ ಯುಗಸಪ್ತಕಂ ॥ ೪೩ ॥

---

೩೯. ಮೋಹಿನೀ! ಅದರ ಉತ್ತರದಲ್ಲಿರುವ ನಾಗತೀರ್ಥದಲ್ಲಿ ಸ್ನಾನ ಮಾಡುವುದರಿಂದ ಸರ್ಪಭಯವಿಲ್ಲದಂತಾಗಿ ಸ್ವರ್ಗಲೋಕಕ್ಕೆ ಹೋಗಿ ಸುಖಪಡುವನು.

೪೦. ಅದರ ಉತ್ತರದಲ್ಲಿ ಘಂಟಾಭರಣಕವೆಂಬ ಬ್ರಹ್ಮಲೋಕತೀರ್ಥವಿದೆ. ಅಲ್ಲಿ ಸ್ನಾನಮಾಡುವುದರಿಂದ ಪಾಪಪರಿಹಾರವಾಗಿ ಬ್ರಹ್ಮಲೋಕಪ್ರಾಪ್ತಿಯಾಗುವುದು.

೪೧. ಇದರ ಈಶಾನ್ಯದಲ್ಲಿ ಸೋಮವೆಂಬ ಉತ್ತಮತೀರ್ಥವಿದೆ. ಅಲ್ಲಿ ಸ್ನಾನಮಾಡಿದ ಮನುಷ್ಯೋತ್ತಮನು ಪಾಪಗಳೆಲ್ಲವನ್ನೂ ಕಳೆದುಕೊಂಡು ಸೋಮಲೋಕಕ್ಕೆ ಹೋಗುವನು.

೪೨. ಅದಕ್ಕೆ ಉತ್ತರದಲ್ಲಿರುವ ಪ್ರಾಚೀಸರಸ್ವತೀ ತೀರ್ಥದಲ್ಲಿ ಸ್ನಾನ ಮಾಡುವ ಮಾತ್ರದಿಂದ ಮನುಷ್ಯನು ವಾಗೀಶ್ವರನಾಗುವನು.

೪೩. ಅದರ ಉತ್ತರದಲ್ಲಿರುವ ಚಕ್ರತೀರ್ಥದಲ್ಲಿ ಸ್ನಾನಮಾಡಿದ ಮನುಷ್ಯನು ಶತ್ರುಗಣವನ್ನು ಜಯಿಸಿ ಏಳು ಯುಗಗಳ ಕಾಲ ಸ್ವರ್ಗಸುಖವನ್ನನುಭವಿಸುವನು.

ದಶಾಶ್ವಮೇಧಿಕಂ ತೀರ್ಥಂ ತಸ್ಮಾದುತ್ತರತಃ ಸ್ಥಿತಂ |
ಯತ್ರ ಸ್ನಾನೇನ ಸುಭಗೇ ವಾಜಿಮೇಧಫಲಂ ಲಭೇತ್ || ೪೪ ||

ಗೋಕರ್ಣಾಖ್ಯಂ ಶಿವಂ ತತ್ರ ಸಂಪೂಜ್ಯ ವಿಧಿವನ್ನರಃ |
ಸರ್ವಾನ್ಕಾಮಾನವಾಪ್ಯಾಂತೇ ಶಿವಲೋಕೇ ಮಹೀಯತೇ || ೪೫ ||

ವಿಘ್ನರಾಜಾಹ್ವಯಂ ತೀರ್ಥಂ ತಸ್ಮಾದುತ್ತರತಃ ಸ್ಥಿತಂ |
ಯತ್ರ ಸ್ನಾತ್ವಾ ಹ್ಯವಿಘ್ನೇನ ಸರ್ವಕರ್ಮಫಲಂ ಲಭೇತ್ || ೪೬ ||

ತದುತ್ತರೇ ಹ್ಯನಂತಾಖ್ಯಂ ತೀರ್ಥಂ ತತ್ರಾಪ್ಲುತೋ ನರಃ |
ಚತುರ್ವಿಂಶತಿತೀರ್ಥಾನಾಂ ಮಾಥುರಾಣಾಂ ಫಲಂ ಲಭೇತ್ || ೪೭ ||

ಮಾಥುರಾಯಾಂ ಮಹಾಭಾಗೇ ಸಾಕ್ಷಾದ್ದೇವೋ ಹರಿಃ ಸ್ಥಿತಃ |
ಚತುರ್ವ್ಯೂಹಸ್ವರೂಪೇಣ ಮಾಥುರಾಣಾಂ ವಿಮುಕ್ತಿದಃ || ೪೮ ||

---

೪೪. ಅದರ ಉತ್ತರದಲ್ಲಿ ದಶಾಶ್ವಮೇಧಿಕವೆಂಬ ತೀರ್ಥವಿದೆ. ಅದರಲ್ಲಿ ಸ್ನಾನಮಾಡುವುದರಿಂದ ಅಶ್ವಮೇಧಯಜ್ಞದ ಫಲವು ಬರುವುದು.

೪೫. ಅಲ್ಲಿರುವ ಗೋಕರ್ಣೇಶ್ವರನನ್ನು ವಿಧಿವತ್ತಾಗಿ ಪೂಜಿಸಿದರೆ ಮನುಷ್ಯನು ಸಕಲೇಷ್ಟಗಳನ್ನೂ ಪಡೆದು ಕೊನೆಯಲ್ಲಿ ಶಿವಲೋಕಕ್ಕೆ ಹೋಗಿ ಆನಂದಿಸುವನು.

೪೬. ಅದರ ಉತ್ತರದಲ್ಲಿ ವಿಘ್ನರಾಜವೆಂಬ ತೀರ್ಥವಿದೆ. ಅಲ್ಲಿ ಸ್ನಾನ ಮಾಡಿದರೆ ನಿರ್ವಿಘ್ನವಾಗಿ ಸಕಲ ಕರ್ಮಫಲವೂ ಬರುವುದು.

೪೭. ಅದರ ಉತ್ತರದಲ್ಲಿರುವ ಅನಂತವೆಂಬ ತೀರ್ಥದಲ್ಲಿ ಸ್ನಾನಮಾಡಿದ ಮನುಷ್ಯನು ಮಧುರಾಕ್ಷೇತ್ರದ ಇಪ್ಪತ್ತುನಾಲ್ಕು ತೀರ್ಥಗಳಲ್ಲಿ ಸ್ನಾನಮಾಡಿದ ಫಲವನ್ನು ಪಡೆಯುವನು.

೪೮. ಮಹಾಶಯಳೇ ! ಮಧುರಾಕ್ಷೇತ್ರದಲ್ಲಿ ಸಾಕ್ಷಾದ್ವಿಷ್ಣುದೇವನು ಚತುರ್ವ್ಯೂಹಸ್ವರೂಪದಿಂದ ಸನ್ನಿಹಿತನಾಗಿದ್ದು ಆ ಕ್ಷೇತ್ರವಾಸಿಗಳಿಗೆ ಮುಕ್ತಿಯನ್ನು ಕೊಡುತ್ತಿರುವನು.

ಏಕಾ ವಾರಾಹಮೂರ್ತಿಶ್ಚ ಪರಾ ನಾರಾಯಣಾಹ್ವಯಾ ।
ವಾಮನಾಖ್ಯಾ ತೃತೀಯಾ ಚ ಚತುರ್ಥೀ ಹಲಧಾರಿಣೀ ॥ ೪೯ ॥

ಚತುರ್ವ್ಯೂಹಂ ನರೋ ದೃಷ್ಟ್ವಾ ಸಮಭ್ಯರ್ಚ್ಯ ವಿಧಾನತಃ ।
ನರೋ ಮುಕ್ತಿಮವಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ॥ ೫೦ ॥

ರಂಗೇಶಂ ಚಾಪಿ ಭೂತೇಶಂ ಮಹಾವಿದ್ಯಾಂ ಚ ಭೈರವಂ ।
ದೃಷ್ಟ್ವಾ ಸಂಪೂಜ್ಯ ವಿಧಿವತ್ತೀರ್ಥಯಾತ್ರಾಫಲಂ ಲಭೇತ್ ॥ ೫೧ ॥

ಚತುಃಸಾಮುದ್ರಿಕೇ ಕೂಪೇ ಕುಬ್ಜಾಯಾಶ್ಚ ಗಣೇಶಿತುಃ ।
ತಥಾ ಕೃಷ್ಣಾಖ್ಯಗಂಗಾಯಾಂ ಸ್ನಾತ್ವಾ ಮುಚ್ಯೇತ ಪಾತಕಾತ್ ॥ ೫೨ ॥

ಸರ್ವಸ್ಯ ಮಾಥುರಾಖ್ಯಸ್ಯ ಮಂಡಲಸ್ಯ ಶುಭಾನನೇ ।
ಆಧಿಪತ್ಯೇ ಸ್ಥಿತೋ ದೇವಃ ಕೇಶವಃ ಕ್ಲೇಶನಾಶನಃ ॥ ೫೩ ॥

---

೪೯-೫೦. ವರಾಹ ಮೂರ್ತಿಯು ಪ್ರಥಮವು, ನಾರಾಯಣರೂಪವು ಎರಡನೆಯದು, ಮೂರನೆಯದು ವಾಮನರೂಪವು, ನಾಲ್ಕನೆಯದು ಹಲಧರ ಮೂರ್ತಿಯು. ಈ ರೀತಿಯಾಗಿರುವ ಚತುರ್ವ್ಯೂಹವನ್ನು ದರ್ಶನಮಾಡಿ ವಿಧಾನೋಕ್ತಪ್ರಕಾರವಾಗಿ ಪೂಜಿಸಿದರೆ ಅವನು ಮುಕ್ತಿಯನ್ನು ಹೊಂದುವನು. ಈ ವಿಷಯದಲ್ಲಿ ಸಂಶಯಪಡಬಾರದು.

೫೧. ರಂಗೇಶ, ಭೂತೇಶ, ಮಹಾವಿದ್ಯಾ ಮತ್ತು ಭೈರವ ಇವರನ್ನು ದರ್ಶನಮಾಡಿ ವಿಧಿವತ್ತಾಗಿ ಪೂಜಿಸಿದರೆ ಸಾಂಗತೀರ್ಥಯಾತ್ರೆಯ ಫಲವು ಲಭಿಸುವುದು.

೫೨. ಚತುಸ್ಸಾಮುದ್ರಿಕಕೂಪ, ಕುಬ್ಜಾತೀರ್ಥ, ಗಣೇಶತೀರ್ಥ ಮತ್ತು ಕೃಷ್ಣಾಖ್ಯಗಂಗೆ ಇವುಗಳಲ್ಲಿ ಸ್ನಾನಮಾಡಿದರೆ ಪಾಪವಿಮೋಚನೆಯಾಗುವುದು.

೫೩. ಶುಭಾನನೇ! ಕ್ಲೇಶಪರಿಹಾರಕನಾದ ಕೇಶವದೇವನು ಸಮಸ್ತ ಮಥುರಾಮಂಡಲಕ್ಕೂ ಅಧಿಪತಿಯಾಗಿರುವನು.

ಅದೃಷ್ಟ್ವಾ ಕೇಶವಂ ಭದ್ರೇ ಮಾಥುರಂ ಪುಣ್ಯಮಂಡಲಂ |
ಜನುರ್ನಿರರ್ಥಕಂ ತಸ್ಯ ಸಂಸರೇದ್ಭವಸಾಗರೇ || ೫೪ ||

ಅನ್ಯಾನ್ಯಸಂಖ್ಯತೀರ್ಥಾನಿ ತತ್ರ ಸಂತಿ ಶುಭಾನನೇ |
ಸ್ನಾತ್ವಾ ತೇಷ್ವಪಿ ದತ್ವಾ ಚ ಕಿಂಚಿತ್ತತ್ರ ಸ್ಥಿತಾಯ ಚ || ೫೫ ||

ನರೋ ನ ದುರ್ಗತಿಂ ಯಾತಿ ಸತ್ಯಂ ತುಭ್ಯಂ ಮಯೋದಿತಂ |
ಮಥುರಾಯಾಶ್ಚ ಮಾಹಾತ್ಮ್ಯಂ ಶ್ರಾವಯೇದ್ಯಃ ಶೃಣೋತಿ ಚ |
ಸೋಪಿ ಭಕ್ತಿಂ ಹರೌ ಲಬ್ಧ್ವಾ ಸರ್ವಾನ್ಕಾಮಾನವಾಪ್ನುಯಾತ್ || ೫೬ ||

ಇತಿ ಶ್ರೀನಾರದೀಯಪುರಾಣೋತ್ತರಭಾಗೇ ವಸುಮೋಹಿನೀಸಂವಾದೇ ಮಥುರಾಮಾಹಾತ್ಮ್ಯವರ್ಣನಂ ನಾಮೈಕೋನಾಶೀತಿತಮೋಽಧ್ಯಾಯಃ

ಇತಿ ಮಥುರಾಮಾಹಾತ್ಮ್ಯಂ ಸಮಾಪ್ತಂ

---

೫೪. ಭದ್ರೇ! ಕೇಶವನನ್ನೂ ಮಥುರಾ ಎಂಬ ಪುಣ್ಯಕ್ಷೇತ್ರವನ್ನೂ ನೋಡದಿರುವವನ ಜನ್ಮವು ನಿರರ್ಥಕವು. ಅವನು ಈ ಸಂಸಾರಸಾಗರದಲ್ಲಿ ಬಿದ್ದು ಒದ್ದಾಡುತ್ತಿರುವನು.

೫೫. ಶುಭಾನನೇ! ಮಥುರಾಮಂಡಲದಲ್ಲಿ ಇನ್ನೂ ಅಸಂಖ್ಯಾತ ತೀರ್ಥಗಳಿವೆ. ಅವುಗಳಲ್ಲಿ ಸ್ನಾನಮಾಡಿ, ದಾನಮಾಡಿ, ಸ್ವಲ್ಪಕಾಲ ಅಲ್ಲಿ ವಾಸಿಸುವ ಮನುಷ್ಯನೂ ಸಹ ದುರ್ಗತಿಯನ್ನು ಹೊಂದುವುದಿಲ್ಲ. ನಾನು ನಿನಗೆ ಹೇಳಿರುವುದೆಲ್ಲವೂ ಸತ್ಯವು.

೫೬. ಮಥುರೆಯ ಮಾಹಾತ್ಮ್ಯೆಯನ್ನು ಶ್ರವಣ ಪಠನ ಮಾಡುವವನೂ ಸಹ ಹರಿಯಲ್ಲಿ ಭಕ್ತಿಯನ್ನು ಹೊಂದಿ ಇಷ್ಟಾರ್ಥಗಳನ್ನೆಲ್ಲಾ ಪಡೆಯುವನು.

ಇಂತು ಶ್ರೀ ನಾರದೀಯ ಪುರಾಣೋತ್ತರ ಭಾಗದೊಳು ವಸುಮೋಹಿನೀ ಸಂವಾದದಲ್ಲಿ ಮಥುರಾ ಮಾಹಾತ್ಮ್ಯೆ ವರ್ಣನೆಯೆಂಬ ಎಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು.



# ಅಶೀತಿತಮೋಽಧ್ಯಾಯಃ

---

## ವೃಂದಾವನಮಾಹಾತ್ಮ್ಯಂ ಪ್ರಾರಭ್ಯತೇ

### ಮೋಹಿನ್ಯುವಾಚ

**ಮಥುರಾಯಾಸ್ತು ಮಾಹಾತ್ಮ್ಯಂ ವನಾನಾಂ ಚಾಪಿ ಮಾನದ ।**
**ಶ್ರುತಂ ವೃಂದಾವನಸ್ಯಾಪಿ ರಹಸ್ಯಂ ಕಿಂಚಿದೀರಯ ॥ ೧ ॥**

**ವೃಂದಾರಣ್ಯಂ ಭುವೋ ಬ್ರಹ್ಮನ್ ಕೀರ್ತಿರೂಪಂ ರಹೋಗತಂ ।**
**ತಚ್ಛ್ರೋತುಂ ಮಮ ವಾಂಛಾಸ್ತಿ ತನ್ನಿರೂಪಯ ವಿಸ್ತರಾತ್ ॥ ೨ ॥**

### ವಸುರುವಾಚ

**ಶೃಣು ದೇವಿ ರಹಸ್ಯಂ ಮೇ ವೃಂದಾರಣ್ಯಸಮುದ್ಭವಂ ।**
**ಯನ್ನ ಕಸ್ಮೈಚಿದಾಖ್ಯಾತಂ ಮಯಾ ಪ್ರಾಪ್ಯ ಗುರೂತ್ತಮಾತ್ ॥ ೩ ॥**

---

## ಎಂಬತ್ತನೆಯ ಅಧ್ಯಾಯ

೧. ಮೋಹಿನಿಯು ಹೇಳಿದಳು :—ಮಾನದಾತನಾದ ವಸುವೇ ! ಮಥುರೆ ಮತ್ತು ಅಲ್ಲಿರುವ ವನಗಳ ಮಾಹಾತ್ಮ್ಯೆಯನ್ನು ಕೇಳಿದೆನು. ವೃಂದಾವನದ ರಹಸ್ಯವನ್ನು ಸ್ವಲ್ಪ ಹೇಳು.

೨. ಬ್ರಾಹ್ಮಣನೇ ! ವೃಂದಾವನವು ಭೂಮಂಡಲಕ್ಕೆ ಕೀರ್ತಿರೂಪವು. ರಹಸ್ಯವಾಗಿರುವ ಅದರ ಮಹಿಮೆಯನ್ನು ಕೇಳಬೇಕೆಂದು ನನಗೆ ಬಯಕೆಯಿದೆ. ಅದನ್ನು ವಿಸ್ತಾರವಾಗಿ ನಿರೂಪಿಸು.

೩. ವಸುವು ಹೇಳಿದನು :—ದೇವೀ ! ರಹಸ್ಯವಾದ ವೃಂದಾವನದ ಮಹಿಮೆಯನ್ನು ನಾನು ಉತ್ತಮಗುರುಗಳಿಂದ ತಿಳಿದಿರುವೆನು. ಅಂದಿನಿಂದ ಇದುವರೆಗೂ ಅದನ್ನು ಯಾರಿಗೂ ಹೇಳಿಲ್ಲ. ಈಗ ನಿನಗೆ ಹೇಳುವೆನು ಕೇಳು,

ಗುರವೇ ಕಥಿತಂ ಭದ್ರೇ ನಾರದೇನ ಮಹಾತ್ಮನಾ ।
ವೃಂದಯಾ ನಾರದೇ ಪ್ರೋಕ್ತಂ ರಹಸ್ಯಂ ಗೋಪಿಕಾಪತೇಃ ॥ ೪ ॥

ತದಹಂ ಸಂಪ್ರವಕ್ಷ್ಯಾಮಿ ಜಗದುದ್ಧಾರಕಾರಣಂ ।
ಏಕದಾ ನಾರದೋ ಲೋಕಾನ್ ಪರ್ಯಟನ್ ಭಗವತ್ಪ್ರಿಯಃ ॥ ೫ ॥

ವೃಂದಾರಣ್ಯಂ ಸಮಾಸಾದ್ಯ ತಸ್ಥೌ ಪುಷ್ಪಸರಸ್ತಟೇ ।
ಪಶ್ಚಿಮೋತ್ತರತೋ ದೇವಿ ಮಾಥುರೇ ಮಂಡಲೇ ಸ್ಥಿತಂ ॥ ೬ ॥

ವೃಂದಾರಣ್ಯಂ ತುರೀಯಾಂಶಂ ಗೋಪಿಕೇಶರಹಸ್ಥಲಂ ।
ಗೋವರ್ಧನೋ ಯತ್ರ ಗಿರಿಃ ಸಖಿಸ್ಥಲಸಮೀಪತಃ ॥ ೭ ॥

ವೃಂದಾಯಾಸ್ತತ್ತಪೋರಣ್ಯಂ ನಂದಿಗ್ರಾಮಾನುಯಾಮುನಂ ।
ತಟೇ ತು ಯಾಮುನೇ ರಮ್ಯೇ ರಮ್ಯಂ ವೃಂದಾವನಂ ಸತಿ ॥ ೮ ॥

---

೪. ಭದ್ರೇ! ನಮ್ಮ ಗುರುಗಳಿಗೆ ಆ ಮಾಹಾತ್ಮ್ಯೆಯನ್ನು ಮಹಾತ್ಮರಾದ ನಾರದರು ಉಪದೇಶಿಸಿರುವರು. ಗೋಪಿಕಾಪತಿಯ ರಹಸ್ಯವನ್ನು ವೃಂದಾದೇವಿಯು ನಾರದರಿಗೆ ಹೇಳಿರುವಳು.

೫-೭. ಜಗದುದ್ಧಾರಮಾಡುವಂತಹ ಆ ವೃಂದಾವನರಹಸ್ಯವನ್ನು ನಾನು ನಿನಗೆ ಹೇಳುವೆನು.

ಒಂದು ದಿನ ಭಗವಂತನಿಗೆ ಪ್ರಿಯನಾದ ನಾರದಮುನಿಯು ಲೋಕಗಳನ್ನು ಸಂಚರಿಸುತ್ತಿರುವಾಗ ವೃಂದಾರಣ್ಯಕ್ಕೆ ಬಂದು ವಾಯುವ್ಯದಿಕ್ಕಿನಲ್ಲಿ ಪುಷ್ಪಸರೋವರದ ದಡದಲ್ಲಿದ್ದನು

ದೇವೀ! ಮಥುರಾಮಂಡಲದಲ್ಲಿರುವ, ಗೋಪೀಶನಾದ ಕೃಷ್ಣನ ರಹಸ್ಯಸ್ಥಳವೂ, ನಾಲ್ಕನೆಯ ಅಂಶವೂ ಆದ ವೃಂದಾವನವು ಮಥುರಾಮಂಡಲದಲ್ಲಿದೆ. ಅಲ್ಲಿ ಸಖಿಸ್ಥಾನದ ಹತ್ತಿರ ಗೋವರ್ಧನಗಿರಿಯಿದೆ.

೮. ವೃಂದೆಯ ಆ ತಪೋವನವು ಯಮುನಾತೀರದಲ್ಲಿ ನಂದಿಗ್ರಾಮವನ್ನನುಕರಿಸುವಂತಿದೆ. ಸಾಧ್ವೀ! ಮನೋಹರವಾದ ಯಮುನಾನದಿಯ ತೀರದಲ್ಲಿರುವ ಸುಂದರ ವೃಂದಾವನವು ಪುಣ್ಯಕರವಾದುದು.

ಪುಣ್ಯಂ ತತ್ರಾಪಿ ಸುಭಗೇ ಸುಪುಣ್ಯಂ ಕೌಸುಮಂ ಸರಃ ।
ವೃಂದಾಯಾಸ್ತು ತಟೇ ರಮ್ಯೇ ಆಶ್ರಮೋಽತಿಸುಖಾವಹಃ ॥ ೯ ॥

ನಿತ್ಯಂ ವಿಶ್ರಮತೇ ಯತ್ರ ಮಧ್ಯಾಹ್ನೇ ಸಖಿಭಿರ್ಹರಿಃ ।
ಮುಹೂರ್ತಂ ಸ ತು ವಿಶ್ರಮ್ಯ ಸ್ನಿಗ್ಧಛಾಯತರೋಸ್ತಲೇ ॥ ೧೦ ॥

ಶೀತಲಂ ಪುಷ್ಪಸರಸೋ ವಾರ್ಯುಪಸ್ಪೃಶ್ಯ ನಾರದಃ ।
ಕೃತ್ವಾ ಮಾಧ್ಯಾಹ್ನಿಕಂ ಕರ್ಮ ತಸ್ಥೌ ತತ್ರ ಸರಸ್ತಟೇ ॥ ೧೧ ॥

ತತ್ರ ವೃಂದಾಶ್ರಮೇ ರಮ್ಯೇ ಗೋಪ್ಯೋ ಗೋಪಾಶ್ಚ ಮೋಹಿನಿ ।
ಆಯಾಂತಿ ವರ್ಗಶೋ ಯಾಂತಿ ನಾರದಸ್ಯ ವಿಪಶ್ಯತಃ ॥ ೧೨ ॥

ಅಥೈವಂ ಯಾಮಮೇಕಂ ತು ತತ್ರ ಸ್ಥಿತ್ವಾ ತು ನಾರದಃ ।
ಪ್ರಹರಾರ್ಧಾವಶಿಷ್ಟೇಽಹ್ನಿ ವಿವೇಶಾಶ್ರಮಮದ್ಭುತಂ ॥ ೧೩ ॥

---

೯. ಸುಂದರಾಂಗೀ! ಅದರಲ್ಲಿಯೂ ಕುಸುಮಸರೋವರವು ಅತ್ಯಂತ ಪುಣ್ಯಕರವಾದುದು. ಮನೋಹರವಾದ ವೃಂದಾತೀರದಲ್ಲಿ ಸುಖಕರವಾದ ಆಶ್ರಮವಿದೆ.

೧೦. ಪ್ರತಿದಿನವೂ ಮಧ್ಯಾಹ್ನಕಾಲದಲ್ಲಿ ಶ್ರೀಕೃಷ್ಣನು ಅಲ್ಲಿ ತನ್ನ ಸ್ನೇಹಿತರೊಡನೆ ವಿಶ್ರಾಂತಿಹೊಂದುವನು. ಅವನು ಒಂದುಮುಹೂರ್ತಕಾಲ ಅಲ್ಲಿರುವ ವೃಕ್ಷದ ನಿಬಿಡಛಾಯೆಯಲ್ಲಿ ವಿಶ್ರಮಿಸಿಕೊಳ್ಳುತ್ತಿದ್ದನು.

೧೧. ಶೀತಲವಾದ ಆ ಪುಷ್ಪಸರೋವರದ ನೀರಿನಲ್ಲಿ ನಾರದನು ಕೈಕಾಲುಗಳನ್ನು ತೊಳೆದುಕೊಂಡು ಮಾಧ್ಯಾಹ್ನಿಕಕರ್ಮವನ್ನಾಚರಿಸಿ ಸರೋವರದ ತೀರದಲ್ಲಿರುತ್ತಿದ್ದನು.

೧೨. ಮೋಹಿನೀ! ನಾರದನು ನೋಡುತ್ತಿರುವ ಹಾಗೆಯೇ ರಮ್ಯವಾದ ಆ ವೃಂದಾಶ್ರಮಕ್ಕೆ ಗೋಪಿಕಾಸ್ತ್ರೀಯರು, ಗೋಪಾಲಕರೂ ಸಹ ತಂಡ ತಂಡವಾಗಿ ಬರುತ್ತಿದ್ದರು.

೧೩. ನಾರದನು ಹಾಗೆಯೇ ಒಂದು ಯಾಮದವರೆಗೆ ಅಲ್ಲಿಯೇ ಇದ್ದು ಸಾಯಂಕಾಲದ ಹೊತ್ತಿಗೆ ಅದ್ಭುತವಾದ ಆಶ್ರಮದೊಳಕ್ಕೆ ಪ್ರವೇಶಿಸಿದನು.

ಯತ್ರ ವೃಂದಾ ಸ್ಥಿತಾ ದೇವೀ ಕೃಷ್ಣಭಕ್ತಿಪರಾಯಣಾ |
ಸಮಾಗತಾನಾಂ ಸತ್ಕಾರಂ ವಿದಧಾನಾ ಫಲಾದಿಭಿಃ || ೧೪ ||

ತಾಂ ದೃಷ್ಟ್ವಾ ತಾಪಸೀಂ ಭದ್ರೇ ನಾರದಃ ಸಾಧುಸಂಮತಃ |
ನಮಸ್ಕೃತ್ಯ ವಿನಮ್ರಾಂಗೋ ನಿಷಸಾದ ಧರಾತಲೇ || ೧೫ ||

ತತಃ ಸಾ ಧ್ಯಾನಯೋಗಾಂತೇ ಸಮುನ್ಮೀಲ್ಯ ವಿಲೋಚನೇ |
ಆಸನಂ ಸಂದಿದೇಶಾಥೋಽತಿಥಯೇ ನಾರದಾಯ ವೈ || ೧೬ ||

ತತಃ ಸ ನಾರದಸ್ತತ್ರ ಸತ್ಕೃತೋ ವೃಂದಯಾವಸತ್ |
ರಹಸ್ಯಂ ಗೋಪಿಕೇಶಸ್ಯ ತಸ್ಯಾ ಜಿಜ್ಞಾಸುರಾದರಾತ್ || ೧೭ ||

ತಯಾ ಕೃತಾಂ ಸತ್ಕೃತಿಂ ತು ಸ್ವೀಕೃತ್ಯ ವಿಧಿನಂದನಃ |
ಸುಪ್ರಸನ್ನಾಂತರಾಂ ವೃಂದಾಂ ಜ್ಞಾತ್ವಾ ಹಾರ್ದಂ ವ್ಯಜಿಜ್ಞಪತ್ || ೧೮ ||

೧೪. ಅಲ್ಲಿ ಕೃಷ್ಣಭಕ್ತಿಭರಿತಳಾದ ವೃಂದಾದೇವಿಯು ಬಂದವರಿಗೆ ಹಣ್ಣುಹಂಪಲುಗಳನ್ನು ಕೊಟ್ಟು ಸತ್ಕಾರಮಾಡುತ್ತಾ ವಾಸವಾಗಿದ್ದಳು.

೧೫. ಭದ್ರೇ! ತಾಪಸಿಯಾದ ಆ ವೃಂದಾದೇವಿಯನ್ನು ನೋಡಿ ಸಾಧುಸಮ್ಮತನಾದ ನಾರದಮುನಿಯು ಆ ದೇವಿಗೆ ನಮಸ್ಕರಿಸಿ ನೆಲದಮೇಲೆ ಅಡ್ಡಬಿದ್ದನು.

೧೬. ಧ್ಯಾನಯೋಗವು ಮುಗಿದಮೇಲೆ ಆ ದೇವಿಯು ಕಣ್ತೆರೆದು ಅತಿಥಿಯಾಗಿ ಬಂದಿದ್ದ ನಾರದಮುನಿಗೆ ಆಸನವನ್ನು ಕೊಟ್ಟಳು.

೧೭. ಹಾಗೆ ವೃಂದಾದೇವಿಯಿಂದ ಸತ್ಕರಿಸಲ್ಪಟ್ಟವನಾಗಿ ನಾರದಮುನಿಯು ಗೋಪಿಕೇಶನಾದ ಕೃಷ್ಣ ಮತ್ತು ಆ ವೃಂದಾದೇವಿಯರ ರಹಸ್ಯವನ್ನು ತಿಳಿಯಬೇಕೆಂಬ ಅಭಿಲಾಷೆಯಿಂದ ಅಲ್ಲಿ ನೆಲೆಸಿದನು.

೧೮. ಬ್ರಹ್ಮಪುತ್ರನಾದ ನಾರದನು ವೃಂದಾದೇವಿಯು ಮಾಡಿದ ಸತ್ಕಾರವನ್ನು ಆದರದಿಂದ ಸ್ವೀಕರಿಸಿ ಆಕೆಯು ಸಂತುಷ್ಟಚಿತ್ತಳಾಗಿರುವುದನ್ನು ತಿಳಿದು ತನ್ನ ಮನೋಗತವನ್ನು ವಿಜ್ಞಾಪಿಸಿದನು.

ಸಾ ತು ತದ್ವಾಂಛಿತಂ ಜ್ಞಾತ್ವಾ ಧ್ಯಾನಯೋಗೇನ ಭಾಮಿನಿ |
ಸ್ವಸಖೀಂ ಮಾಧವೀಂ ತತ್ರ ಸಮಾಹೂಯಾಬ್ರವೀದಿದಂ || ೧೯ ||

ಮಾಧವಿ ಪ್ರಿಯಮೇತಸ್ಯ ನಾರದಸ್ಯ ಮಹಾತ್ಮನಃ |
ಸಂಪಾದಯ ಯಥಾ ಮಹ್ಯಮಾಶ್ರಮಸ್ಯ ಸುಪುಣ್ಯತಾ || ೨೦ ||

ಸ್ವಾಶ್ರಮಂ ಹ್ಯಾಗತಸ್ಯೈವ ಯೋ ನ ಸಂಪಾದಯೇತ್ಪ್ರಿಯಂ |
ನಿಷ್ಫಲೋ ಹ್ಯಾಶ್ರಮಸ್ತಸ್ಯ ಘೋರರಾಜಗೃಹೋಪಮಃ || ೨೧ ||

ಅಥ ಸಾ ಮಾಧವೀ ದೇವೀ ನೀತ್ವಾ ನಾರದಮಾಜ್ಞಯಾ |
ಸ್ವಾಧಿಷ್ಠಾಯಾಸ್ತು ವೃಂದಾಯಾಃ ಸರಸಸ್ತಟಮುತ್ತಮಂ || ೨೨ ||

ಪಶ್ಚಿಮೋತ್ತರತಸ್ತಸ್ಮಿನ್ ಸ್ನಾತುಂ ತಂ ಸಂದಿದೇಶ ಹ |
ತತಸ್ತದಾಜ್ಞಯಾ ಭದ್ರೇ ನಾರದೋ ದೇವದರ್ಶನಃ || ೨೩ ||

---

೧೯. ಭಾಮಿನೀ! ಆ ವೃಂದಾದೇವಿಯಾದರೋ ಮುನಿಯ ಅಭೀಷ್ಟವನ್ನರಿತು ಧ್ಯಾನಯೋಗದಿಂದ ತನ್ನ ಸಖಿಯಾದ ಮಾಧವಿಯನ್ನು ಅಲ್ಲಿಗೆ ಕರೆಯಿಸಿ ಹೀಗೆ ಹೇಳಿದಳು.

೨೦. ಮಾಧವೀ! ಮಹಾತ್ಮನಾದ ನಾರದಮುನಿಗೆ ಪ್ರಿಯವಾದುದು ಲಭಿಸುವಂತೆ ಮಾಡು. ಅದರಿಂದ ನನಗೆ ಬಹುಪುಣ ಬರುವುದು ಈ ಆಶ್ರಮವೂ ಪುಣ್ಯಸ್ಥಾನವಾಗುವುದು.

೨೧. ತನ್ನ ಆಶ್ರಮಕ್ಕೆ ಬಂದವರ ಅಭಿಲಾಷೆಯನ್ನು ಪೂರ್ಣಮಾಡದಿದ್ದರೆ ಅಂತಹವನ ಆಶ್ರಮವು ನಿಷ್ಫಲವು. ಅದು ಘೋರರಾಜನ ಮನೆಗೆ ಸಮಾನವಾಗುವುದು ಎಂದು ಹೇಳಿದಳು.

೨೨. ಬಳಿಕ ಆ ಮಾಧವೀದೇವಿಯು ತನ್ನ ಒಡೆಯಳಾದ ವೃಂದಾದೇವಿಯ ಅಪ್ಪಣೆಯ ಮೇರೆಗೆ ನಾರದಮುನಿಯನ್ನು ಉತ್ತಮವಾದ ಸರೋವರದ ತೀರಕ್ಕೆ ಕರೆದುಕೊಂಡು ಹೋದಳು.

೨೩-೨೪. ಬಳಿಕ ವಾಯುವ್ಯದಿಕ್ಕಿನಲ್ಲಿರುವ ಆ ಸರೋವರದಲ್ಲಿ ಸ್ನಾನ ಮಾಡಬೇಕೆಂದು ನಾರದನಿಗೆ ಹೇಳಿದಳು. ಭದ್ರೇ! ಅನಂತರ ದೇವರನ್ನು

ನಿಮಮಜ್ಜ ಜಲೇ ತಸ್ಮಿನ್ ಧ್ಯಾಯಂಚ್ಛ್ರೀಕೃಷ್ಣಸಂಗಮಂ ।
ನಿಮಜ್ಜಮಾನೇ ಸರಸಿ ನಾರದೇ ಮುನಿಸತ್ತಮೇ ॥ ೨೪ ॥

ಯಯೌ ವೃಂದಾಂತಿಕಂ ಭದ್ರೇ ಸಂವಿಧಾಯ ತದೀಪ್ಸಿತಂ ।
ಅಥಾಸೌ ನಾರದಸ್ತತ್ರ ಸನ್ನಿಮಜ್ಯೋದ್ಗತಸ್ತದಾ ॥ ೨೫ ॥

ದದರ್ಶ ನಿಜಮಾತ್ಮಾನಂ ವನಿತಾರೂಪಮದ್ಭುತಂ ।
ತತಸ್ತು ಪರಿತೋ ವೀಕ್ಷ್ಯ ನಾರದೀ ಸಾ ಶುಚಿಸ್ಮಿತಾ ॥ ೨೬ ॥

ಪೂರ್ವೋತ್ತರಾಯಾಂ ತಿಷ್ಠಂತೀ ಆಹ್ವಯಂತೀ ಕರೇಂಗಿತೈಃ ।
ದದರ್ಶ ವನಿತಾಂ ರಮ್ಯಾಂ ಭೂಷಿತಾಂ ಭೂಷಣೋತ್ತಮೈಃ ॥ ೨೭ ॥

ತತಸ್ತಯಾ ಸಮಾಹೂತಾ ನಾರದೀ ಸಾ ತದಂತಿಕಂ ।
ಪ್ರಾಪ್ತಾ ವಿಶ್ವಾಸಿತಾ ಸ್ವಸ್ಥಾ ನೀತಾ ಚಾಪಿ ಸ್ಥಲಾಂತರಂ ॥ ೨೮ ॥

---

ಸಾಕ್ಷಾತ್ಕರಿಸಿಕೊಂಡಿರುವ ನಾರದನು ಮಾಧವಿಯ ಅಪ್ಪಣೆಯ ಪ್ರಕಾರ ಶ್ರೀಕೃಷ್ಣ ಸಂಗಮವನ್ನು ಧ್ಯಾನಿಸುತ್ತಾ ಆ ನೀರಿನಲ್ಲಿ ಮುಳುಗಿದನು.

೨೪-೨೬. ಭದ್ರೇ! ಮುನಿಶ್ರೇಷ್ಠನಾದ ನಾರದನು ಸರೋವರದಲ್ಲಿ ಮುಳುಗುತ್ತಿರಲಾಗಿ ಅವನ ಅಭಿಲಷಿತವು ನೆರವೇರುವಂತೆ ಸಂಧಾನಮಾಡಿ ಮಾಧವಿಯು ವೃಂದಾದೇವಿಯ ಬಳಿಗೆ ಬಂದಳು. ಈ ನಾರದನು ಅಲ್ಲಿ ಮುಳುಗಿ ಎದ್ದಮೇಲೆ ತಾನು ಅದ್ಭುತ ಸ್ತ್ರೀರೂಪ ಹೊಂದಿರುವುದನ್ನು ಕಂಡನು.

೨೬-೨೭. ಬಳಿಕ ಮಂದಹಾಸಯುಕ್ತಳಾದ ಆ ನಾರದಿಯು ಸುತ್ತಲೂ ನೋಡಲಾಗಿ ಉತ್ತಮವಾದ ಆಭರಣಗಳಿಂದ ಅಲಂಕೃತಳಾದ, ಈಶಾನ್ಯದಿಕ್ಕಿನಲ್ಲಿ ನಿಂತಿರುವ, ಕೈ ಮತ್ತು ಇಂಗಿತಗಳಿಂದ ಕರೆಯುತ್ತಿರುವ ಸುಂದರಸ್ತ್ರೀಯೊಬ್ಬಳನ್ನು ಕಂಡಳು.

೨೮. ಅನಂತರ ಆ ಸ್ತ್ರೀಯಿಂದ ಕರೆಯಿಸಿಕೊಳ್ಳಲ್ಪಟ್ಟ ನಾರದಿಯು ಆಕೆಯ ಹತ್ತಿರಕ್ಕೆ ಹೋಗಿ ಆದರಿಸಲ್ಪಟ್ಟವಳಾಗಿ ಬೇರೆ ಸ್ಥಳಕ್ಕೆ ಒಯ್ಯಲ್ಪಟ್ಟಳು.

ರತ್ನಪ್ರಾಕಾರಖಚಿತೇ ಭವನೇ ವನಿತಾಕುಲೇ |
ಪ್ರಾಪಯ್ಯ ತಾಂ ನಿವೃತ್ತಾಸೌ ಸಾಪಿ ತಾಭಿಃ ಸುಸತ್ಕೃತಾ || ೨೯ ||
ವಿಶಾಖಾದಿಸಖೀವೃಂದೈರಾಶ್ವಾಸ್ಯಾಽಪ್ಯೇಕಯಾ ತತಃ |
ಪ್ರಾಪಿತಾಭ್ಯಂತರಂ ದೇವಿ ಸಾಪಶ್ಯದ್ಗೋಪಿಕೇಶ್ವರಂ || ೩೦ ||
ದೂತ್ಯಾಂ ತಸ್ಯಾಂ ನಿವೃತ್ತಾಯಾಂ ಸಮಾಹೂತಾ ಪ್ರಿಯೇಣ ಸಾ |
ನಾರದೀ ಪ್ರಣಿಪತ್ಯೇಶಂ ಲಜ್ಜಾನಮ್ರಾಂತಿಕಂ ಯಯೌ || ೩೧ ||
ರಸಿಕೇನ ಸಮಾಶ್ಲಿಷ್ಯ ರಮಯಿತ್ವಾ ವಿಸರ್ಜಿತಾ |
ಕ್ರಮೇಣೈವ ತು ಸಂಪ್ರಾಪ್ತಾ ಸಾ ಪುನಃ ಕೌಸುಮಂ ಸರಃ || ೩೨ ||
ಸಾ ಪುನಸ್ತತ್ರ ಮಾಧವ್ಯಾ ಮಜ್ಜಿತಾ ದಕ್ಷಪಶ್ಚಿಮೇ |
ಪುಂಭಾವಮಭಿಸಂಪ್ರಾಪ್ತೋ ನಾರದೋ ವಿಸ್ಮಿತೋಽಭವತ್ || ೩೩ ||

---

೨೯. ಹೀಗೆ ಆ ನಾರದಿಯನ್ನು ರತ್ನಖಚಿತಪ್ರಾಕಾರಗಳಿಂದ ಯುಕ್ತವಾದ, ನಾರೀಸಮೂಹಗಳಿಂದ ತುಂಬಿರುವ ಮಂದಿರಕ್ಕೆ ಕರೆದುಕೊಂಡು ಹೋಗಿ ಆ ನಾರಿಯು ನಿವೃತ್ತಳಾದಳು.

೩೦. ಆ ನಾರದಿಯೂ ಸಹ ಅವರಿಂದ ಸತ್ಕೃತಳಾಗಿ ವಿಶಾಖಾ ಮುಂತಾದ ಸಖೀಜನರಿಂದ ಸಮಾಧಾನಪಡಿಸಲ್ಪಟ್ಟು ಒಬ್ಬ ನಾರಿಯ ಸಹಾಯದಿಂದ ಒಳಕ್ಕೆ ಪ್ರವೇಶಮಾಡಿದಳು. ದೇವೀ! ಅಲ್ಲಿ ನಾರದಿಯು ಗೋಪಿಕೇಶ್ವರನನ್ನು ನೋಡಿದಳು.

೩೧. ನಾರದಿಯನ್ನು ಒಳಕ್ಕೆ ಕರೆದುಕೊಂಡು ಬಂದ ದೂತಿಯು ಹೊರಟುಹೋದನಂತರ ಪ್ರಿಯನಾದ ಕೃಷ್ಣನಿಂದ ಕರೆಯಿಸಿಕೊಳ್ಳಲ್ಪಟ್ಟು ಆ ನಾರದಿಯು ಸ್ವಾಮಿಗೆ ನಮಸ್ಕಾರಮಾಡಿ ನಾಚಿಕೆಯಿಂದ ತಲೆಬಾಗಿಕೊಂಡು ಕೃಷ್ಣನ ಸಮೀಪಕ್ಕೆ ಹೋದಳು.

೩೨. ರಸಿಕನಾದ ಅವನು ನಾರದಿಯನ್ನು ಆಲಿಂಗನೆಮಾಡಿಕೊಂಡು ರಮಿಸಿಬಿಟ್ಟನು. ಅವಳು ಕ್ರಮವಾಗಿ ಪುನಃ ಕುಸುಮಸರೋವರಕ್ಕೆ ಬಂದಳು.

೩೩. ಅಲ್ಲಿ ಮಾಧವಿಯು ನಾರದಿಯನ್ನು ನೈಋತ್ಯದಿಗ್ಭಾಗದಲ್ಲಿ ಮುಳುಗಿಸಿ ಸ್ನಾನಮಾಡಿಸಿದಳು. ಕೂಡಲೇ ಪುರುಷರೂಪವು ಬಂದಿತು. ನಾರದನು ಇದನ್ನು ನೋಡಿ ವಿಸ್ಮಯಗೊಂಡನು.

ತತೋ ವೃಂದಾಜ್ಞಯಾ ತತ್ರ ಸರಸಃ ಪೂರ್ವದಕ್ಷಿಣೇ |
ಏಕಾಂತಂ ತಪ ಆಸ್ಥಾಯ ತಸ್ಥೌ ತತ್ಪ್ರೇಕ್ಷಣೋತ್ಸುಕಃ || ೩೪ ||

ಏವಂ ತಪಸ್ಯತಸ್ತಸ್ಯ ನಾರದಸ್ಯ ಮಹಾತ್ಮನಃ |
ವೃಂದಯಾ ಪ್ರೇಷಿತೈರ್ವೃತ್ತಿಂ ನಿಜಾಂ ಕಲ್ಪಯತಃ ಫಲೈಃ || ೩೫ ||

ಏಕದಾ ನಾರದಸ್ತತ್ರ ವಿಚರನ್ನಾಶ್ರಮಾಂತರೇ |
ಶುಶ್ರಾವ ಸೌಭಗಂ ಶಬ್ದಂ ಕಯಾಚಿತ್ಸಮುದೀರಿತಂ || ೩೬ ||

ತಚ್ಛ್ರುತ್ವಾ ಕೌತುಕಾವಿಷ್ಟೋ ನಾರದೋಽಧ್ಯಾತ್ಮದರ್ಶನಃ |
ವಿಚಿನ್ವನ್ವನಮಾಸ್ಥಾಯ ನ ದದರ್ಶ ಚ ತತ್ಪದಂ || ೩೭ ||

ತತಃ ಸ ವಿಸ್ಮಯಾವಿಷ್ಟೋ ವೃಂದಾಂ ಪಪ್ರಚ್ಛ ಸಾದರಂ |
ಸಾಪಿ ತಸ್ಮೈ ಸಮಾಚಖ್ಯೌ ಕುಬ್ಜಾವೃತ್ತಾಂತಮಾದಿತಃ || ೩೮ ||

---

೩೪. ತರುವಾಯ ವೃಂದಾದೇವಿಯು ಅಪ್ಪಣೆಯ ಮೇರೆಗೆ ಅಲ್ಲಿಯ ರಹಸ್ಯವನ್ನು ನಾರದನು ನೋಡಬೇಕೆಂಬ ಕುತೂಹಲದಿಂದ ಅದರ ಆಗ್ನೇಯ ದಿಗ್ಭಾಗದಲ್ಲಿ ಏಕಾಂತವಾಗಿ ತಪಸ್ಸು ಮಾಡುತ್ತಿದ್ದನು.

೩೫. ಈ ರೀತಿಯಾಗಿ ತಪಸ್ಸಿನಲ್ಲಿ ತೊಡಗಿದ ಮಹಾತ್ಮನಾದ ಆ ನಾರದನು ವೃಂದಾದೇವಿಯು ಕಳುಹಿಸಿದ ಹಣ್ಣುಗಳಿಂದ ತನ್ನ ಜೀವನವನ್ನು ನಡೆಯಿಸಿಕೊಳ್ಳುತ್ತಿದ್ದನು.

೩೬. ಒಂದಾನೊಂದು ದಿನ ನಾರದನು ಅಲ್ಲಿ ಸಂಚರಿಸುತ್ತಿರಲು ಆಶ್ರಮದ ಒಳಗೆ ಯಾರೋ ಒಬ್ಬ ನಾರೀಮಣಿಯು ಹೇಳಿದ ಮನೋಹರಶಬ್ದವನ್ನು ಕೇಳಿದನು.

೩೭. ಅಧ್ಯಾತ್ಮಜ್ಞಾನಿಯಾದ ನಾರದನು ಅದನ್ನು ಕೇಳಿ ಅಚ್ಚರಿಗೊಂಡು ವನದಲ್ಲಿ ಹುಡುಕಿದನು. ಆದರೂ ಆ ಸ್ಥಳವು ಕಾಣಿಸಲಿಲ್ಲ.

೩೮. ಬಳಿಕ ವಿಸ್ಮಿತನಾಗಿ ನಾರದನು ವಿಶ್ವಾಸದಿಂದ ವೃಂದಾದೇವಿಯನ್ನು ಕೇಳಿದನು. ಆ ವೃಂದಾದೇವಿಯು ಕುಬ್ಜೆಯ ವೃತ್ತಾಂತವನ್ನು ಮೊದಲಿನಿಂದ ನಾರದನಿಗೆ ತಿಳಿಸಿದಳು.

ಭೂಮ್ಯಂತರಗೃಹಸ್ಥಾನಾ ಕುಬ್ಜಾ ನಾರೀ ವರಾ ವಿಭೋಃ ।
ಕಾಮಮೇಕಾಂತಕೇ ಸ್ವೇಶಂ ಸಮುಪಾಚರತಿ ಸ್ವಯಂ ॥ ೩೯ ॥

ನ ತಾಂ ಕೋಽಪಿ ಮುನಿಶ್ರೇಷ್ಠ ವಿಜಾನಾತಿ ಮಯಾ ವಿನಾ ।
ತತಃ ಸಂಕ್ಷೇಪತೋ ವಕ್ಷ್ಯೇ ಯಂ ದಿದೃಕ್ಷುಸ್ತಪೋಽಚರಃ ॥ ೪೦ ॥

ಪ್ರಾತಃ ಪ್ರಬೋಧಿತೋ ಮಾತ್ರಾ ಸ್ನಾತ್ವಾ ಭುಕ್ತ್ವಾಽನುಗಾನ್ವಿತಃ ।
ಗೋಚಾರಣಾಯ ವಿಪಿನೇ ವೃಂದಾವನ ಉಪಾವಿಶತ್ ॥ ೪೧ ॥

ಸಖಿಭಿರ್ಗೋಪಕೈಃ ಕ್ರೀಡಾಂ ಕುರ್ವನ್ ಸಂವಾರಯಂಶ್ಚ ಗಾಃ ।
ದ್ವಿತ್ರೈಃ ಪ್ರಿಯಸಖೈರತ್ರ ಮಮಾಶ್ರಮ ಉಪಾವ್ರಜತ್ ॥ ೪೨ ॥

ಮಯಾ ಪ್ರಕಲ್ಪಿತೈರ್ವತ್ಸ ಭವನೇ ಸಾರ್ವಕಾಮಿಕೇ ।
ಫಲಮೂಲಾದಿಭಿರ್ಭಕ್ಷ್ಯೈಸ್ತರ್ಪಿತಃ ಪ್ರಿಯಯಾಸ್ವಪತ್ ॥ ೪೩ ॥

---

೩೯. ಕುಬ್ಜೆಯು ಸ್ವಾಮಿಯಾದ ಕೃಷ್ಣನ ನಾರೀಮಣಿಯು, ಅವಳು ಭೂಮಿಯ ಒಳಭಾಗದಲ್ಲಿ ಮನೆಯನ್ನು ಮಾಡಿಕೊಂಡಿರುವಳು. ಅಲ್ಲಿಯೇ ತನ್ನ ಪತಿಗೆ ಯಥೇಷ್ಟವಾಗಿ ತಾನೇ ಉಪಚರಿಸುತ್ತಿರುವಳು.

೪೦-೪೧. ಮುನಿಶ್ರೇಷ್ಠನೇ! ಆ ಕುಬ್ಜಾದೇವಿಯನ್ನು ನಾನು ಹೊರತು ಯಾರೂ ತಿಳಿದಿಲ್ಲ. ಆದಕಾರಣ ಸಂಕ್ಷೇಪವಾಗಿ ಹೇಳುವೆನು. ನೀನು ಯಾರ ದರ್ಶನಕಾಂಕ್ಷಿಯಾಗಿ ತಪಸ್ಸನ್ನಾಚರಿಸುತ್ತಿರುವೆಯೋ, ಆ ಶ್ರೀಕೃಷ್ಣನು ಪ್ರಾತಃ ಕಾಲದಲ್ಲೆದ್ದು ತಾಯಿಯಿಂದ ಸ್ನಾನಮಾಡಿಸಿಕೊಂಡ ಬಳಿಕ ಭಕ್ತರು ಮತ್ತು ಅನುಚರರ ಸಹಿತನಾಗಿ ಹಸುಗಳನ್ನು ಮೇಯಿಸುವುದಕ್ಕಾಗಿ ವನಕ್ಕೆ ಹೊರಟು ವೃಂದಾವನದಲ್ಲಿ ಕುಳಿತುಕೊಳ್ಳುವನು.

೪೨. ಅಲ್ಲಿ ಸ್ನೇಹಿತರಾದ ಗೋಪಾಲಕರ ಸಂಗಡ ಆಟವಾಡುತ್ತಾ ಗೋವುಗಳನ್ನು ತಡೆಯುತ್ತಾ ಇಬ್ಬರುಮೂವರು ಪ್ರಿಯಸಖರಿಂದ ಕೂಡಿ ನನ್ನ ಈ ಆಶ್ರಮಕ್ಕೆ ಬರುವನು.

೪೩. ವತ್ಸಾ! ಸಾರ್ವಕಾಮಿಕಭವನದಲ್ಲಿ ನಾನು ಸಿದ್ಧಪಡಿಸಿದ್ದ ಫಲ, ಗೆಡ್ಡೆ ಮುಂತಾದ ಉಪಹಾರದ್ರವ್ಯಗಳನ್ನು ಸ್ವೀಕರಿಸಿ ತೃಪ್ತನಾಗಿ ಪ್ರಿಯೆಯೊಡನೆ ಮಲಗುವನು.

ಸುಸಖ್ಯಾ ರಾಧಯಾ ತತ್ರ ಸೇವ್ಯಮಾನೋ ವ್ರಜಪ್ರಿಯಃ ।
ಸಾರ್ಧಯಾಮಂ ವಿಹರತಿ ನಿಕುಂಜೇಷು ಪೃಥಕ್ಪೃಥಕ್ ॥ ೪೪ ॥

ರಾಧಾದಿಭಿಸ್ತತ್ರ ಸುಪ್ತೋ ವೀಜಿತಃ ಶಯನಂ ಗತಃ ।
ಸಾರ್ಧಯಾಮೇ ಸ್ವಯಂ ಬುದ್ಧೋ ನಿಜಾಃ ಸಂಮಾನ್ಯ ತಾಃ ಪ್ರಿಯಾಃ ॥

ಗೋಪೈರ್ಗೋಭಿರ್ವೃತಃ ಸಾಯಂ ವ್ರಜಂ ಯಾತಿ ಪ್ರಹರ್ಷಿತಃ ।
ಸಖ್ಯಃ ಸಖ್ಯಸ್ಥಲಂ ಪ್ರಾಪ್ಯ ಪ್ರಿಯಾಂ ಸಂಚರ್ಯ ರಾಧಿಕಾಂ ॥ ೪೬ ॥

ತಯಾ ಸಹ ವಿಶಾಲಾಕ್ಷ್ಯಃ ಸ್ವಗೇಹಾನ್ಯಾಂತಿ ಚಾನ್ವಹಂ ।
ಏವಂ ಗತಾಗತಂ ಕುರ್ವಂಲ್ಲೀಲಾಂ ನಿತ್ಯಾಮುಪಾಗತಃ ॥ ೪೭ ॥

ಮಯೈವ ದೃಶ್ಯತೇ ವತ್ಸ ನಾಪಿ ಬ್ರಹ್ಮಭವಾದಿಭಿಃ ।
ಮಯಾಪ್ಯಲಕ್ಷಿತಂ ವತ್ಸ ಕುಬ್ಜಾಸಂಕೇತವೈಭವಂ ॥ ೪೮ ॥

---

೪೪. ಅಲ್ಲಿ ವ್ರಜಪ್ರಿಯನು ಒಳ್ಳೆಯ ಸಖಿಯಾದ ರಾಧಾದೇವಿಯಿಂದ ಸೇವಿಸಲ್ಪಡುವವನಾಗಿ ಬೇರೆಬೇರೆ ಲತಾಗೃಹಗಳಲ್ಲಿ ಒಂದೂವರೆ ಯಾಮಪರ್ಯಂತವಾಗಿ ವಿಹರಿಸುವನು.

೪೫-೪೬. ಅಲ್ಲಿ ಮಲಗಿ ರಾಧಾ ಮುಂತಾದವರಿಂದ ಬೀಸಿಕೊಳ್ಳಲ್ಪಡುತ್ತಾ ನಿದ್ರಿಸುವನು. ಒಂದೂವರೆಯಾಮವಾದನಂತರ ತಾನೇ ಎದ್ದು ತನ್ನ ಆ ಪ್ರಿಯೆಯರನ್ನೆಲ್ಲಾ ಸಮಾಧಾನಪಡಿಸಿ ಗೋಪಗೋಪಿಯರ ಸಂಗಡ ಸಂತೋಷವಾಗಿ ಸಾಯಂಕಾಲಕ್ಕೆ ಸರಿಯಾಗಿ ಗೋಕುಲಕ್ಕೆ ಹೋಗುವನು- ಅಲ್ಲಿ ಪ್ರಿಯೆಯಾದ ರಾಧೆಯನ್ನು ಕರೆದುಕೊಂಡು ಸಖಿಯರನ್ನು ಅವರ ಸ್ಥಳಕ್ಕೆ ತಲಪಿಸುವನು.

೪೭. ಆ ರಾಧೆಯೊಡನೆ ವಿಶಾಲನೇತ್ರೆಯರಾದ ಪ್ರಿಯೆಯರು ಹೀಗೆ ಪ್ರತಿದಿನವೂ ತಮ್ಮ ಮನೆಗಳಿಗೆ ಹೋಗುವರು. ಈ ರೀತಿಯಾಗಿ ಹೋಗಿ ಬರುತ್ತಾ ಕೃಷ್ಣನು ಯಾವಾಗಲೂ ಲೀಲಾವಿಲಾಸವನ್ನು ಮಾಡುತ್ತಿರುವನು.

೪೮. ಇವೆಲ್ಲವನ್ನೂ ನಾನು ಮಾತ್ರ ನೋಡುತ್ತಿರುವೆನು. ವತ್ಸಾ! ಇವನ ಲೀಲೆಯನ್ನು ಬ್ರಹ್ಮರುದ್ರಾದಿಗಳೂ ಸಹ ನೋಡಲಾರರು. ಕುಬ್ಜೆಯ ಸಂಕೇತವೈಭವವನ್ನಾದರೋ ನಾನೂ ಸಹ ಸರಿಯಾಗಿ ತಿಳಿದಿಲ್ಲ.

ಪ್ರೀತಪ್ರಿಯೋಕ್ತ್ಯಾ ಜಾನಾಮಿ ಸುಗೋಪ್ಯಂ ಪ್ರವದಾಮಿ ತೇ ।
ಅಂಗರಾಗಾರ್ಪಣಾತ್ಪುಣ್ಯಾತ್ಪ್ರಾಪ್ತಾ ಸಂಕೇತಮುತ್ತಮಂ ॥ ೪೯ ॥

ಸದಾ ಸಾ ಸೇವನವ್ಯಗ್ರಾ ಸೈಕೈಕೇನಾಪ್ಯನೇಕಧಾ ।
ಶತಕೋಟಿಮಿತಾನ್ಯೇವಂ ಮಿಥುನಾನಿ ವಸಂತಿ ಹಿ ॥ ೫೦ ॥

ಕುಬ್ಜಾಕೃಷ್ಣಾನುರೂಪಾಣಿ ನಾನಾಕ್ರೀಡಾಪರಾಣಿ ಚ ।
ಸಂಭೂತಾನ್ಯಾದ್ಯಮಿಥುನಾತ್ ಸ್ಥಾವರಂ ಭಾವಯಂತ್ಯಪಿ ॥ ೫೧ ॥

ಗತಾಗತವಿಹೀನಾನಿ ನಿತ್ಯಂ ನವನವಾನಿ ಚ ।
ತದಗಮ್ಯಂ ತೃತೀಯಸ್ಯ ದ್ವಿತೀಯಸ್ಯೈಕತಾಂ ಗತಂ ॥ ೫೨ ॥

ರೂಪಂ ವಿಲಕ್ಷಣಂ ವಿಪ್ರ ಸೃಷ್ಟಿಸ್ಥಿತಿಲಯೈಕಲಂ ।
ಏಕೈವಾಹಂ ವಿಜಾನಾಮಿ ಶ್ರುತಂ ಶ್ರುತ್ವಾ ತ್ವಮಪ್ಯಥ ॥ ೫೩ ॥

---

೪೯. ಪ್ರಿಯನು ಸಂತುಷ್ಟನಾದಾಗ ಆ ವೈಭವವನ್ನು ಹೇಳಿರುವನು. ಅದು ಅತ್ಯಂತ ಗೋಪ್ಯವು ಆದರೂ ನಿನಗೆ ನಾನು ತಿಳಿದಿರುವುದನ್ನು ಹೇಳುವೆನು.

ಕುಬ್ಜೆಯು ಅಂಗರಾಗವನ್ನರ್ಪಿಸಿದ ಪುಣ್ಯದಿಂದ ಆ ಉತ್ತಮ ಸಂಕೇತವನ್ನು ಪಡೆದಿರುವಳು.

೫೦-೫೨. ಆ ಕುಬ್ಜೆಯು ಯಾವಾಗಲೂ ಕೃಷ್ಣಸೇವೆಯಲ್ಲಿಯೇ ನಿರತಳಾಗಿರುವಳು. ಕೃಷ್ಣನು ಒಬ್ಬನೇ ಆಗಿದ್ದರೂ ಅನೇಕ ರೂಪಗಳನ್ನು ತಾಳಿರುವನು. ಅದಕ್ಕನುಸಾರವಾಗಿ ಒಬ್ಬಳೇ ಆದ ಕುಬ್ಜೆಯೂ ಸಹ ಅನೇಕ ರೂಪಗಳನ್ನು ಸ್ವೀಕರಿಸಿ ನೂರುಕೋಟಿ ದಂಪತಿಗಳಾಗಿ ನಾನಾವಿಧ ಕ್ರೀಡೆಗಳಲ್ಲಿ ಆಸಕ್ತಳಾಗಿ ವರ್ತಿಸುತ್ತಿರುವಳು.

ಮೊದಲನೆಯ ಮಿಥುನದಿಂದ ಎಲ್ಲಾ ಮಿಥುನಗಳೂ ಉದ್ಭವಿಸಿ ಸ್ಥಾವರ ಭಾವನೆಯಿಂದ ಗಮನಾಗಮನರಹಿತರಾಗಿ ಯಾವಾಗಲೂ ಹೊಸಹೊಸವರಂತೆ ಕಾಣುವುವು.

೫೨-೫೩. ಮೂರನೆಯ ಮಿಥುನವು ಎರಡನೆಯ ಮಿಥುನದೊಡನೆ ಐಕ್ಯವಾಗುವುದು. ಅದು ಸಾಮಾನ್ಯವಾಗಿ ತಿಳಿಯಲಶಕ್ಯವು. ಸೃಷ್ಟಿಸ್ಥಿತಿಲಯ

**ದಗ್ಧಃ ಷಟ್ಕರ್ಣಗೋ ಮಂತ್ರ ಇತ್ಯುಕ್ತಂ ಸಮುಪಾಚರ ।**
**ಶ್ರುತ್ವೈತದ್ದುರ್ಲಭಂ ಸೋಽಪಿ ವೃಂದೋಕ್ತ್ಯಾ ನಾರದೋ ಮುನಿಃ ॥ ೫೪ ॥**

**ಉಭಯಂ ಚಿಂತಯನ್ ಪ್ರಾಪ್ತೋ ಮುನಿಸ್ತತ್ರೈವ ತತ್ಪರಂ ।**
**ಏತದ್ರಹಸ್ಯಂ ವಿಧಿಜೇ ವಿಷಯಂ ಗುರುಶಿಷ್ಯಯೋಃ ॥ ೫೫ ॥**

**ನೈವ ಕೋಽಪ್ಯಪರೋ ವೇತ್ತಿ ಧರ್ಮಶ್ಚೈವಾವಯೋರಪಿ ।**
**ಏಕ ಏವ ವಿಜಾನಾತಿ ವಕ್ತಾ ಶ್ರೋತ್ರೈಕತಃ ಶುಭೇ ॥ ೫೬ ॥**

**ತದೇಕಂ ತತ್ತ್ವಮೇವಾಸ್ತಿ ನೇಹ ನಾನಾಸ್ತಿ ಕಿಂಚನ ।**
**ಗದಿತಂ ತೇ ಮಹಾಭಾಗೇ ರಹಸ್ಯಂ ಗೋಪಿಕೇಶಿತುಃ ॥ ೫೭ ॥**

---

ಕಾರ್ಯಗಳಲ್ಲಿ ವ್ಯಾಪೃತವಾದ ಆ ರೂಪವು ವಿಲಕ್ಷಣವಾದುದು. ಅದನ್ನು ನಾನೊಬ್ಬಳೇ ಕೇಳಿ ತಿಳಿದಿರುವೆನು. ನನ್ನಿಂದ ಕೇಳಿ ನೀನು ಈಗ ತಿಳಿದಿರುವೆ.

ಯಾವ ಗೋಪ್ಯವಿಷಯವೇ ಆಗಲಿ ಮೂರು ಜನಗಳಿಗೆ ತಿಳಿದರೆ ಅದು ಹಾಳಾಗುವುದು ಎಂಬುದಾಗಿ ಆರ್ಯರು ನುಡಿದಿರುವರು. ಅದನ್ನು ನೀನು ನೆನಪಿನಲ್ಲಿಟ್ಟು ಇದನ್ನು ರಹಸ್ಯವಾಗಿಡು. ಯಾರಿಗೂ ತಿಳಿಸಬೇಡ ಎಂಬುದಾಗಿ ವೃಂದಾದೇವಿಯು ಹೇಳಿದಳು.

೫೪-೫೫. ಇಂತಹ ದುರ್ಲಭವಾದ ರಹಸ್ಯವನ್ನು ಕೇಳಿ ನಾರದ ಮುನಿಯೂ ಸಹ ವೃಂದೆಯು ಹೇಳಿದ ಪ್ರಕಾರ ಉಭಯವನ್ನೂ ಮನಸ್ಸಿನಲ್ಲಿಯೇ ಚಿಂತಿಸುತ್ತಾ ಅಲ್ಲಿಯೇ ತತ್ಪರನಾದನು. ವಿಧಿಕುಮಾರೀ! ಈ ರಹಸ್ಯವು ಗುರುಶಿಷ್ಯರಿಬ್ಬರಿಗೇ ತಿಳಿಯಲರ್ಹವು.

೫೬-೫೭. ಇನ್ನೊಬ್ಬನಿಗೆ ತಿಳಿಯಬಾರದು! ಅದರಂತೆ ಕಾಪಾಡುವುದು ನಮ್ಮಿಬ್ಬರ ಧರ್ಮವು. ವಕ್ತೃವೊಬ್ಬನೇ ತಿಳಿದಿರುವನು. ಅವನೊಬ್ಬನಿಂದ ಶ್ರೋತೃವು ತಿಳಿಯುವನು.

ಕೃಷ್ಣನೆಂಬ ತತ್ತ್ವವು ಒಂದೇ ಆಗಿರುವುದು. ಅನೇಕರೂಪಗಳು ತೋರಿದರೂ ಅವುಗಳಲ್ಲೆಲ್ಲಾ ಒಂದೇ ತತ್ತ್ವವಿರುವುದು. ಅವುಗಳಿಗೆ ಭೇದವಿಲ್ಲ. ಧನ್ಯಳಾದ ಮೋಹಿನೀ! ಗೋಪಿಕೇಶ್ವರನ ರಹಸ್ಯವನ್ನು ನಿನಗೆ ಹೇಳಿರುವೆನು.

ಪ್ರಕಾಶಾಚರಿತಂ ಚಾಪಿ ವಕ್ಷ್ಯೇ ಸಮ್ಯಙ್ನಿಶಾಮಯ |
ಯತ್ರ ಸಂದರ್ಶಿತಂ ತತ್ತ್ವಂ ತ್ವತ್ಪಿತ್ರೇ ವಿಧಿನಂದಿನಿ ॥ ೫೮ ॥

ತದ್ಬ್ರಹ್ಮಕುಂಡಮೇತದ್ಧಿ ಪುಣ್ಯಂ ವೃಂದಾವನೇ ವನೇ |
ತತ್ರ ಯಃ ಸ್ನಾತಿ ಮನುಜೋ ಮೂಲವೇಷಂ ವಿಭಾವಯನ್ ॥ ೫೯ ॥

ವೈಭವಂ ಪಶ್ಯತೇ ಕಿಂಚಿದೇವಂ ನಿತ್ಯವಿಹಾರಿಣಃ |
ಶಕ್ರೇಣ ಜ್ಞಾತತತ್ತ್ವೇನ ಗೋವಿಂದೋ ಯತ್ರ ಚಿಂತಿತಃ ॥ ೬೦ ॥

ಗೋವಿಂದಕುಂಡಂ ತದ್ಭದ್ರೇ ಸ್ನಾತ್ವಾ ತತ್ರಾಪಿ ತಲ್ಲಭೇತ್ |
ಏಕೋಽನೇಕಸ್ವರೂಪೇಣ ಯತ್ರ ಕುಂಜವಿಹಾರಿಣಾ ॥ ೬೧ ॥

ವಲ್ಲವೀಭಿಃ ಸಮಾರಬ್ಧೋ ರಾಸಸ್ತದಪಿ ತದ್ವಿಧಂ |
ಯತ್ರ ನಂದಾದಯೋ ಗೋಪಾ ದದೃಶುರ್ವೈಭವಂ ವಿಭೋಃ ॥ ೬೨ ॥

---

೫೮.೫೯. ವಿಧಿಕುಮಾರೀ ! ಶ್ರೀಕೃಷ್ಣನ ಪ್ರಕಟಚರಿತ್ರೆಯನ್ನೂ ಸಹ ಹೇಳುವೆನು ಕೇಳು. ನಿನ್ನ ತಂದೆಯಾದ ಬ್ರಹ್ಮನಿಗೆ ತನ್ನ ನಿಜರೂಪವನ್ನು ತೋರಿಸಿದ ಸ್ಥಾನವೇ ಈ ಬ್ರಹ್ಮಕುಂಡವು. ಇದು ಈ ವೃಂದಾವನವೆಂಬ ವನದಲ್ಲಿ ಪುಣ್ಯಕರವಾದುದು.

೫೯-೬೦. ಆ ಕುಂಡದಲ್ಲಿ ಮೂಲರೂಪವನ್ನು ಧ್ಯಾನಿಸುತ್ತಾ ಸ್ನಾನ ಮಾಡುವ ಮನುಷ್ಯನು ಈ ರೀತಿ ನಿತ್ಯವಿಹಾರಿಯಾದ ಶ್ರೀ ಕೃಷ್ಣನ ವೈಭವವನ್ನು ಸ್ವಲ್ಪವಾಗಿ ಕಾಣುವನು.

೬೦-೬೧. ಭದ್ರೇ! ತತ್ವಜ್ಞಾನಿಯಾದ ಇಂದ್ರನು ಗೋವಿಂದನನ್ನು ಚಿಂತಿಸಿದ ಸ್ಥಾನವೇ ಗೋವಿಂದಕುಂಡವು. ಅಲ್ಲಿ ಸ್ನಾನಮಾಡುವುದರಿಂದಲೂ ಮೇಲೆ ಹೇಳಿದ ಫಲವು ಲಭಿಸುವುದು.

೬೧-೬೨. ಒಬ್ಬನೇ ಆದ ಕೃಷ್ಣನು ಅನೇಕ ರೂಪಗಳಿಂದ ಲತಾಗೃಹಗಳಲ್ಲಿ ವಿಹರಿಸುವಾಗ ಗೋಪಿಕಾಸ್ತ್ರೀಯರ ಸಂಗಡ ರಾಸಕ್ರೀಡೆಯನ್ನು ಮಾಡಿದ ಸ್ಥಳವೂ ಅಂತಹುದೇ ಆಗಿದೆ.

ತಚ್ಚ ತತ್ವಪ್ರಕಾಶಾಖ್ಯಂ ತೀರ್ಥಂ ಶ್ರೀಯಮುನಾಜಲೇ |
ದರ್ಶಿತಂ ಯತ್ರ ಗೋಪಾನಾಂ ಕಾಲಿಯಸ್ಯ ವಿಮರ್ದನಂ || ೬೩ ||

ತಚ್ಚ ಪುಣ್ಯಂ ಸಮಾಖ್ಯಾತಂ ತೀರ್ಥಂ ಪಾಪಾಪಹಂ ನೃಣಾಂ |
ದಾವಾಗ್ನೇರ್ಮೋಚಿತಾ ಯತ್ರ ಸಸ್ತ್ರೀಬಾಲಧನಾರ್ಭಕಾಃ || ೬೪ ||

ಗೋಪಾಃ ಕೃಷ್ಣೇನ ತತ್ಪುಣ್ಯಂ ತೀರ್ಥಂ ಸ್ನಾನಾದಘಾಪಹಂ |
ಯತ್ರ ಕೇಶೀ ಹತಸ್ತೇನ ಲೀಲಯೈವ ಹಯಾಕೃತಿಃ || ೬೫ ||

ತತ್ರ ಸ್ನಾತಸ್ತು ಮನುಜೋ ಲಭತೇ ಧಾಮ ವೈಷ್ಣವಂ |
ಯತ್ರ ದುಷ್ಟೋ ವೃಷಸ್ತೇನ ಹತಸ್ತತ್ರಾಭವಚ್ಛುಚಿಃ || ೬೬ ||

ಅರಿಷ್ಟಕುಂಡಂ ವಿಖ್ಯಾತಂ ಸ್ನಾನಮಾತ್ರೇಣ ಮುಕ್ತಿದಂ |
ಧೇನುಕೋಽಘೋ ಬಕೋ ವತ್ಸೋ ವ್ಯೋಮೋ ಲಂಬಾಸುರೋಽಪಿ ಚ ||

---

೬೩. ಅದು ತತ್ವಪ್ರಕಾಶವೆಂಬ ತೀರ್ಥವು. ಯಮುನಾಜಲದಲ್ಲಿದೆ. ಅಲ್ಲಿಯೇ ಕೃಷ್ಣನು ಗೋಪಾಲಕರಿಗೆ ಕಾಲಿಯ ಎಂಬ ಮಹಾಸರ್ಪವನ್ನು ವಿಮರ್ದನೆ ಮಾಡಿ ತೋರಿಸಿರುವನು.

೬೪. ಸ್ತ್ರೀಯರು, ಬಾಲಕರು ಮುಂತಾದವರ ಸಹಿತವಾಗಿ ಗೋಪಾಲಕರನ್ನು ಕಾಡುಗಿಚ್ಚಿನಿಂದ ಪಾರುಮಾಡಿದ ಸ್ಥಾನವು ಉತ್ತಮತೀರ್ಥವಾಗಿ ಅದು ಮನುಷ್ಯರಿಗೆ ಪಾಪವನ್ನು ಪರಿಹರಿಸಿ ಪುಣ್ಯವನ್ನು ಕೊಡುತ್ತದೆಂದು ಉಕ್ತವಾಗಿದೆ.

೬೫. ಅಶ್ವಾಕಾರವನ್ನು ತಾಳಿದ ಕೇಶಿಯೆಂಬ ಅಸುರನನ್ನು ಶ್ರೀಕೃಷ್ಣನು ಅನಾಯಾಸವಾಗಿ ಸಂಹರಿಸಿದ ಪುಣ್ಯತೀರ್ಥವು ಸ್ನಾನಮಾಡುವ ಮನುಷ್ಯರಿಗೆ ಪಾಪಗಳನ್ನೆಲ್ಲಾ ಪರಿಹರಿಸುವುದು.

೬೬-೬೭. ಕೃಷ್ಣನಿಂದ ಸಂಹೃತವಾದ ವೃಷಭವು ಸ್ನಾನಮಾಡಿ ಪರಿಶುದ್ಧಿಹೊಂದಿದ ತೀರ್ಥದಲ್ಲಿ ಸ್ನಾನಮಾಡಿದ ಮನುಷ್ಯನು ವೈಷ್ಣವಸ್ಥಾನವನ್ನು ಹೊಂದುವನು. ಅದು ಅರಿಷ್ಟಕುಂಡವೆಂದು ವಿಖ್ಯಾತವಾಗಿದೆ. ಅಲ್ಲಿ ಸ್ನಾನಮಾಡುವ ಮಾತ್ರದಿಂದ ಮೋಕ್ಷವು ಲಭಿಸುವುದು.

ಹತಾಃ ಕೃಷ್ಣೇನ ಲೀಲಾಸು ತತ್ರ ತೀರ್ಥಾನಿ ಯಾನ್ಯಪಿ ।
ತೇಷು ಸ್ನಾತ್ವಾ ನರೋ ಭಕ್ತಃ ಸಂತರ್ಪ್ಯ ಪಿತೃದೇವತಾಃ ॥ ೬೮ ॥

ಲಭತೇ ವಾಂಛಿತಾನ್ ಕಾಮಾನ್ ಗೋಪಾಲಸ್ಯ ಪ್ರಸಾದತಃ ।
ಸುಪ್ತಂ ಭುಕ್ತಂ ವಿಚರಿತಂ ಶ್ರುತಂ ದೃಷ್ಟಂ ವಿಲಕ್ಷಣಂ ॥ ೬೯ ॥

ಕೃತಂ ಯತ್ರ ಚ ತತ್ ಕ್ಷೇತ್ರಂ ಸ್ನಾನಾತ್ ಸ್ವರ್ಗಗತಿಪ್ರದಂ ।
ಶ್ರುತಃ ಸಂಚಿಂತಿತೋ ದೃಷ್ಟೋ ನತಃ ಶ್ಲಿಷ್ಟಃ ಸ್ತುತೋಽರ್ಥಿತಃ ॥ ೭೦ ॥

ಯತ್ರ ಪುಣ್ಯನರೈರ್ಭದ್ರೇ ತಚ್ಚ ತೀರ್ಥಂ ಗತಿಪ್ರದಂ ।
ಯತ್ರ ಶ್ರೀರಾಧಯಾ ಭದ್ರೇ ತಪಸ್ತಪ್ತಂ ಸುದಾರುಣಂ ॥ ೭೧ ॥

---

೬೭-೬೮. ಪಾಪಿಯಾದ ಧೇನುಕಾಸುರ, ಬಕಾಸುರ, ವತ್ಸಾಸುರ, ವ್ಯೋಮ ಮತ್ತು ಲಂಬಾಸುರ ಇವರು ಲೀಲೆಗಳಲ್ಲಿ ಕೃಷ್ಣನಿಂದ ಸಂಹರಿಸಲ್ಪಟ್ಟ ಸ್ಥಳಗಳೆಲ್ಲವೂ ಪುಣ್ಯತೀರ್ಥಗಳು.

೬೮-೬೯. ಕೃಷ್ಣಭಕ್ತನಾದ ಮನುಷ್ಯನು ಆ ತೀರ್ಥಗಳಲ್ಲಿ ಸ್ನಾನಮಾಡಿ, ಪಿತೃದೇವತೆಗಳ ತರ್ಪಣಮಾಡಿದರೆ ಗೋಪಾಲನ ಅನುಗ್ರಹದಿಂದ ಇಷ್ಟಕಾಮ ಗಳನ್ನು ಪಡೆಯುವನು.

೬೯-೭೦. ಶ್ರೀ ಕೃಷ್ಣನು ಮಲಗಿದ, ಭೋಜನಮಾಡಿದ, ಸಂಚರಿಸಿದ, ಕೇಳಿದ, ನೋಡಿದ ಮತ್ತು ವಿಲಕ್ಷಣ ವ್ಯಾಪಾರಗಳನ್ನು ನಡೆಸಿದ ಸ್ಥಾನವೆಲ್ಲವೂ ಪುಣ್ಯಕ್ಷೇತ್ರಗಳು. ಅಲ್ಲಿ ಸ್ನಾನಾದಿಗಳನ್ನು ಆಚರಿಸಿದರೆ ಸ್ವರ್ಗಪ್ರಾಪ್ತಿಯಾಗು ವುದು.

೭೦-೭೧. ಭದ್ರೇ ! ಪುಣ್ಯವಂತರಾದ ಜನರು ಶ್ರೀಕೃಷ್ಣಮಹಿಮೆ ಯನ್ನು ಶ್ರವಣಮಾಡಿದ, ಅವನನ್ನು ಧ್ಯಾನಿಸಿದ, ನಮಸ್ಕರಿಸಿದ, ಆಲಂಗಿಸಿದ, ಸ್ತುತಿಸಿದ ಮತ್ತು ಪ್ರಾರ್ಥಿಸಿದ ಸ್ಥಳವೆಲ್ಲವೂ ಪುಣ್ಯತೀರ್ಥಗಳು. ಅವೂ ಸದ್ಗ ತಿದಾಯಕಗಳಾಗುವುವು.

ತಚ್ಛ್ರೀಕುಂಡಂ ಮಹತ್ಪುಣ್ಯಂ ಸ್ನಾನೇ ದಾನೇ ಜಪಾದಿಕೇ ।
ವತ್ಸತೀರ್ಥಂ ಚಂದ್ರಸರಸ್ತಥೈವಾಪ್ಸರಸಾಂ ಸರಃ ॥ ೭೨ ॥

ರುದ್ರಕುಂಡಂ ಕಾಮಕುಂಡಂ ಪರಮಂ ಮಂದಿರಂ ಹರೇಃ ।
ವಿಶಾಲಾಲಕನಂದಾದ್ಯಾನೀಯಕುಂಡಂ ಮನೋಹರಂ ॥ ೭೩ ॥

ವಿಮಲಂ ಧರ್ಮಕುಂಡಂ ಚ ಭೋಜನಸ್ಥಲಮೇವ ಚ ।
ಬಲಸ್ಥಾನಂ ಬೃಹತ್ಸಾನುಃ ಸಂಕೇತಸ್ಥಾನಕಂ ಹರೇಃ ॥ ೭೪ ॥

ನಂದಿಗ್ರಾಮಃ ಕಿಶೋರ್ಯಾಶ್ಚ ಕುಂಡಂ ಕೋಕಿಲಕಾನನಂ ।
ಶೇಷಶಾಯಿಪಯೋಽಬ್ಧಿಶ್ಚ ಕ್ರೀಡಾದೇಶೋಽಕ್ಷಯೋ ವಟಃ ॥ ೭೫ ॥

ರಾಮಕುಂಡಂ ಚೀರಚೌರ್ಯಂ ಭದ್ರಭಾಂಡೀರಬಿಲ್ವಕಂ ।
ಮಾನಾಖ್ಯಂ ಚ ಸರಃ ಪುಣ್ಯಂ ಪುಲಿನಂ ಭಕ್ತಭೋಜನಂ ॥ ೭೬ ॥

---

೭೧-೭೨. ಭದ್ರೇ! ಶ್ರೀರಾಧಾದೇವಿಯು ಅತಿಕಠಿನವಾಗಿ ತಪಸ್ಸುಮಾಡಿದ ಸ್ಥಳವು ಶ್ರೀಕುಂಡವೆಂದು ವಿಖ್ಯಾತವಾಗಿದೆ. ಅದು ಸ್ನಾನ, ದಾನ, ಜಪಾದಿಗಳನ್ನು ಮಾಡುವವರಿಗೆ ಮಹಾಪುಣ್ಯದಾಯಕವು.

೭೨-೭೩. ವತ್ಸತೀರ್ಥ, ಚಂದ್ರಸರೋವರ, ಅಪ್ಸರಸ್ಸರೋವರ, ರುದ್ರಕುಂಡ, ಕಾಮಕುಂಡ, ವಿಶಾಲಾ, ಅಲಕನಂದಾ ಮುಂತಾದುವು, ಆನೀಯಕುಂಡ ಇವು ಮನೋಹರವು, ಉತ್ತಮವೂ ಆದ ಹರಿಮಂದಿರವು.

೭೪. ವಿಮಲ, ಧರ್ಮಕುಂಡ, ಭೋಜನಸ್ಥಳ, ಬಲಸ್ಥಾನ, ಬೃಹತ್ಸಾನು ಇವು ಹರಿಯ ಸಂಕೇತಸ್ಥಾನಗಳು.

೭೫-೭೭. ನಂದಿಗ್ರಾಮ, ಕಿಶೋರೀಕುಂಡ, ಕೋಕಿಲಕಾನನ, ಶೇಷಶಾಯಿ, ಕ್ಷೀರಸಾಗರ, ಕ್ರೀಡಾದೇಶ, ಅಕ್ಷಯವಟ, ರಾಮಕುಂಡ, ಚೀರಚೌರ್ಯ, ಭಾಂಡೀರಬಿಲ್ವಕ, ಮಾನಸರಸ್ಸು, ಪುಣ್ಯಪುಲಿನ, ಭಕ್ತಭೋಜನ, ಅಕ್ರೂರವನ,

ಅಕ್ರೂರಂ ತಾರ್ಕ್ಷ್ಯಗೋವಿಂದಬಹುಲಾರಣ್ಯಕಂ ಶುಭೇ ।
ಏತದ್ವೃಂದಾವನಂ ನಾಮ ಸಮಂತಾತ್ಪಂಚಯೋಜನಂ ॥ ೭೭ ॥

ಸುಪುಣ್ಯಂ ಪುಣ್ಯಕೃಜ್ಜುಷ್ಟಂ ದರ್ಶನಾದೇವ ಮುಕ್ತಿದಂ ।
ಯಸ್ಯ ಸಂದರ್ಶನಂ ದೇವಾ ವಾಂಛಂತಿ ಚ ಸುದುರ್ಲಭಂ ॥ ೭೮ ॥

ಲೀಲಾಮಾಭ್ಯಂತರೀಂ ದ್ರಷ್ಟುಂ ತಪಸಾಪಿ ನ ಚ ಕ್ಷಮಾಃ ।
ಸರ್ವತ್ರ ಸಂಗಮುತ್ಸೃಜ್ಯ ಯಸ್ತು ವೃಂದಾವನಂ ಶ್ರಯೇತ್ ॥ ೭೯ ॥

ನ ತಸ್ಯ ದುರ್ಲಭಂ ಕಿಂಚಿತ್ತ್ರಿಷು ಲೋಕೇಷು ಭಾಮಿನಿ ।
ವೃಂದಾವನೇತಿ ನಾಮಾನಿ ಯಃ ಸಮುಚ್ಚರತಿ ಪ್ರಿಯೇ ॥ ೮೦ ॥

ತಸ್ಯಾಪಿ ಭಕ್ತಿರ್ಭವತಿ ಸತತಂ ನಂದನಂದನೇ ।
ಯತ್ರ ವೃಂದಾವನೇ ಪುಣ್ಯೇ ನರನಾರೀಪ್ಲವಂಗಮಾಃ ॥ ೮೧ ॥

---

ತಾರ್ಕ್ಷ್ಯವನ, ಗೋವಿಂದವನ, ಬಹುಲಾರಣ್ಯ ಇವೆಲ್ಲವೂ ವೃಂದವನವೆನಿಸುವುವು. ಇದು ಸುತ್ತಲೂ ಐದುಗಾವುದ ವಿಸ್ತಾರವುಳ್ಳದು.

೭೮. ಈ ವೃಂದಾವನವು ಅತ್ಯಂತ ಪುಣ್ಯಕರವಾದುದು. ಬಹು ಪುಣ್ಯವಂತರು ಇದನ್ನು ಸೇವಿಸಿರುವರು. ಇದರ ದರ್ಶನಮಾತ್ರದಿಂದಲೇ ಮುಕ್ತಿಯುಂಟಾಗುವುದು. ದೇವತೆಗಳೂ ಸಹ ಅತ್ಯಂತ ದುರ್ಲಭವಾದ ಈ ವೃಂದಾವನ ದರ್ಶನವನ್ನು ಬಯಸುವರು.

೭೯-೮೦. ಹರಿಯ ಆಭ್ಯಂತರ ಲೀಲೆಯನ್ನು ನೋಡಲು ತಪಸ್ಸಿನಿಂದಲೂ ಸಾಧ್ಯವಾಗುವುದಿಲ್ಲ. ಸರ್ವಸಂಗಪರಿತ್ಯಾಗಮಾಡಿ ವೃಂದಾವನವನ್ನು ಸೇವಿಸುವ ಮನುಷ್ಯನಿಗೆ ಮೂರು ಲೋಕಗಳಲ್ಲಿ ಯಾವುದೂ ದುರ್ಲಭವಾಗುವುದಿಲ್ಲ.

೮೦-೮೧. ಭಾಮಿನೀ ! ವೃಂದಾವನವೆಂಬ ನಾಮಧೇಯವನ್ನಾದರೂ ಹೇಳುವ ಮನುಷ್ಯನಿಗೂ ಸಹ ನಂದಕುಮಾರನಲ್ಲಿ ಯಾವಾಗಲೂ ಭಕ್ತಿಯುಂಟಾಗುವುದು.

ಕ್ರಿಮಿಕೀಟಪತಂಗಾದ್ಯಾಃ ಖಗಾ ವೃಕ್ಷಾ ನಗಾ ಮೃಗಾಃ ।
ಸಮುಚ್ಚರಂತಿ ಸತತಂ ರಾಧಾಕೃಷ್ಣೇತಿ ಮೋಹಿನಿ ॥ ೮೨ ॥
ಕೃಷ್ಣಮಾಯಾಭಿಭೂತಾನಾಂ ಕಾಮಕಶ್ಮಲಚೇತಸಾಂ ।
ಸ್ವಪ್ನೇಽಪಿ ದುರ್ಲಭಂ ಪುಂಸಾಂ ಮನ್ಯೇ ವೃಂದಾವನೇಕ್ಷಣಂ ॥ ೮೩ ॥
ವೃಂದಾರಣ್ಯಂ ತು ಯೈರ್ದೃಷ್ಟಂ ನರೈಃ ಸುಕೃತಿಭಿಃ ಶುಭೇ ।
ತೈಃ ಕೃತಂ ಸಫಲಂ ಜನ್ಮ ಕೃಪಾಪಾತ್ರಾಣಿ ತೇ ಹರೇಃ ॥ ೮೪ ॥
ಕಿಂ ಪುನರ್ಬಹುನೋಕ್ತೇನ ಶ್ರುತೇನ ವಿಧಿನಂದಿನಿ ।
ಸೇವ್ಯಂ ವೃಂದಾವನಂ ಪುಣ್ಯಂ ಭವ್ಯಂ ಮುಕ್ತಿಮಭೀಪ್ಸುಭಿಃ ॥ ೮೫ ॥
ದೃಶ್ಯಂ ಗಮ್ಯಂ ಚ ಸಂಸೇವ್ಯಂ ಧ್ಯೇಯಂ ವೃಂದಾವನಂ ಸದಾ ।
ನಾಸ್ತಿ ಲೋಕೇ ಸಮಂ ತಸ್ಯ ಭುವಿ ಕೀರ್ತಿವಿವರ್ಧನಂ ॥ ೮೬ ॥

---

೮೧-೮೨. ಮೋಹಿನೀ! ಪುಣ್ಯಕರವಾದ ಈ ವೃಂದಾವನದಲ್ಲಿರುವ ಗಂಡು, ಹೆಣ್ಣುಕೋತಿಗಳು, ಕ್ರಿಮಿ, ಕೀಟ, ಪತಂಗ ಮುಂತಾದುವು, ಪಕ್ಷಿಗಳು, ವೃಕ್ಷಗಳು, ಪರ್ವತಗಳು, ಮೃಗಗಳೂ ಸಹ ಯಾವಾಗಲೂ 'ರಾಧಾಕೃಷ್ಣ' ಎಂಬುದಾಗಿಯೇ ಹೇಳುತ್ತಿರುತ್ತವೆ.

೮೩. ಕೃಷ್ಣಮಾಯೆಯಿಂದ ಆವರಿಸಲ್ಪಟ್ಟು ಮನಸ್ಸಿನಲ್ಲಿ ಕಾಮವೆಂಬ ಕಶ್ಮಲವನ್ನು ಧರಿಸಿರುವ ಮನುಜರಿಗೆ ವೃಂದಾವನದ ದರ್ಶನವು ಸ್ವಪ್ನದಲ್ಲಿಯೂ ಸಹ ದುರ್ಲಭವೆಂದು ನಾನು ತಿಳಿದಿರುವೆನು.

೮೪. ಮಂಗಳರೂಪಿಯಾದ ಮೋಹಿನೀ! ವೃಂದಾವನವನ್ನು ದರ್ಶನ ಮಾಡಿದ ಪುಣ್ಯವಂತರ ಜನ್ಮವೇ ಸಫಲವು ಅಂತಹವರು ಹರಿಯ ಅನುಗ್ರಹಕ್ಕೆ ಪಾತ್ರರಾಗುವರು

೮೫. ವಿಧಿಕುಮಾರೀ! ಹೆಚ್ಚು ಹೇಳಿದುದರಿಂದೇನು. ಮೋಕ್ಷವನ್ನು ಬಯಸುವವರೆಲ್ಲರೂ ಪುಣ್ಯಕರವು ಮಂಗಳಕರವು ಆದ ವೃಂದಾವನವನ್ನು ಸೇವಿಸಬೇಕು.

೮೬. ಯಾವಾಗಲೂ ವೃಂದಾವನದ ದರ್ಶನ, ಗಮನ, ಸೇವೆ ಮತ್ತು ಧ್ಯಾನ ಇವುಗಳಲ್ಲಾಸಕ್ತನಾಗಿರಬೇಕು. ಅದಕ್ಕೆ ಸಮಾನವಾದ ಯಶಸ್ಕರ ಕರ್ಮವು ಭೂಲೋಕದಲ್ಲಿ ಯಾವುದೂ ಇಲ್ಲ.

ಯತ್ರ ಗೋವರ್ಧನೋ ನಾಮ ದ್ವಿಜಃ ಕಲ್ಪೇ ಪುರಾತನೇ ।
ವಿರಕ್ತಃ ಸರ್ವಸಂಸಾರಾತ್ತ್ರಪ್ತ್ವಾನ್ ಪರಮಂ ತಪಃ ॥ ೮೭ ॥

ತದ್ಗತ್ವಾ ದೇವಿ ದೇವೇಶೋ ಭಗವಾನ್ವಿಷ್ಣುರವ್ಯಯಃ ।
ಕ್ರೀಡಾಸ್ಥಾನಂ ನಿಜಂ ಪ್ರಾಪ್ತೋ ವರಂ ದಾತುಂ ದ್ವಿಜನ್ಮನೇ ॥ ೮೮ ॥

ತಂ ದೃಷ್ಟ್ವಾ ದೇವದೇವೇಶಂ ಶಂಖಚಕ್ರಗದಾಧರಂ ।
ವಿಲಸತ್ಕೌಸ್ತುಭೋರಸ್ಕಂ ಮಕರಾಕೃತಿಕುಂಡಲಂ ॥ ೮೯ ॥

ಸುಕಿರೀಟಂ ಸುಕಟಕಂ ಕಲನೂಪುರಭೂಷಿತಂ ।
ವನಮಾಲಾನಿವೀತಾಂಗಂ ಶ್ರೀವತ್ಸಾಂಕಿತವಕ್ಷಸಂ ॥ ೯೦ ॥

ಪೀತಕೌಶೇಯವಸನಂ ನವಾಂಬುದಸಮಪ್ರಭಂ ।
ಸುನಾಭಿಂ ಸುಂದರಗ್ರೀವಂ ಸುಕಪೋಲಂ ಸುನಾಸಿಕಂ ॥ ೯೧ ॥

---

೮೭. ದೇವೀ ! ಪೂರ್ವಕಲ್ಪದಲ್ಲಿ ಗೋವರ್ಧನನೆಂಬ ದ್ವಿಜನು ಸಕಲ ಸಂಸಾರಗಳಲ್ಲಿಯೂ ವೈರಾಗ್ಯವನ್ನು ತಾಳಿ ವೃಂದಾವನಕ್ಕೆ ಹೋಗಿ ಅಲ್ಲಿ ಉತ್ಕೃಷ್ಟ ತಪಸ್ಸನ್ನಾಚರಿಸಿದನು.

೮೮. ದೇವೇಶನು, ನಾಶರಹಿತನು, ಷಡ್ಗುಣೈಶ್ವರ್ಯಸಂಪನ್ನನೂ ಆದ ವಿಷ್ಣುದೇವನು ಆ ಬ್ರಾಹ್ಮಣನಿಗೆ ವರಕೊಡುವುದಕ್ಕಾಗಿ ತನ್ನ ಕ್ರೀಡಾಸ್ಥಾನವಾದ ವೃಂದಾವನಕ್ಕೆ ಬಂದನು.

೮೯-೯೨. ಶಂಖಚಕ್ರಗದಾಪಾಣಿಯು, ವಕ್ಷಃಸ್ಥಳದಲ್ಲಿ ವಿರಾಜಮಾನವಾದ ಕೌಸ್ತುಭ ಮಣಿಯನ್ನು ಧರಿಸಿರುವವನು, ಮಕರದಂತಿರುವ ಕುಂಡಲಗಳನ್ನಿಟ್ಟುಕೊಂಡಿರುವವನು, ಒಳ್ಳೆಯ ಕಿರೀಟ, ಕಡಗಗಳನ್ನು ಧರಿಸಿರುವವನು, ಧ್ವನಿಮಾಡುತ್ತಿರುವ ಪಾದಾಭರಣಗಳಿಂದ ಭೂಷಿತನು, ಕಂಠದಲ್ಲಿ ವನಮಾಲೆಯನ್ನು ಹಾಕಿಕೊಂಡಿರುವವನು, ವಕ್ಷಃಸ್ಥಳದಲ್ಲಿ ಶ್ರೀವತ್ಸಚಿಹ್ನೆಯುಳ್ಳವನು, ಹಳದಿಯ ಪೀತಾಂಬರವನ್ನುಟ್ಟಿರುವವನು, ನೂತನ ಮೇಘದಂತೆ ಹೊಳೆಯುತ್ತಿರುವವನು, ಸುಂದರವಾದ, ನಾಭಿ, ಕುತ್ತಿಗೆ, ಕೆನ್ನೆ, ಮೂಗು, ಹಲ್ಲು ಇವುಗಳುಳ್ಳವನು, ಸಮೀಚೀನ ಮಂದಹಾಸಯುಕ್ತನು, ಮನೋಹರ ಮೊಣಕಾಲು,

ಸುದ್ವಿಜಂ ಸುಸ್ಮಿತಂ ಸುಷ್ಟುಜಾನೂರುಭುಜಮಧ್ಯಕಂ |
ಕೃಪಾರ್ಣವಂ ಪ್ರಮುದಿತಂ ಸುಪ್ರಸನ್ನಮುಖಾಂಬುಜಂ ॥ ೯೨ ॥

ದೃಷ್ಟ್ವಾ ಸ ಸಹಸೋತ್ಥಾಯ ನನಾಮ ಭುವಿ ದಂಡವತ್ |
ವರಂ ಬ್ರೂಹೀತಿ ನಿರ್ದಿಷ್ಟೋ ಪ್ರಾಹ ಗೋವರ್ಧನೋ ಹರಿಂ ॥ ೯೩ ॥

ಪದ್ಭ್ಯಾಮಾಕ್ರಮ್ಯ ಮತ್ಪೃಷ್ಠಂ ತಿಷ್ಠ ಚೈವ ವರೋ ಮಮ |
ತಚ್ಛ್ರುತ್ವಾ ಭಕ್ತವಶ್ಯೋ ವೈ ವಿಚಿಂತ್ಯ ಚ ಪುನಃ ಪುನಃ ॥ ೯೪ ॥

ತಸ್ಥೌ ತತ್ಪೃಷ್ಠಮಾಕ್ರಮ್ಯ ತದಾ ಭೂಯೋ ದ್ವಿಜೋಽಬ್ರವೀತ್ |
ನಾಹಂ ತ್ವಾಮುತ್ಸಹೇ ದೇವ ನಿಜಪೃಷ್ಠೇ ಜಗತ್ಪತೇ ॥ ೯೫ ॥

---

ತೊಡೆ, ಭುಜಮಧ್ಯ ಇವುಗಳುಳ್ಳವನು, ಕೃಪಾಸಾಗರನು, ಸಂತೋಷಯುಕ್ತನು, ಅತ್ಯಂತ ಪ್ರಸನ್ನವಾದ ಮುಖಕಮಲವುಳ್ಳವನೂ ಆದ ಆ ದೇವದೇವೇಶನನ್ನು ಗೋವರ್ಧನದ್ವಿಜನು ನೋಡಿದನು.

೯೩-೯೪. ಕೂಡಲೇ ಬ್ರಾಹ್ಮಣನು ಎದ್ದು ನೆಲದ ಮೇಲೆ ದಂಡಪ್ರಣಾಮವಮಾಡಿದನು. ಹರಿಯು ಬ್ರಾಹ್ಮಣಾ! ನಾನು ಪ್ರಸನ್ನನಾಗಿರುವೆನು. ವರವನ್ನು ಕೇಳು ಎಂದು ಹೇಳಿದನು.

ಅನಂತರ ಗೋವರ್ಧನನು ಹರಿಯನ್ನು ಕುರಿತು ಸ್ವಾಮೀ! ನೀನು ನನ್ನ ಹಿಂಭಾಗವನ್ನು ಪಾದಗಳಿಂದಾಕ್ರಮಿಸಿ ನಿಲ್ಲಬೇಕು. ಇದೇ ನಾನು ಬೇಡುವ ವರವು ಎಂಬುದಾಗಿ ಹೇಳಿದನು.

೯೪-೯೫. ಭಕ್ತಪರಾಧೀನನಾದ ಹರಿಯು ಅದನ್ನು ಕೇಳಿ ಪುನಃ ಪುನಃ ವಿಚಾರ ಮಾಡಿ ಅವನ ಹಿಂಭಾಗವನ್ನು ಪಾದಗಳಿಂದಾಕ್ರಮಿಸಿ ನಿಂತನು. ಆಗ ದ್ವಿಜನು ಪುನಃ ಹೀಗೆ ಹೇಳಿದನು.

೯೫. ಜಗದೊಡೆಯನಾದ ದೇವಾ! ನೀನು ನನ್ನನ್ನು ಬಿಟ್ಟು ಕೆಳಗಿಳಿಯುವುದನ್ನು ನಾನು ಸಹಿಸಲಾರೆನು. ಆದಕಾರಣ ನೀನು ಇದೇ ರೀತಿಯಾಗಿ ಸ್ಥಿರವಾಗಿರಬೇಕು.

ಅವತಾರಯಿತುಂ ತಸ್ಮಾದೇವಮೇವ ಸ್ಥಿರೋ ಭವ ।
ತತಃ ಪ್ರಭೃತಿ ವಿಶ್ವಾತ್ಮಾ ಕೃತ್ವಾ ಗೋವರ್ಧನಂ ದ್ವಿಜಂ ॥ ೯೬ ॥

ಗಿರಿರೂಪಧರಂ ಯಾತಿ ನಿತ್ಯಂ ಯೋಗಿವನಂ ಕ್ವಚಿತ್ ।
ಕೃಷ್ಣಾವತಾರೇ ಭಗವಾನ್ ಜ್ಞಾತ್ವಾ ಗೋವರ್ಧನಂ ದ್ವಿಜಂ ॥ ೯೭ ॥

ಸಂಪ್ರಾಪ್ತಂ ನಿಜಸಾರೂಪ್ಯಂ ನಂದಾದ್ಯೈಃ ಸಮಭೋಜಯತ್ ।
ಅನ್ನಕೂಟೇನ ದೋಹೇನ ತರ್ಪಯಿತ್ವಾ ಬಲಂ ದ್ವಿಜಂ ॥ ೯೮ ॥

ತೃಟ್ಪರೀತಂ ಸಮಾಜ್ಞಾಯ ನವಮೇಘಾನಪಾಯಯತ್ ।
ಮಿತ್ರಂ ಸ ವಾಸುದೇವಸ್ಯ ಸಂಜಾತಂ ತೇನ ಕರ್ಮಣಾ ॥ ೯೯ ॥

ತಂ ಯೋ ಭಕ್ತ್ಯಾ ನರೋ ದೇವಿ ಪೂಜಯೇದುಪಚಾರಕೈಃ ।
ಪ್ರದಕ್ಷಿಣಂ ಪರಿಕ್ರಾಮೇನ್ನ ತಸ್ಯ ಪುನರುದ್ಭವಃ ॥ ೧೦೦ ॥

---

೯೬-೯೭. ಬಳಿಕ ಜಗತ್ಪತಿಯು, ಗೋವರ್ಧನವಿಪ್ರನು ಗಿರಿಯ ರೂಪವನ್ನು ತಾಳುವಂತೆ ಮಾಡಿ, ಆ ಗಿರಿಯು ನೆಲೆಸಿರುವ ಯೋಗಿವನಕ್ಕೆ ಆಗಿನಿಂದಲೂ ಬರುತ್ತಿರುವನು.

೯೭-೯೮. ಕೃಷ್ಣಾವತಾರದಲ್ಲಿ ಭಗವಂತನು ಗೋವರ್ಧನ ದ್ವಿಜನು ತನ್ನ ಸಮೀಪದಲ್ಲಿರುವುದನ್ನು ತಿಳಿದು ನಂದ ಮುಂತಾದವರಿಂದ ಅವನಿಗೆ ಭೋಜನಮಾಡಿಸಿದನು. ಬಲಶಾಲಿಯಾದ ದ್ವಿಜನನ್ನು ಇಷ್ಟವಾದ ಅನ್ನರಾಶಿಯಿಂದ ತೃಪ್ತಿಪಡಿಸಿದನು

೯೯. ಅವನಿಗೆ ಬಾಯಾರಿಕೆಯಾಗಿದೆಯೆಂದು ತಿಳಿದು ಸ್ವಾಮಿಯು ನೂತನ ಮೇಘಗಳನ್ನು ತರಿಸಿ, ಆ ಜಲದಿಂದ ಅವನ ದಾಹವನ್ನಡಗಿಸಿದನು. ಹಾಗೆ ಮಾಡಿದುದರಿಂದ ಅವನು ವಾಸುದೇವನಿಗೆ ಸ್ನೇಹಿತನಾದನು.

೧೦೦. ದೇವೀ! ಆ ಗೋವರ್ಧನಗಿರಿಯನ್ನು ಉಪಚಾರದ್ರವ್ಯಗಳಿಂದ ಭಕ್ತಿಪೂರ್ವಕವಾಗಿ ಪೂಜಿಸಿ ಪ್ರದಕ್ಷಿಣೆ ಮಾಡುವ ಮನುಷ್ಯನಿಗೆ ಪುನರ್ಜನ್ಮವಿಲ್ಲ.

ಗೋವರ್ಧನೋ ಗಿರಿಃ ಪುಣ್ಯೋ ಜಾತೋ ಹರಿನಿವಾಸತಃ ।
ತಂ ದೃಷ್ಟ್ವಾ ದರ್ಶನೇನಾಲಮನ್ಯಪುಣ್ಯಾಚಲಸ್ಯ ಚ ॥ ೧೦೧ ॥
ಯಾಮುನಂ ಪುಲಿನಂ ರಮ್ಯಂ ಕೃಷ್ಣವಿಕ್ರೀಡನಾಂಚಿತಂ ।
ತ್ವಮೇವ ಬ್ರೂಹಿ ಸುಭಗೇ ಕ್ವಾನ್ಯತ್ರ ಜಗತೀತಲೇ ॥ ೧೦೨ ॥
ತಸ್ಮಾತ್ಸರ್ವಪ್ರಯತ್ನೇನ ತ್ಯಕ್ತ್ವಾ ವನನದೀಗಿರೀನ್ ।
ಸುಪುಣ್ಯಾನ್ಪುಣ್ಯದಾನ್ನೄಣಾಂ ಸೇವ್ಯಂ ವೃಂದಾವನಂ ಸದಾ ॥ ೧೦೩ ॥
ಯಮೀ ಪುಣ್ಯಾ ನದೀ ಯತ್ರ ಪುಣ್ಯೋ ಗೋವರ್ಧನೋ ಗಿರಿಃ ।
ತತ್ಕಿಂ ವೃಂದಾವನಾತ್ಪುಣ್ಯಮರಣ್ಯಂ ಭುವಿ ವಿದ್ಯತೇ ॥ ೧೦೪ ॥
ಕಲಿಕಲ್ಮಷಭೀತಾನಾಂ ವಿಷಯಾಸಕ್ತಚೇತಸಾಂ ।
ನಾನ್ಯಂ ವೃಂದಾವನಾತ್ ಸೇವ್ಯಮಸ್ತಿ ಲೋಕೇಷ್ವಪಿ ತ್ರಿಷು ॥ ೧೦೫ ॥

---

೧೦೧. ಗೋವರ್ಧನಗಿರಿಯಲ್ಲಿ ಹರಿಯು ವಾಸಮಾಡಿದುದರಿಂದ ಅದು ಪುಣ್ಯಕ್ಷೇತ್ರವಾಯಿತು. ಅದನ್ನು ದರ್ಶನಮಾಡಿದರೆ ಸಕಲಪುಣ್ಯಾಚಲದರ್ಶನ ಫಲವೂ ಬರುವುದು. ಅದರ ದರ್ಶನಮಾಡಿದ ಮೇಲೆ ಇತರ ಪುಣ್ಯಾಚಲ ದರ್ಶನಮಾಡುವ ಅವಶ್ಯಕತೆಯಿಲ್ಲ.

೧೦೨. ಸುಂದರೀ! ಕೃಷ್ಣನು ವಿಹಾರಮಾಡುತ್ತಿರುವ ಮನೋಹರವಾದ ಯಮುನಾನದಿಯ ಮರಳುದಿಣ್ಣೆಗೆ ಸಮಾನವಾದುದು ಭೂಮಂಡಲದಲ್ಲಿ ಬೇರೆ ಎಲ್ಲಿದೆ? ನೀನೇ ಹೇಳು!

೧೦೩. ಆದಕಾರಣ ಅತ್ಯಂತ ಪುಣ್ಯಕರವು, ಮನುಷ್ಯರಿಗೆ ಪುಣ್ಯದಾಯಕವೂ ಆದ ವನ, ನದಿ, ಗಿರಿ ಇವುಗಳನ್ನೆಲ್ಲಾ ಬಿಟ್ಟು ಯಾವಾಗಲೂ ವೃಂದಾವನವನ್ನೇ ಸೇವಿಸಬೇಕು.

೧೦೪. ಪುಣ್ಯಕರವಾದ ಯಮುನಾನದೀ ಮತ್ತು ಪುಣ್ಯಪ್ರದವಾದ ಗೋವರ್ಧನಗಿರಿ ಇವುಗಳಿರುವ ವೃಂದಾವನಕ್ಕಿಂತಲೂ ಪುಣ್ಯಕರವಾದ ವನವು ಭೂಲೋಕದಲ್ಲಿದೆಯೇ ಏನು?

೧೦೫. ಕಲಿಯ ಕಲ್ಮಷದಿಂದ ಭಯಪಡುತ್ತಿರುವ, ಸ್ರಕ್ಚಂದನಾದಿ ವಿಷಯಗಳಲ್ಲಿಯೇ ಆಸಕ್ತಚಿತ್ತರಾದ ಮನುಜರಿಗೆ ಮೂರುಲೋಕಗಳಲ್ಲಿಯೂ ವೃಂದಾವನಕ್ಕಿಂತ ಬೇರೆ ಸೇವ್ಯವಾದುದಿಲ್ಲ.

ಯಸ್ಮಿನ್ನಿತ್ಯಂ ವಿಚರತಿ ಹರಿರ್ಗೋಪಗೋಗೋಪಿಕಾಭಿ
ರ್ಬರ್ಹಾಪೀಡೋ ನಟವರವಪುಃ ಕರ್ಣಿಕಾರಾವತಂಸೀ |
ವಂಶೀಹಂಸೀಸ್ವನಜಿತರವೋ ವೈಜಯಂತೀವೃತಾಂಗೋ
ನಂದಸ್ಯಾಂಗೋ ಧೃತಮಣಿಗಣಾ ಯಶ್ಚ ಹಂಸೋಹವಾಖ್ಯಃ || ೧೦೬ ||

ಯಸ್ಯ ಧ್ಯಾನಂ ನಗಜನಿಯುತೋಽಹರ್ನಿಶಂ ವೈ ಗಿರೀಶೋ
ಭಕ್ತಿಕ್ಲಿನ್ನೋ ರಹಸಿ ಕುರುತೇ ಹ್ಯರ್ಧನಾರೀಶ್ವರಾಖ್ಯಃ |
ಗಾಯತ್ರೀಂ ಸ್ತ್ರೀಂ ಹೃದಯಕುಹರೇ ಪದ್ಮಯೋನಿರ್ವಿಧತ್ತೇ
ನೇತ್ರೈರಿಂದ್ರೋ ದಶಶತಮಿತೈರ್ವೀಕ್ಷತೇ ವೈ ಶಚೀಂ ತಾಂ || ೧೦೭ ||

ಅಶ್ರೋತ್ರೇಶೋ ರಹಸಿ ವನಿತಾಂ ರಕ್ಷತಿ ಸ್ವಾಂ ರಸಜ್ಞೋ
ವಂಶೀನಾದಶ್ರವಣಜಭಿಯಾ ಕಾಮುಕಾತರ್ಜನೀನಾಂ |
ಭೇದಂ ಶೋಷಂ ತದನು ದಹನಂ ಭೇದನಂ ಪ್ರಾಪ್ಯ ಯಾಸೀ
ಚ್ಛ್ರೀಗೋಪೀಶಾಧರಜನಿಸುಧಾಂ ಸಾದರಂ ಶೀಲಯಂತೀ || ೧೦೮ ||

---

೧೦೬. ನವಿಲುಗರಿಯಿಂದ ಅಲಂಕೃತವಾದ ಶಿಖೆಯುಳ್ಳ, ಉತ್ತಮ ನಟನಂತೆ ಶರೀರವುಳ್ಳ, ಶಿರಸ್ಸಿನಲ್ಲಿ ಬೆಟ್ಟತಾವರೆ ಹೂವನ್ನು ಮುಡಿದುಕೊಂಡಿರುವ, ಕೈಯಲ್ಲಿ ಕೊಳಲನ್ನು ಹಿಡಿದುಕೊಂಡಿರುವ, ಹಂಸಧ್ವನಿಗಿಂತಲೂ ಉತ್ಕೃಷ್ಟಧ್ವನಿ ಮಾಡುತ್ತಿರುವ, ವೈಜಯಂತೀಮಾಲೆಯನ್ನು ಹಾಕಿಕೊಂಡಿರುವ, ನಂದ ಗೋಪನ ಅವಯವಗಳಿಂದ ಉದ್ಭೃತವಾದ ಮಣಿಗಳನ್ನು ಧರಿಸಿರುವ, ಹಂಸನಾಮಕನಾದ, ಅಹೇಯನಾದುದರಿಂದ ಅಹಂಎನಿಸಿರುವ ಹರಿಯು ಗೋಪಾಲಕರು ಮತ್ತು ಗೋಪಿಕಾಸ್ತ್ರೀಯರೊಡನೆ ವೃಂದಾವನದಲ್ಲಿ ಯಾವಾಗಲೂ ಸಂಚರಿಸುತ್ತಿರುವನು.

೧೦೭-೧೦೮. ಕೃಷ್ಣನು ಮಾಡುತ್ತಿರುವ ವೇಣುನಾದವನ್ನು ಗೌರಿಯು ಕೇಳಿ ಮರುಳಾಗುವಳೆಂಬ ಶಂಕೆಯಿಂದ ಗಿರೀಶನು ಪಾರ್ವತಿಯನ್ನು ಎಡಬಿಡದೆ ತನ್ನಲ್ಲಿಯೇ ಇಟ್ಟುಕೊಂಡು ಭಕ್ತಿಯಿಂದ ಹಗಲಿರಳೂ ಅವನನ್ನೇ ಧ್ಯಾನಿಸುತ್ತ ಅರ್ಧನಾರೀಶ್ವರನೆನಿಸಿದವನು.

ಯಾಭಿರ್ವೃಂದಾವನಮನುಗತೋ ನಂದಸೂನುಃ ಕ್ಷಪಾಸು
ರೇಮೇ ಚಂದ್ರಾಂಶುಕಲಿತಸಮುದ್ಯೋತಭದ್ರೇ ನಿಕುಂಜೇ ।
ತಾಸಾಂ ದಿಷ್ಟಂ ಕಿಮಹಮಧುನಾ ವರ್ಣಯೇ ವಲ್ಲವೀನಾಂ
ಯಾಸಾಂ ಸಾಕ್ಷಾಚ್ಚರಣರಜಃ ಶ್ರೀಶವಿಧ್ಯಾದ್ಯಲಭ್ಯಂ ॥ ೧೦೯ ॥

ಯತ್ರ ಪ್ರಾಪ್ತಾಸ್ತೃಣಮೃಗಖಗಾ ಯೇ ಕೃಮಿಪ್ರಾಣಿವೃಂದಾ
ವೃಂದಾರಣ್ಯೇ ವಿಧಿಹರರಮಾಭ್ಯರ್ಹಣೀಯಾ ಭವಂತಿ ।
ತತ್ಸಂಪ್ರಾಪ್ಯಾದ್ವಯಪದರತೋ ಬ್ರಹ್ಮಭೂಯಂ ಗತಃ ಕೌ
ಪ್ರೇಮಸ್ನಿಗ್ಧೋ ವಿಹರತಿ ಸುಖಾಂಭೋಧಿಕಲ್ಲೋಲಮಗ್ನಃ ॥ ೧೧೦ ॥

---

ಈ ಶಂಕೆಯಿಂದಲೇ ಬ್ರಹ್ಮನು ಗಾಯತ್ರೀ ಎಂಬ ಸ್ತ್ರೀಯನ್ನು ತನ್ನ ಹೃದಯಗುಹೆಯಲ್ಲಿಯೇ ಧರಿಸಿರುವನು. ಅಂತೆಯೇ ಇಂದ್ರನೂ ಆ ಶಚೀದೇವಿಯನ್ನು ಸಾವಿರ ಕಣ್ಣುಗಳಿಂದ ನೋಡುತ್ತಿರುವನು. ಆಶ್ರೋತ್ರೇಶನು, ರಸಜ್ಞನೂ ಆದ ಶೇಷನೂ ಕೂಡ ತನ್ನ ಕಾಂತೆಯನ್ನು ರಹಸ್ಯವಾಗಿ ರಕ್ಷಿಸುತ್ತಿರುವನು. ಸೀಮಂತಿನಿಯರ ಕಾಮವಾರ್ತೆಯು ಗೋಪೀನಾಥನ ಅಧರಾಮೃತವನ್ನು ಆದರಪೂರ್ವಕವಾಗಿ ಆಸ್ವಾದನೆಮಾಡಿ, ಅಲ್ಲಿಯೇ ಲೀನವಾಗಿ, ಮಾತು ಮುಂದುವರಿಯದೆ ನಿಂತು, ನೀರಸವಾಗಿ, ಬೆಂದು ಅಡಗಿಹೋಯಿತು.

೧೦೯. ನಂದಕುಮಾರನು ರಾತ್ರಿಕಾಲಗಳಲ್ಲಿ ವೃಂದಾವನಕ್ಕೆ ಬಂದು ಚಂದ್ರರಶ್ಮಿಗಳ ವ್ಯಾಪನೆಯಿಂದ ಪ್ರಕಾಶಿತವಾದ ಶುಭಲತಾಗೃಹದಲ್ಲಿ ಯಾವ ಗೋಪಿಕಾಸ್ತ್ರೀಯರೊಡನೆ ವಿಹರಿಸಿದನೋ ಅಂತಹ ಗೋಪಿಕಾಸ್ತ್ರೀಯರ ಅದೃಷ್ಟವನ್ನು ನಾನು ಈಗ ಏನೆಂದು ವರ್ಣಿಸಲಿ! ಅವರ ಪಾದಕಮಲಗಳ ಧೂಳಿಯು ಈಶ, ವಿಧಿ ಮುಂತಾದವರಿಗೂ ಹೊಂದಲಶಕ್ಯವು.

೧೧೦. ಆ ವೃಂದಾವನದಲ್ಲಿ ವಾಸಿಸುವ ಮೃಗ, ಪಕ್ಷಿ, ಕೃಮಿ ಮುಂತಾದ ಪ್ರಾಣಿವರ್ಗ ಮತ್ತು ಅಲ್ಲಿ ಬೆಳೆದಿರುವ ಹುಲ್ಲು ಮುಂತಾದ ಸ್ಥಾವರ ವಸ್ತುಗಳೂ ಸಹ ಬ್ರಹ್ಮ, ರುದ್ರ, ಲಕ್ಷ್ಮೀದೇವಿ ಇವರಿಂದ ಸತ್ಕರಿಸಲ್ಪಡಲರ್ಹಗಳಾಗುವುವು. ಅಂತಹ ವೃಂದಾವನ ಯಾತ್ರೆಯನ್ನು ಮಾಡಿದರೆ ಮನುಷ್ಯನು

ಯತ್ರ ಕ್ರೂರಾಃ ಸಹಜಮಸುಭೃದ್ರಾಪ್ತಜಾಂತಾ ವಿಸೃಜ್ಯ
ವೈರಂ ಸ್ವೈರಂ ಸುಹೃದ ಇವ ತತ್ಸೌಖ್ಯಮೇವಾಶ್ರಯಂತೇ ।
ತತ್ಕಿಂ ಪ್ರಾಪ್ಯ ಪ್ರಭುಮಿವ ಜನಃ ಸಂಪರಿತ್ಯಜ್ಯ ಗಚ್ಛೇ
ಕ್ವಾಪ್ಯನ್ಯತ್ರ ಪ್ರಭವತಿ ಸುಖೀ ಕೃಷ್ಣಮಾಯಾಕರಂಡೇ ॥ ೧೧೧ ॥

ವೃಂದಾರಣ್ಯಂ ತದಖಿಲಧರಾಪುಣ್ಯರೂಪಂ ಶ್ರಯನ್ಮೇ
ಸ್ವಾಂತಂ ಧ್ವಾಂತಂ ಜಗದಿದಮಧಃಕೃತ್ಯ ವರ್ವರ್ತಿ ಶಶ್ವತ್ ।
ಗೋಪೀನಾಥಃ ಪ್ರತಿಪದಮಹಿ ಪ್ರೇಮಸಂಕ್ಲಿನ್ನಚೇತಾ
ನೀಚಂ ವೋಚ್ಚಂ ನ ಚ ಗಣಯತಿ ಪ್ರೋದ್ಧರತ್ಯೇವ ಭಕ್ತಾನ್ ॥ ೧೧೨ ॥

---

ಭೂಮಿಯಲ್ಲಿ ಸುಖಸಾಗರದ ಅಲೆಗಳಲ್ಲಿ ಮುಳುಗಿದವನಾಗಿ, ಪ್ರೇಮದಿಂದ ಕೂಡಿ ವಿಹರಿಸುವನು. ಬಳಿಕ ಅದ್ವಿತೀಯನಾದ ಪರಬ್ರಹ್ಮನ ಪಾದಸೇವೆಯಲ್ಲಾಸಕ್ತನಾಗಿ ಮುಕ್ತಿಯನ್ನು ಹೊಂದುವನು.

೧೧೧. ಸ್ವಾಭಾವಿಕವಾಗಿ ಪರಸ್ಪರ ವೈರಿಗಳಾದ ಕ್ರೂರಜಂತುಗಳೂ ಸಹ ಯಾವ ವೃಂದಾವನದಲ್ಲಿ ಸೇರಿದಾಗ, ಸಹಜವಾದ ಬಹು ವೈರವನ್ನೂ ಬಿಟ್ಟು ಸ್ನೇಹಿತರಂತೆ ವರ್ತಿಸುತ್ತಾ ಸುಖವನ್ನು ಹೊಂದುವುವೋ, ಅಂತಹ ಪ್ರಭುವಿನಂತಿರುವ ವೃಂದಾವನಕ್ಕೆ ಹೋದರೆ, ಜನರು ಸುಖಪಡುವರೆಂದು ಹೇಳತಕ್ಕುದೇನು ? ಹೀಗಿರುವುದರಿಂದ ಅಂತಹ ವೃಂದಾವನವನ್ನು ಬಿಟ್ಟು ಕೃಷ್ಣಮಾಯೆಯ ಪೆಟ್ಟಿಗೆ ಯಂತಿರುವ ಯಾವ ಸ್ಥಳಕ್ಕೆ ಹೋದರೆ ಸುಖವು ಲಭಿಸೀತು ! ಎಂದರೆ ವೃಂದಾವನವು ಅತ್ಯಂತ ಸುಖದಾಯಕವು; ಅಂತಹ ಸುಖಪ್ರದ ಸ್ಥಾನವು ಮತ್ತೊಂದಿಲ್ಲವೆಂದು ಭಾವ.

೧೧೨. ವೃಂದಾವನವು ಸಮಸ್ತ ಭೂಮಂಡಲದಲ್ಲಿಯೂ ಪುಣ್ಯರೂಪವಾದುದು. ಅದನ್ನಾಶ್ರಯಿಸಿರುವ ನನ್ನ ಚಿತ್ತವು ಈ ಜಗತ್ತನ್ನೇ ತೃಣೀಕರಿಸಿ ವರ್ತಿಸುವುದು. ಆ ವೃಂದಾವನಕ್ಷೇತ್ರದ ಸಕಲಪ್ರದೇಶಗಳಲ್ಲಿಯೂ ಪ್ರೇಮಪೂರಿತದೃಷ್ಟಿಯನ್ನು ಇಟ್ಟಿರುವ ಗೋಪೀನಾಥನು ಉಚ್ಚನೀಚಭಾವವನ್ನು ಲೆಕ್ಕಿಸದೆ ವೃಂದಾವನ ಯಾತ್ರೆಯನ್ನು ಮಾಡಿದ ಭಕ್ತರನ್ನೆಲ್ಲಾ ಖಂಡಿತವಾಗಿ ಉದ್ಧರಿಸುವನು.

ಗೋಪಾನ್ ಗೋಪೀಃ ಖಗಮೃಗನಗಾಗಾಪಗಾಭೂರಜಾಂಸಿ
ಸ್ಮೃತ್ವಾ ದೃಷ್ಟ್ವಾ ಪ್ರಣಮತಿ ಜನೇ ಪ್ರೇಮರಜ್ಜ್ವಾ ನಿಬದ್ಧಃ ।
ದಾಸ್ಯಂ ಭಕ್ತೇ ಕಲಯತಿತರಾಂ ತತ್ಕಿಮನ್ಯಂ ವ್ರಜೇಶಾತ್
ಸೇವ್ಯಂ ದೇವಂ ಗಣಯ ವಿಧಿಜೇಽಹಂ ತು ಜಾನಾಮಿ ನೈವ ॥ ೧೧೩ ॥

ಏತತ್ಸಂಕ್ಷೇಪತಃ ಪ್ರೋಕ್ತಂ ವೃಂದಾರಣ್ಯಸಮುದ್ಭವಂ ।
ಮಾಹಾತ್ಮ್ಯಂ ವಿಧಿಜೇ ತುಭ್ಯಂ ವಕ್ತವ್ಯಂ ನಾವಶೇಷಿತಂ ॥ ೧೧೪ ॥

ಸಂಸಾರಭೀತೈರ್ಮನುಜೈರೇತದೇವ ಸದಾನಘೈಃ ।
ಶ್ರೋತವ್ಯಂ ಕೀರ್ತನೀಯಂ ಚ ಸ್ಮರ್ತವ್ಯಂ ಧ್ಯೇಯಮೇವ ಚ ॥ ೧೧೫ ॥

---

೧೧೩. ಗೋಪಾಲಕರು, ಗೋಪಿಕಾಸ್ತ್ರೀಯರು, ವೃಂದಾವನದಲ್ಲಿರುವ ಪಕ್ಷಿ, ಮೃಗ, ಬೆಟ್ಟ, ನದಿ, ಭೂಮಿ ಮತ್ತು ಧೂಳಿ ಇವುಗಳನ್ನು ಸ್ಮರಿಸಿ ದರ್ಶನಮಾಡಿ ನಮಸ್ಕರಿಸುವ ಭಕ್ತಜನರಲ್ಲಿ ಸ್ನೇಹಪಾಶಬದ್ಧನಾದ ಕೃಷ್ಣನು ದಾಸಭಾವವನ್ನು ತೋರಿಸುವನು. ವಿಧಿಕುಮಾರೀ! ಇಂತಹ ಭಕ್ತವತ್ಸಲನಾದ ವ್ರಜಪತಿಯನ್ನುಳಿದು ಸೇವಿಸಲು ಯೋಗ್ಯನಾದ ಇನ್ನೊಬ್ಬ ದೇವನನ್ನು ನಾನು ಕಾಣೆನು!

೧೧೪. ವಿಧಿಜಾತೇ! ಈ ವೃಂದಾರಣ್ಯ ಮಾಹಾತ್ಮ್ಯೆಯನ್ನು ಸಂಕ್ಷೇಪವಾಗಿ ನಿನಗೆ ಹೇಳಿರುವೆನು. ಇನ್ನು ನಿನಗೆ ಹೇಳಬೇಕಾದುದಾವುದೂ ಉಳಿದಿಲ್ಲ.

೧೧೫. ಸಂಸಾರದಲ್ಲಿ ಸಿಲುಕಿ ಭಯಪಡುತ್ತಿರುವ, ಪಾಪರಹಿತರಾದ ಮನುಜರು ಯಾವಾಗಲೂ ಈ ವೃಂದಾವನ ಮಾಹಾತ್ಮ್ಯೆಯನ್ನು ಕೇಳಬೇಕು, ಪಠನೆ ಮಾಡಬೇಕು, ಅನುಸಂಧಾನಮಾಡಬೇಕು ಮತ್ತು ಧ್ಯಾನಿಸಬೇಕು.

ವೃಂದಾವನಸ್ಯ ಮಾಹಾತ್ಮ್ಯಂ ಯಃ ಶೃಣೋತಿ ನರಃ ಶುಚಿಃ |
ಕೀರ್ತಯೇದ್ವಾಪಿ ವಿಧಿಜೇ ಸೋಽಪಿ ವಿಷ್ಣುರ್ನ ಸಂಶಯಃ || ೧೧೬ ||

ಇತಿ ಶ್ರೀನಾರದೀಯಮಹಾಪುರಾಣೋತ್ತರಭಾಗೇ ವಸುಮೋಹಿನೀ
ಸಂವಾದೇ ಶ್ರೀವೃಂದಾವನಮಾಹಾತ್ಮ್ಯಂ ನಾಮಾ
ಶೀತಿತಮೋಽಧ್ಯಾಯಃ

ವೃಂದಾವನಮಾಹಾತ್ಮ್ಯಂ ಸಮಾಪ್ತಂ

---

೧೧೬. ವಿಧಿಕುಮಾರೀ ! ವೃಂದಾರಣ್ಯದ ಮಾಹಾತ್ಮ್ಯೆಯನ್ನು ಪರಿಶುದ್ಧನಾಗಿ ಶ್ರವಣಪಠನೆ ಮಾಡುವವನೂ ಸಹ ವಿಷ್ಣುವಿನ ಅನುಗ್ರಹವನ್ನು ಪಡೆದು ಅವನ ಸಾರೂಪ್ಯವನ್ನು ಹೊಂದುವನು. ಸಂದೇಹವಿಲ್ಲ.

ಇಂತು ಶ್ರೀ ನಾರದೀಯ ಪುರಾಣೋತ್ತರಭಾಗದೊಳು ವಸುಮೋಹಿನೀ
ಸಂವಾದದಲ್ಲಿ ಶ್ರೀವೃಂದಾವನಮಾಹಾತ್ಮ್ಯೆಯ ಕಥನವೆಂಬ
ಎಂಬತ್ತನೆಯ ಅಧ್ಯಾಯವು ಮುಗಿದುದು.



## ಏಕಾಶೀತಿತಮೋಽಧ್ಯಾಯಃ

---

### ವಸುರುವಾಚ

ಯದೇತತ್ಕೀರ್ತಿತಂ ದೇವಿ ತೀರ್ಥಮಾಹಾತ್ಮ್ಯಮುತ್ತಮಂ
ತಲ್ಲಭಸ್ವ ಮಹಾಭಾಗೇ ಚರಿತ್ವಾ ತೀರ್ಥಮಂಡಲಂ ॥ ೧ ॥

ಅಹಂ ಬ್ರಹ್ಮಾಣಮಾಮಂತ್ರ್ಯ ಪಿತರಂ ತೇ ನರೇಶ್ವರಿ ।
ವೃಂದಾವನಮುಪಾಗಮ್ಯ ಚರಿಷ್ಯಾಮಿ ಮೃಗೈಃ ಸಹ ॥ ೨ ॥

### ಸೂತ ಉವಾಚ

ಇತ್ಯುಕ್ತ್ವಾ ಮೋಹಿನೀಂ ವಿಪ್ರೋ ವಸುಸ್ತಸ್ಯಾಃ ಪುರೋಹಿತಃ ।
ಸತ್ಕೃತ್ಯ ಪೂಜಿತೋಽಭೀಕ್ಷ್ಣಂ ಬ್ರಹ್ಮಲೋಕಂ ಯಯೌ ತಥಾ ॥ ೩ ॥

---

## ಎಂಬತ್ತೊಂದನೆಯ ಅಧ್ಯಾಯ

೧. ವಸುವು ಹೇಳಿದನು :—ಧನ್ಯಳಾದ ದೇವೀ! ನಿನಗೆ ಹೇಳಿರುವ ಉತ್ತಮವಾದ ತೀರ್ಥಮಾಹಾತ್ಮ್ಯೆಯನ್ನು ಮನದಲ್ಲಿಟ್ಟು ತೀರ್ಥಯಾತ್ರೆಮಾಡಿ ಫಲವನ್ನು ಹೊಂದು.

೨. ನರೇಶ್ವರೀ! ನಾನು ನಿನ್ನ ತಂದೆಯಾದ ಬ್ರಹ್ಮನಿಗೆ ಈ ವೃತ್ತಾಂತ ವನ್ನು ತಿಳಿಸಿ ವೃಂದಾವನಕ್ಕೆ ಬಂದು ಮೃಗಗಳೊಡನೆ ವರ್ತಿಸುವೆನು.

೩. ಸೂತನು ಹೇಳಿದನು :—ಹೀಗೆ ಮೋಹಿನಿಗೆ ಹೇಳಿ ಅವಳ ಪುರೋ ಹಿತನಾದ ವಸುನಾಮಕಬ್ರಾಹ್ಮಣನು ಆಕೆಯಿಂದ ಬಹುವಾಗಿ ಸತ್ಕರಿಸಲ್ಪಟ್ಟು ಪೂಜಿತನಾಗಿ ಬ್ರಹ್ಮಲೋಕಕ್ಕೆ ಹೋದನು.

ಸ ಗತ್ವಾ ತತ್ರ ಧಾತಾರಂ ಬ್ರಹ್ಮಾಣಂ ಜಗತಾಂ ವಿಧಿಂ ।
ಪ್ರಣಮ್ಯ ಮೋಹಿನೀವೃತ್ತಂ ತಂ ಕಾರ್ತ್ಸ್ನ್ಯೇನ ನ್ಯವೇದಯತ್ ॥ ೪ ॥
ತಚ್ಛ್ರುತ್ವಾ ವಚನಂ ಬ್ರಹ್ಮಾ ಬ್ರಾಹ್ಮಣಸ್ಯ ವಸೋರ್ದ್ವಿಜಾಃ ।
ಪ್ರಸನ್ನಃ ಪ್ರಾಹ ತಂ ವತ್ಸ ಸುಕೃತಂ ಹಿ ತ್ವಯಾ ಕೃತಂ ॥ ೫ ॥
ಯಾ ಮಯಾ ಮೋಹಿನೀ ವಿಪ್ರ ದೇವಕಾರ್ಯಾರ್ಥಮಾತ್ಮಜಾ ।
ನಿಯುಕ್ತಾ ಕೃತಕಾರ್ಯಾ ಸಾ ತ್ವಯಾ ಶಪ್ತಾ ಕ್ಷಯಂ ಗತಾ ॥ ೬ ॥
ಭೂಯೋ ಮಮಾಜ್ಞಯಾ ವತ್ಸ ತ್ವಯಾ ಸಂಜೀವಿತಾಧುನಾ ।
ನೀತಾ ಕೃತಾರ್ಥತಾಂ ತಸ್ಮಾತ್ಕೋಽನ್ಯಸ್ತ್ವತ್ತೋಽಧಿಕಃ ಕೃತೀ ॥ ೭ ॥
ಯತ್ತ್ವಯಾ ಮಹ್ಯಮಾಖ್ಯಾತಂ ಮೋಹಿನೀವೃತ್ತಮುತ್ತಮಂ ।
ಪ್ರಸನ್ನಸ್ತೇನ ದಾಸ್ಯಾಮಿ ಬ್ರೂಹಿ ತುಭ್ಯಂ ವರಂ ದ್ವಿಜ ॥ ೮ ॥

---

೪. ಆ ವಸುವು ಜಗತ್ಸೃಷ್ಟಿಕರ್ತನಾದ ಬ್ರಹ್ಮನ ಬಳಿಗೆ ಹೋಗಿ ನಮಸ್ಕರಿಸಿ ನಡೆದ ಮೋಹಿನೀವೃತ್ತಾಂತವನ್ನೆಲ್ಲಾ ಹೇಳಿದನು.

೫. ಶೌನಕಾದಿಬ್ರಾಹ್ಮಣರೇ! ವಸುನಾಮಕಬ್ರಾಹ್ಮಣನು ಹೇಳಿದ ವೃತ್ತಾಂತವನ್ನು ಕೇಳಿ ಬ್ರಹ್ಮನು ಪ್ರಸನ್ನನಾಗಿ ವತ್ಸ! ನೀನು ಒಳ್ಳೆಯ ಕೆಲಸವನ್ನು ಮಾಡಿದೆ ಎಂದು ಹೇಳಿದನು.

೬. ಬ್ರಾಹ್ಮಣಾ! ದೇವತೆಗಳ ಕೆಲಸಕ್ಕಾಗಿ ನನ್ನ ಪುತ್ರಿಯಾದ ಮೋಹಿನಿಯು ನಿಯೋಗಿಸಲ್ಪಟ್ಟು ಅದರಂತೆ ಅವಳು ಕೆಲಸಮಾಡಿದನಂತರ ನೀನು ಅವಳಿಗೆ ಶಾಪಕೊಡಲಾಗಿ ಅವಳು ನಾಶವಾದಳು.

೭. ವತ್ಸಾ! ನೀನು ಪುನಃ ನನ್ನ ಅಪ್ಪಣೆಯ ಪ್ರಕಾರ ಆಕೆಯನ್ನು ಬದುಕಿಸಿರುವೆ. ಅಷ್ಟೇ ಅಲ್ಲ; ಆಕೆಗೆ ತೀರ್ಥಕ್ಷೇತ್ರಮಾಹಾತ್ಮ್ಯಾದಿಧರ್ಮಗಳನ್ನೂ ಉಪದೇಶಿಸಿ ಕೃತಾರ್ಥಳನ್ನಾಗಿ ಮಾಡಿರುವೆ. ಆದಕಾರಣ ನಿನಗಿಂತ ಹೆಚ್ಚು ಭಾಗ್ಯಶಾಲಿಯು ಇನ್ನಾರು?

೮. ದ್ವಿಜಾ! ನೀನು ಉತ್ತಮವಾದ ಮೋಹಿನೀವೃತ್ತಾಂತವನ್ನು ನನಗೆ ಹೇಳಿರುವುದರಿಂದ ಪ್ರಸನ್ನನಾಗಿರುವೆನು. ಅದರಿಂದ ನಿನಗೆ ವರವನ್ನು ಕೊಡುವೆನು. ನಿನಗೆ ಬೇಕಾದುದನ್ನು ಕೇಳು ಎಂದು ಬ್ರಹ್ಮನು ದ್ವಿಜನಿಗೆ ಹೇಳಿದನು.

ಇತ್ಯುಕ್ತಃ ಸ ದ್ವಿಜಸ್ತೇನ ಬ್ರಹ್ಮಣಾ ಲೋಕಭಾವಿನಾ ।
ಪ್ರಣಮ್ಯ ವವ್ರೇ ಸ ವರಂ ವೃಂದಾರಣ್ಯನಿವಾಸನಂ ॥ ೯ ॥

ತಚ್ಛ್ರುತ್ವಾ ಜಗತಾಂ ಧಾತಾ ಸ್ಮಯಮಾನಚತುರ್ಮುಖಃ ।
ಪ್ರಾಹ ಪ್ರಪನ್ನಾರ್ತಿಹರಸ್ತಥಾಸ್ತ್ವಿತಿ ಮುನೀಶ್ವರಾಃ ॥ ೧೦ ॥

ಸ ಪ್ರಣಮ್ಯ ವಿಧಾತಾರಂ ವಸುರ್ಹೃಷ್ಟಮನಾಸ್ತತಃ ।
ವೃಂದಾವನಮುಪಾವ್ರಜ್ಯ ತಪಶ್ಚಕ್ರೇ ಸಮಾಹಿತಃ ॥ ೧೧ ॥

ತಪತಸ್ತಸ್ಯ ತು ವಸೋಃ ಸಂವತ್ಸರಗಣಾ ದ್ವಿಜಾಃ ।
ವ್ಯತೀಯುಃ ಪಂಚಸಾಹಸ್ರಾಸ್ತತಸ್ತುಷ್ಟೋ ಹರಿಃ ಸ್ವಯಂ ॥ ೧೨ ॥

ಗೋಪೈಃ ಪ್ರಿಯಸಖೈರ್ದ್ವಿತ್ರೈರ್ಯುತೋಭ್ಯಾಹ ದ್ವಿಜೋತ್ತಮಂ ।
ಬ್ರೂಹಿ ಕಿಂ ವೃಣುಷೇ ವಿಪ್ರ ತುಷ್ಟೋಹಂ ತಪಸಾ ತವ ॥ ೧೩ ॥

---

೯. ಆ ದ್ವಿಜನು ಲೋಕಕರ್ತನಾದ ಬ್ರಹ್ಮನು ಹೀಗೆ ಹೇಳಿದುದನ್ನು ಕೇಳಿ ಅವನಿಗೆ ನಮಸ್ಕಾರಮಾಡಿ "ನಾನು ಯಾವಾಗಲೂ ವೃಂದಾವನದಲ್ಲಿಯೇ ವಾಸಿಸುವಂತೆ ಅನುಗ್ರಹಿಸು" ಎಂಬುದಾಗಿ ವರವನ್ನು ಕೇಳಿಕೊಂಡನು.

೧೦. ಮುನೀಶ್ವರರೇ! ಶರಣಾಗತರ ದುಃಖವನ್ನು ಪರಿಹರಿಸುವ, ಜಗತ್ಸೃಷ್ಟಿಕರ್ತನಾದ ಚತುರ್ಮುಖನು ಆ ಮಾತನ್ನು ಕೇಳಿ ನಕ್ಕು ಹಾಗೆಯೇ ಆಗಲಿ ಎಂದು ಹೇಳಿದನು.

೧೧. ಆ ವಸುವು ಸಂತುಷ್ಟಚಿತ್ತನಾಗಿ ಬ್ರಹ್ಮನಿಗೆ ನಮಸ್ಕಾರ ಮಾಡಿ ಪುನಃ ವೃಂದಾವನಕ್ಕೆ ಬಂದು ಶಾಂತನಾಗಿ ತಪಸ್ಸುಮಾಡಿದನು.

೧೨-೧೩. ಹಾಗೆಯೇ ತಪಸ್ಸು ಮಾಡುತ್ತಾ ವಸುವು ಐದುಸಾವಿರವರ್ಷಗಳನ್ನು ಕಳೆದನು. ಅನಂತರ ಆ ತಪಸ್ಸಿನಿಂದ ಹರಿಯು ಸಂತುಷ್ಟನಾಗಿ ಪ್ರಿಯಮಿತ್ರರಾದ ಇಬ್ಬರು ಮೂವರು ಗೋಪಾಲಕರೊಡನೆ ದ್ವಿಜೋತ್ತಮನ ಬಳಿಗೆ ಬಂದು ವಿಪ್ರಾ! ನಿನ್ನ ತಪಸ್ಸಿನಿಂದ ಸಂತುಷ್ಟನಾಗಿರುವೆನು. ನಿನಗೇನು ಬೇಕು? ವರಕೊಡುವೆನು ಕೇಳು ಎಂದು ಹೇಳಿದನು.

ತತಃ ಸ ವಸುರುತ್ಥಾಯ ಅಷ್ಟಾಂಗಾಲಿಂಗಿತಾವನಿಃ |
ಪ್ರಾಹ ವೃಂದಾವನೇ ದೇವ ವಾಸಮಿಚ್ಛಾಮಿ ಸರ್ವದಾ || ೧೪ ||

ಅಥ ವಿಷ್ಣುರ್ದ್ವಿಜಶ್ರೇಷ್ಠಾ ವರಂ ತದ್ವಾಂಛಿತಂ ದದೌ |
ತೇನಾಭಿವಂದಿತೋ ಭೂಯೋ ಹ್ಯಂತರ್ಧಾನಮುಪಾಗತಃ || ೧೫ ||

ಸ ದ್ವಿಜಸ್ತತ್ಪ್ರಭೃತ್ಯೇವಂ ಸ್ವೇಚ್ಛಾರೂಪಧರಃ ಸ್ಥಿತಃ |
ಚಿಂತಯನ್ ಸತತಂ ದೇವಂ ವೃಂದಾರಣ್ಯಕುತೂಹಲಂ || ೧೬ ||

ಕದಾಚಿದ್ಯಮುನಾತೀರೇ ನಿವಿಷ್ಟಸ್ತಂ ವಿಚಿಂತಯನ್ |
ದದರ್ಶ ನಾರದಂ ಪ್ರಾಪ್ತಂ ವೃಂದಾರಣ್ಯಂ ವಿಧೇಃ ಸುತಂ || ೧೭ ||

ಸ ತಂ ದೃಷ್ಟ್ವಾ ನಮಸ್ಕೃತ್ಯ ಪರಮಂ ಗುರುಮಾತ್ಮನಃ |
ಪಪ್ರಚ್ಛ ವಿವಿಧಾನ್ ಧರ್ಮಾನ್ ಭಗವದ್ಭಕ್ತಿವರ್ಧನಾನ್ || ೧೮ ||

---

೧೪. ಬಳಿಕ ಆ ವಸುವು ಎದ್ದು ಬಗ್ಗಿ ನೆಲದಮೇಲೆ ಸಾಷ್ಟಾಂಗನಮಸ್ಕಾರಮಾಡಿ ದೇವಾ! ಯಾವಾಗಲೂ ವೃಂದಾವನದಲ್ಲಿಯೇ ವಾಸಮಾಡಬೇಕೆಂದು ಬಯಸುವೆನು ಎಂದು ಹೇಳಿದನು.

೧೫. ದ್ವಿಜಶ್ರೇಷ್ಠರೇ! ವಿಷ್ಣುವು ವಸುವು ಬಯಸಿದ ವರವನ್ನು ಕೊಟ್ಟು ಅವನಿಂದ ಭಕ್ತಿಪೂರ್ವಕವಾಗಿ ನಮಸ್ಕರಿಸಲ್ಪಟ್ಟು ಪುನಃ ಅಂತರ್ಧಾನವನ್ನು ಹೊಂದಿದನು.

೧೬. ಆ ದ್ವಿಜನು ಆಗಿನಿಂದಲೂ ತನಗೆ ಇಷ್ಟಬಂದ ರೂಪವನ್ನು ತಾಳಿ ಯಾವಾಗಲೂ ವೃಂದಾರಣ್ಯದಲ್ಲಿ ಕುತೂಹಲಿಯಾದ ದೇವನನ್ನು ಚಿಂತಿಸುತ್ತಿದ್ದನು.

೧೭. ವಸುವು ಒಂದಾನೊಂದು ದಿನ ಆ ಕೃಷ್ಣನನ್ನು ಧ್ಯಾನಿಸುತ್ತಾ ಯಮುನಾನದಿಯ ತೀರದಲ್ಲಿ ಕುಳಿತಿರುವಾಗ ವೃಂದಾರಣ್ಯಕ್ಕೆ ಬಂದು ಅಲ್ಲಿ ಸನ್ನಿಹಿತನಾದ ಬ್ರಹ್ಮಪುತ್ರನಾದ ನಾರದಮುನಿಯನ್ನು ಕಂಡನು.

೧೮. ವಸುವು ಆ ನಾರದನನ್ನು ನೋಡಿ ತನಗೆ ಪರಮಗುರುವಾದ ಆ ಮುನಿಗೆ ನಮಸ್ಕಾರಮಾಡಿ ಭಗವದ್ಭಕ್ತಿಯನ್ನು ವೃದ್ಧಿಗೊಳಿಸುವಂತಹ ನಾನಾವಿಧ ಧರ್ಮಗಳನ್ನು ಕೇಳಿದನು.

ಸ ತೇನೈವ ಸುಸಂಪೃಷ್ಟೋ ನಾರದೋಽಧ್ಯಾತ್ಮದರ್ಶನಃ ।
ತಸ್ಮೈ ಪ್ರೋವಾಚ ನಿಖಿಲಂ ಭವಿಷ್ಯಂ ಚರಿತಂ ಹರೇಃ ॥ ೧೯ ॥

ಏಕದಾಹಂ ಗತೋ ವಿಪ್ರ ದೇವಂ ಕೈಲಾಸವಾಸಿನಂ ।
ಪ್ರಷ್ಟುಂ ಪ್ರಷ್ಟುಂ ಭವಿಷ್ಯಂ ಚ ವೃಂದಾವನರಹಸ್ಯಕಂ ॥ ೨೦ ॥

ತತಃ ಪ್ರಣಮ್ಯ ದೇವೇಶಂ ತಪಃಸಿದ್ಧೈಃ ಸಮಾವೃತಂ ।
ಮಹೇಶಂ ಸ್ವಮಹಿಮ್ನಾಪ್ತಸರ್ವಬ್ರಹ್ಮಾಂಡಗೋಲಕಂ ॥ ೨೧ ॥

ಅಪೃಚ್ಛಮೀಪ್ಸಿತಂ ಭದ್ರ ಸ ಮಾಂ ಪ್ರಾಹ ಸ್ಮಯನ್ ಹರಃ ।
ವೃಥಾತ್ರ ಯತ್ತ್ವಯಾ ಪೃಷ್ಟಂ ಹರೇರ್ವೃತ್ತಮನಾಗತಂ ॥ ೨೨ ॥

ತತ್ತೇ ಬ್ರವೀಮಿ ಯತ್ಪೂರ್ವಂ ಶ್ರುತಂ ಸುರಭಿವಕ್ತ್ರತಃ ।
ಏಕದಾ ಸುರಭಿರ್ದೃಷ್ಟಾ ಮಯಾ ಗೋಲೋಕಮಧ್ಯಗಾ ॥ ೨೩ ॥

---

೧೯. ಹೀಗೆ ಅವನು ಕೇಳಿದುದನ್ನು ಲಾಲಿಸಿ ಅಧ್ಯಾತ್ಮಜ್ಞಾನಿಯಾದ ನಾರದನು ಅವನಿಗೆ ಹರಿಯ ಭವಿಷ್ಯಚರಿತ್ರೆಯನ್ನು ಸಮಗ್ರವಾಗಿ ಹೇಳಿದನು.

೨೦. ವಿಪ್ರಾ! ಒಂದು ದಿನ ನಾನು ಕೈಲಾಸವಾಸಿಯಾದ ಮಹೇಶ್ವರ ದೇವನನ್ನು ನೋಡಿ ಭವಿಷ್ಯವಾದ ವೃಂದಾವನರಹಸ್ಯವನ್ನು ಕೇಳಬೇಕೆಂದು ಅಲ್ಲಿಗೆ ಹೋದೆನು.

೨೧. ಬಳಿಕ ಅಲ್ಲಿ ತಪಸ್ಸಿದ್ಧರಾದ ಮುನಿಗಳಿಂದ ಪರಿವೃತನಾದ, ಬ್ರಹ್ಮಾಂಡಗೋಲಕದಲ್ಲೆಲ್ಲಾ ವ್ಯಾಪಿಸಿದ ಮಹಿಮೆಯುಳ್ಳ ಮಹೇಶ್ವರನನ್ನು ನಮಸ್ಕರಿಸಿ ನನಗೆ ಇಷ್ಟವಾದುದನ್ನು ಕೇಳಿದೆನು.

೨೨-೨೩. ಭದ್ರಾ! ಆ ಹರನು ನಕ್ಕು ಬ್ರಹ್ಮಕುಮಾರಾ! ನೀನು ಕೇಳಿರುವ ಹರಿಯ ಭವಿಷ್ಯ ವೃತ್ತಾಂತವನ್ನು ಹಿಂದೆ ಸುರಭಿಯು ಮುಖದಿಂದ ನಾನು ಕೇಳಿರುವೆನು. ಅದನ್ನು ನಿನಗೆ ಹೇಳುವೆನು ಎಂದು ಹೇಳಿದನು.

೨೩-೨೪. ಒಂದು ದಿನ ತನ್ನ ವತ್ಸಗಳ ಸಹಿತಳಾಗಿ ಸ್ನೇಹಚಿತ್ತಳು, ಅತ್ಯಂತ ಪ್ರಸನ್ನಳೂ ಆದ ಸುರಭಿಯು ಗೋಲೋಕ ಮಧ್ಯದಲ್ಲಿ ನನಗೆ ಕಾಣಿ

ಸ್ವಸಂತಾನಸಮಾಯುಕ್ತಾ ಸುಪ್ರೀತಾ ಸ್ನಿಗ್ಧಮಾನಸಾ |
ತತಃ ಪೃಷ್ಟಾ ಭವಿಷ್ಯಾರ್ಥೇ ಗವಾಂ ಮಾತಾ ಪಯಸ್ವಿನೀ || ೨೪ ||

ಮಹ್ಯಂ ಪ್ರೋವಾಚ ದೇವರ್ಷೇ ಭವಿಷ್ಯಂ ಚರಿತಂ ಹರೇಃ |
ಸುಖಮಾಸ್ತೇಧುನಾ ದೇವಃ ಕೃಷ್ಣೋ ರಾಧಾಸಮನ್ವಿತಃ || ೨೫ ||

ಗೋಲೋಕೇಸ್ಮಿನ್ಮಹೇಶಾನ ಗೋಪಗೋಪೀಸುಖಾವಹಃ |
ಸ ಕದಾಚಿದ್ಧರಾಲೋಕೇ ಮಾಥುರೇ ಮಂಡಲೇ ಶಿವ || ೨೬ ||

ಆವಿರ್ಭೂಯಾದ್ಭುತಾಂ ಕ್ರೀಡಾಂ ವೃಂದಾರಣ್ಯೇ ಕರಿಷ್ಯತಿ |
ವೃಷಭಾನುಸುತಾ ರಾಧಾ ಶ್ರೀದಾಮಾನಂ ಹರೇಃ ಪ್ರಿಯಂ || ೨೭ ||

ಸಖಾಯಂ ವಿರಜಾಗೇಹದ್ವಾಸ್ಥಂ ಕ್ರುದ್ಧಾ ಶಪಿಷ್ಯತಿ |
ತತಃ ಸೋಪಿ ಮಹಾಭಾಗ ರಾಧಾಂ ಪ್ರತಿಶಪಿಷ್ಯತಿ || ೨೮ ||

---

ಪಿಕೊಂಡಳು. ಆಗ ನಾನು ಹರಿಯ ಭವಿಷ್ಯಚರಿತ್ರೆಯ ವಿಷಯದಲ್ಲಿ ಆಕೆಯನ್ನು ಪ್ರಶ್ನೆ ಮಾಡಿದೆನು.

೨೫-೨೬. ದೇವರ್ಷಿಯಾದ ನಾರದನೇ! ಗೋಮಾತೆಯಾದ ಸುರಭಿಯು ಹರಿಯ ಭವಿಷ್ಯ ಚರಿತ್ರೆಯನ್ನು ನನಗೆ ಹೀಗೆ ಹೇಳಿದಳು.

ಮಹೇಶಾ! ಈಗಲೂ ಕೃಷ್ಣದೇವನು ರಾಧಾದೇವಿಯಿಂದ ಸಹಿತನಾಗಿ ಗೋಪಗೋಪಿಯರಿಗೆ ಸುಖವನ್ನುಂಟುಮಾಡುತ್ತಾ ಈ ಗೋಲೋಕದಲ್ಲಿರುವನು.

೨೬-೨೭. ಅವನು ಒಂದಾನೊಂದು ಸಮಯದಲ್ಲಿ ಭೂಲೋಕದಲ್ಲಿರುವ ಮಥುರಾ ಮಂಡಲದಲ್ಲಿ ಅವತರಿಸಿ ವೃಂದಾರಣ್ಯದಲ್ಲಿ ಅದ್ಭುತಕ್ರೀಡೆಯನ್ನು ಮಾಡುವನು.

೨೭-೨೮. ವೃಷಭಾನುವಿನ ಸುತಳಾದ ರಾಧೆಯು ಕೋಪಾವಿಷ್ಟಳಾಗಿ ಹರಿಗೆ ಪ್ರಿಯಸಖನೂ, ವಿರಜಾಮನೆಯ ಬಾಗಿಲಲ್ಲಿರುವವನೂ ಆದ ಸುದಾಮನನ್ನು ಶಪಿಸಿದಳು,

ಯಾಹಿ ತ್ವಂ ಮಾನುಷಂ ಲೋಕಂ ಮಿಥಃ ಶಾಪಾದ್ಧರಾಂ ತತಃ ।
ಪ್ರಾಪ್ಸ್ಯತೋಽಥ ಹರಿಃ ಪಶ್ಚಾದ್ಬ್ರಹ್ಮಣಾ ಪ್ರಾರ್ಥಿತಃ ಕ್ಷಿತೌ ॥ ೨೯ ॥

ಭೂಭಾರಹರಣಾಯೈವ ವಾಸುದೇವೋ ಭವಿಷ್ಯತಿ ।
ವಸುದೇವಗೃಹೇ ಜನ್ಮ ಪ್ರಾಪ್ಯ ಯಾದವನಂದನಃ ॥ ೩೦ ॥

ಕಂಸಾಸುರಭಿಯಾ ಪಶ್ಚಾದ್ವ್ರಜಂ ನಂದಸ್ಯ ಯಾಸ್ಯತಿ ।
ತತ್ರ ಯಾತೋ ಹರಿಃ ಪ್ರಾಪ್ತಾಂ ಪೂತನಾಂ ಬಾಲಘಾತಿನೀಂ ॥ ೩೧ ॥

ವಿಯೋಜಯಿಷ್ಯತಿ ಪ್ರಾಣೈಶ್ಚಕ್ರವಾತಂ ಚ ದಾನವಂ ।
ವತ್ಸಾಸುರಂ ಮಹಾಕಾಯಂ ಪರಿಷ್ಯತಿ ಸುರಾರ್ದನಂ ॥ ೩೨ ॥

ದಮಿತ್ವಾ ಕಾಲಿಯಂ ನಾಗಂ ಯಮುನ್ಯಾ ಉಚ್ಚಾಟಯಿಷ್ಯತಿ ।
ದುಃಸಹಂ ಧೇನುಕಂ ಹತ್ವಾ ಬಕಂ ತದ್ವದಘಾಸುರಂ ॥ ೩೩ ॥

---

ಅನಂತರ ಅವನೂ ಸಹ ನೀನು ಮನುಷ್ಯ ಲೋಕಕ್ಕೆ ಹೋಗು- ನಮ್ಮಿಬ್ಬರ ಪರಸ್ಪರ ಶಾಪದಿಂದ ನಾವಿಬ್ಬರೂ ಭೂಮಿಯಲ್ಲಿ ಹುಟ್ಟೋಣ ಎಂಬುದಾಗಿ ರಾಧಾದೇವಿಗೆ ಪ್ರತಿಶಾಪಕೊಟ್ಟನು.

೨೯-೩೦. ಆಗ ಹರಿಯು ಬ್ರಹ್ಮನಿಂದ ಪ್ರಾರ್ಥಿತನಾಗಿ ಭೂಭಾರವನ್ನು ಪರಿಹರಿಸುವುದಕ್ಕಾಗಿ ವಸುದೇವನ ಮನೆಯಲ್ಲಿ ಜನ್ಮತಾಳಿ ವಾಸುದೇವ ನಾಮಕನಾಗಿ ಅವತರಿಸುವನು.

೩೧-೩೨. ಅನಂತರ ಯಾದವನಂದನನು ಕಂಸಾಸುರನ ಭಯದಿಂದ ನಂದಗೋಪನ ಗೋಕುಲಕ್ಕೆ ಹೋಗುವನು. ಅಲ್ಲಿಗೆ ಹೋದ ಬಳಿಕ ಹರಿಯು ಅಲ್ಲಿಗೆ ಬಂದ ಬಾಲ ಸಂಹಾರಕಳಾದ ಪೂತನೆ, ಶಕಟಾಸುರ, ದೇವ ಹಿಂಸಕರಾದ ವತ್ಸಾಸುರ ಮುಂತಾದವರನ್ನು ಸಂಹರಿಸುವನು.

೩೩. ಯಮುನಾನದಿಯಲ್ಲಿದ್ದ ಕಾಲಿಯಸರ್ಪವನ್ನು ಹೊಡೆದೋಡಿಸುವನು. ತಡೆಯಲಶಕ್ಯನಾದ ಧೇನುಕಾಸುರ, ಬಕಾಸುರ, ಅಂತೆಯೇ ಅಘಾಸುರ ಇವರನ್ನು ಸಂಹರಿಸುವನು.

ದಾವಂ ಪ್ರದಾವಂ ಚ ತಥಾ ಪ್ರಲಂಬಂ ಚ ಹನಿಷ್ಯತಿ ।
ಬ್ರಹ್ಮಾಣಮಿಂದ್ರಂ ವರುಣಂ ಪ್ರಮತ್ತೌ ಧನದಾತ್ಮಜೌ ॥ ೩೪ ॥

ವಿಮದಾಂಸ್ತು ವಿಧಾಯೇತೋ ಹನಿಷ್ಯತಿ ವೃಷಾಸುರಂ ।
ಶಂಖಚೂಡಂ ಕೇಶಿನಂ ಚ ವ್ಯೋಮಂ ಹತ್ವಾ ವ್ರಜೇ ವಸನ್ ॥ ೩೫ ॥

ಏಕಾದಶಸಮಾಸ್ತತ್ರ ಗೋಪೀಭಿಃ ಕ್ರೀಡಯಿಷ್ಯತಿ ।
ತತಶ್ಚ ಮಥುರಾಂ ಪ್ರಾಪ್ಯ ರಜಕಂ ಸಂನಿಹತ್ಯ ಚ ॥ ೩೬ ॥

ಕುಬ್ಜಾಮೃಜ್ವೀಂ ತತಃ ಕೃತ್ವಾ ಧನುರ್ಭಂಕ್ತ್ವಾ ಗಜೋತ್ತಮಂ ।
ಹತ್ವಾ ಕುವಲಯಾಪೀಡಂ ಮಲ್ಲಾಂಶ್ಚಾಣೂರಕಾದಿಕಾನ್ ॥ ೩೭ ॥

ಕಂಸಂ ಸ್ವಮಾತುಲಂ ಕೃಷ್ಣೋ ಹನಿಷ್ಯತಿ ತತಃ ಪರಂ ।
ವಿಮುಚ್ಯ ಪಿತರೌ ಬದ್ಧೌ ಯವನೇಶಂ ನಿಹತ್ಯ ಚ ॥ ೩೮ ॥

---

೩೪-೩೫. ಬಳಿಕ ದಾವ, ಪ್ರದಾವ ಮತ್ತು ಪ್ರಲಂಬಾಸುರರನ್ನೂ ಕೊಲ್ಲುವನು. ಅನಂತರ ಬ್ರಹ್ಮ, ಇಂದ್ರ, ವರುಣ, ಮದಿಸಿದ ಧನದಾತ್ಮಜರು ಇವರ ಮದಪರಿಹಾರಮಾಡಿ ವೃಷಾಸುರ, ಶಂಖಚೂಡ, ಕೇಶಿ ಮತ್ತು ವ್ಯೋಮಾಸುರ ಇವರನ್ನು ಸಂಹರಿಸಿ ಗೋಕುಲದಲ್ಲಿ ವಾಸಿಸುವನು

೩೬. ಹೀಗೆ ಹನ್ನೊಂದು ವರ್ಷಗಳವರೆಗೆ ಅಲ್ಲಿ ಗೋಪಿಕಾಸ್ತ್ರೀಯರೊಡನೆ ಕ್ರೀಡಿಸುತ್ತಿರುವನು. ಅನಂತರ ಮಧುರೆಗೆ ಬಂದು ರಜಕನನ್ನು ಸಂಹರಿಸುವನು.

೩೭. ಅನಂತರ ಕುಬ್ಜೆಯನ್ನು ಸುಂದರಿಯನ್ನಾಗಿ ಮಾಡಿ ಧನುಸ್ಸನ್ನು ಮುರಿದು ಕುವಲಯಾಪೀಡವೆಂಬ ಗಜೋತ್ತಮನನ್ನೂ, ಚಾಣೂರ ಮುಂತಾದ ಮಲ್ಲರನ್ನೂ ಸಂಹರಿಸುವನು.

೩೮. ಅನಂತರ ಕೃಷ್ಣನು ತನ್ನ ಸೋದರಮಾವನಾದ ಕಂಸನನ್ನು ಸಂಹರಿಸಿ ಬಂಧಿತರಾಗಿದ್ದ ತನ್ನ ಮಾತಾಪಿತೃಗಳನ್ನು ಬಿಡುಗಡೆ ಮಾಡಿ ಯವನೇಶನನ್ನು ಸಂಹರಿಸುವನು.

ಜರಾಸಂಧಭಯಾತ್ಕೃಷ್ಣೋ ದ್ವಾರಕಾಯಾಂ ಸಮುಷ್ಯತಿ ।
ರುಕ್ಮಿಣೀಂ ಸತ್ಯಭಾಮಾಂ ಚ ಸತ್ಯಾಂ ಜಾಂಬವತೀಂ ತಥಾ ॥ ೩೯ ॥

ಕೈಕೇಯೀಂ ಲಕ್ಷಣಾಂ ಮಿತ್ರವಿಂದಾಂ ಕಾಲಿಂದಿಕಾಂ ವಿಭುಃ ।
ನಾರೀಃ ಷೋಡಶಸಾಹಸ್ರಾಃ ಭೌಮಂ ಹತ್ವೋದ್ವಹಿಷ್ಯತಿ ॥ ೪೦ ॥

ಪೌಂಡ್ರಕಂ ಶಿಶುಪಾಲಂ ಚ ದಂತವಕ್ತ್ರಂ ವಿದೂರಥಂ ।
ಶಾಲ್ವಂ ಚ ಹತ್ವಾ ದ್ವಿವಿದಂ ವಲ್ವಲಂ ಘಾತಯಿಷ್ಯತಿ ॥ ೪೧ ॥

ವಜ್ರನಾಭಂ ಸುನಾಭಂ ಚ ಸಾರ್ಧಂ ವೈ ಷಟ್ಪುರಾಲಯೈಃ ।
ತ್ರಿಶರೀರಂ ತತೋ ದೈತ್ಯಂ ಹನಿಷ್ಯತಿ ವರೋರ್ಜಿತಂ ॥ ೪೨ ॥

ಕೌರವಾಃ ಪಾಂಡವಾಂಶ್ಚಾಪಿ ನಿಮಿತ್ತಮಿತರೇತರಂ ।
ಕೃತ್ವಾ ಹನಿಷ್ಯತಿ ಶಿವ ಭೂಭಾರಹರಣೋತ್ಸುಕಃ ॥ ೪೩ ॥

---

೩೯-೪೦. ತರುವಾಯ ದ್ವಾರಕಾಪಟ್ಟಣಕ್ಕೆ ಬಂದು ಜರಾಸಂಧನನ್ನು ಹತಮಾಡಿ ರುಕ್ಮಿಣೀ, ಸತ್ಯಭಾಮ, ಸತ್ಯಾ, ಜಾಂಬವತೀ, ಕೈಕೇಯೀ, ಲಕ್ಷಣಾ, ಮಿತ್ರವಿಂದಾ, ಕಾಲಿಂದೀ ಮುಂತಾದ ಹದಿನಾರುಸಾವಿರದನೂರೆಂಟು ಮಂದಿ ಸ್ತ್ರೀಯರನ್ನು ವಿವಾಹ ಮಾಡಿಕೊಳ್ಳುವನು. ಭೂದೇವಿಯ ಪುತ್ರನಾದ ನರಕಾಸುರನನ್ನೂ ಸಂಹರಿಸುವನು.

೪೧. ಮತ್ತು ಪೌಂಡ್ರಕ, ಶಿಶುಪಾಲ, ದಂತವಕ್ತ್ರ, ವಿದೂರಥ, ಸಾಲ್ವ, ದ್ವಿವಿದ, ಬಲ್ವಲ ಇವರನ್ನು ಸಂಹರಿಸುವನು.

೪೨. ವಜ್ರನಾಭ, ಸುನಾಭ, ಷಟ್ಪುರಾಲಯರು, ವರೋರ್ಜಿತನಾದ ತ್ರಿಶರೀರದೈತ್ಯ ಇವರನ್ನೆಲ್ಲಾ ಸಂಹರಿಸುವನು.

೪೩. ಭೂಭಾರವನ್ನು ಪರಿಹರಿಸುವ ಕಾರ್ಯದಲ್ಲಿ ಉತ್ಸಾಹಯುಕ್ತನಾದ ಕೃಷ್ಣನು ಕೌರವ, ಪಾಂಡವರನ್ನು ಪರಸ್ಪರವಾಗಿ ನಿಮಿತ್ತಮಾಡಿ ದುಷ್ಟರನ್ನು ನಾಶಮಾಡುವನು.

ಯದೋರ್ ಯದುಭಿರನ್ಯೋಽನ್ಯಂ ಸಂಹೃತ್ಯ ಸ್ವಕುಲಂ ಹರಿಃ |
ಪುನರೇತನ್ನಿಜಂ ಧಾಮ ಸಮೇಷ್ಯತಿ ಚ ಸಾನುಗಃ || ೪೪ ||

ಏತತ್ತೇಽಭಿಹಿತಂ ಶಂಭೋ ಭವಿಷ್ಯಚರಿತಂ ಹರೇಃ |
ಗಚ್ಛ ದ್ರಕ್ಷ್ಯಸಿ ತತ್ಸರ್ವಂ ಜಗತೀತಲಗೇ ಹರೌ || ೪೫ ||

ತಚ್ಛ್ರುತ್ವಾ ಸುರಭೇರ್ವಾಕ್ಯಂ ಭೃಶಂ ಪ್ರೀತೋ ವಿಧಾತೃಜ |
ಸ್ವಸ್ಥಾನಂ ಪುನರಾಯಾತಸ್ತುಭ್ಯಂ ಚಾಪಿ ಮಯೋದಿತಂ || ೪೬ ||

ತ್ವಂ ಚ ದ್ರಕ್ಷ್ಯಸಿ ಕಾಲೇನ ಚರಿತಂ ಗೋಕುಲೇಶಿತುಃ |
ತಚ್ಛ್ರುತ್ವಾ ಶೂಲಿನೋ ವಾಕ್ಯಂ ವಸುರ್ಹೃಷ್ಟತನೂರುಹಃ || ೪೭ ||

ಗಾಯನ್ ಮೂರ್ಧ್ನ್ಯ ವಿಭುಂ ತಂತ್ರ್ಯಾ ರಮಯಾಮ್ಯಾತುರಂ ಜಗತ್ |
ಏತದ್ಭವಿಷ್ಯಂ ಕಥಿತಂ ಮಯಾ ತುಭ್ಯಂ ದ್ವಿಜೋತ್ತಮ || ೪೮ ||

---

೪೪. ಬಳಿಕ ಹರಿಯು ಯದುಗಳನ್ನು ಯಾದವರಿಂದಲೇ ಪರಸ್ಪರವಾಗಿ ಸಂಹರಿಸುವಂತೆ ಮಾಡಿ ತನ್ನ ಕುಲವನ್ನೂ ನಾಶಪಡಿಸಿ ತನ್ನ ಅನುಯಾಯಿಗಳೊಂದಿಗೆ ಪುನಃ ತನ್ನ ಈ ಸ್ಥಾನಕ್ಕೆ ಬರುವನು.

೪೫. ಶಂಕರಾ! ಹರಿಯ ಈ ಭವಿಷ್ಯಚರಿತ್ರೆಯನ್ನು ನಿನಗೆ ಹೇಳಿರುವೆನು. ಹರಿಯು ಭೂಮಂಡಲಕ್ಕೆ ಹೋದಾಗ ನೀನೂ ಅಲ್ಲಿಗೆ ಹೋಗಿ ಎಲ್ಲವನ್ನೂ ನೋಡು ಎಂದು ಈಶ್ವರನಿಗೆ ಸುರಭಿಯು ಹೇಳಿದಳು.

೪೬. ಬ್ರಹ್ಮಕುಮಾರನಾದ ನಾರದನೇ! ಸುರಭಿಯು ಹೇಳಿದ ಆ ವೃತ್ತಾಂತವನ್ನು ಕೇಳಿ ಬಹಳ ಸಂತೋಷಪಟ್ಟು ನನ್ನ ಸ್ಥಳಕ್ಕೆ ಪುನಃ ಬಂದೆನು. ಆಗ ನಾನು ಕೇಳಿದುದನ್ನು ನಿನಗೆ ಹೇಳಿರುವೆನು.

೪೭. ಕಾಲಕ್ರಮವಾಗಿ ನೀನೂ ಸಹ ಗೋಕುಲೇಶ್ವರನ ಚರಿತ್ರೆಯನ್ನು ನೋಡುವೆ ಎಂದು ಹೇಳಿದನು. ಈಶ್ವರನು ನುಡಿದ ಆ ಮಾತನ್ನು ನಾರದನಿಂದ ಕೇಳಿ ವಸುವು ಆನಂದದಿಂದ ರೋಮಾಂಚವುಳ್ಳವನಾದನು.

೪೮-೪೯. ದ್ವಿಜೋತ್ತಮಾ! ಜಗತ್ತು ಆ ಹರಿಯ ವಿಹಾರವನ್ನು ನೋಡಲು ಕಾತರವಾಗಿದೆ. ನಾನು ಜಗದಾದಿದೇವನನ್ನು ತಂತಿಯಿಂದ ಗಾನ

ಯಥಾ ತು ಗೌತಮಸ್ತದ್ವದಹಂ ಚಾಪಿ ಹಿತೇ ರತಃ |

ಸೂತ ಉವಾಚ

ಇತ್ಯುಕ್ತ್ವಾ ನಾರದಸ್ತಸ್ಮೈ ವಸವೇ ಸ ದ್ವಿಜನ್ಮನೇ || ೪೯ ||

ಜಗಾಮ ವೀಣಾಂ ರಣಯಂಶ್ಚಿಂತಯನ್ ಯದುನಂದನಂ |
ಸ ವಸುಸ್ತದ್ವಚಃ ಶ್ರುತ್ವಾ ವ್ರಜೇ ಸುಪ್ರೀತಮಾನಸಃ || ೫೦ ||
ಉವಾಸ ಸರ್ವದಾ ವಿಪ್ರಾಃ ಕೃಷ್ಣಕ್ರೀಡೇಕ್ಷಣೋತ್ಸುಕಃ || ೫೧ ||

ಇತಿ ಶ್ರೀನಾರದೀಯಪುರಾಣೋತ್ತರಭಾಗೇ ವಸುಮೋಹಿನೀಸಂವಾದೇ ವಸುಚರಿತ್ರನಿರೂಪಣಂ ನಾಮೈಕಾಶೀತಿತಮೋಽಧ್ಯಾಯಃ

---

ಮಾಡುತ್ತಾ ವಿಹರಿಸುತ್ತಿರುವೆನು. ಹರಿಯ ಈ ಭವಿಷ್ಯವನ್ನು ನಾನು ನಿನಗೆ ಹೇಳಿರುವೆನು ಗೌತಮನಂತೆ ನಾನೂ ನಿನಗೆ ಹಿತೈಷಿಯು.

೪೯-೫೦. ಸೂತನು ಹೇಳಿದನು:—ಆ ನಾರದಮುನಿಯು ಬ್ರಾಹ್ಮಣನಾದ ವಸುವಿಗೆ ಈ ರೀತಿ ಹೇಳಿ ಯದುಕುಮಾರನನ್ನು ಧ್ಯಾನಿಸುತ್ತಾ ವೀಣೆಯನ್ನು ಬಾರಿಸಿಕೊಂಡು ಹೊರಟನು.

೫೦-೫೧. ಆ ವಸುವೂ ಸಹ ನಾರದನ ಮಾತನ್ನು ಕೇಳಿ ಅತ್ಯಂತ ಹರ್ಷಚಿತ್ತನಾಗಿ ಕೃಷ್ಣನ ಕ್ರೀಡಾವಿಲಾಸಗಳನ್ನು ನೋಡಬೇಕೆಂಬ ಕುತೂಹಲವುಳ್ಳವನಾಗಿ ಯಾವಾಗಲೂ ಗೋಕುಲದಲ್ಲಿಯೇ ವಾಸಮಾಡಿಕೊಂಡಿದ್ದನು.

ಇಂತು ಶ್ರೀನಾರದೀಯಪುರಾಣೋತ್ತರಭಾಗದೊಳು ವಸುಮೋಹಿನೀ ಸಂವಾದದಲ್ಲಿ ವಸುಚರಿತ್ರೆಯ ನಿರೂಪಣೆಯೆಂಬ ಎಂಬತ್ತೊಂದನೆಯ ಅಧ್ಯಾಯವು ಮುಗಿದುದು.

---

## ದ್ವ್ಯಶೀತಿತಮೋಽಧ್ಯಾಯಃ



**ಋಷಯ ಊಚುಃ**

**ಸೂತ ಸಾಧೋ ತ್ವಯಾಖ್ಯಾತಂ ಶ್ರೀಕೃಷ್ಣಚರಿತಾಮೃತಂ ।**
**ಶ್ರುತಂ ಕೃತಾರ್ಥಾಸ್ತೇನ ಸ್ಮೋ ವಯಂ ಭವದನುಗ್ರಹಾತ್ ॥ ೧ ॥**

**ಗತೇ ವಸೌ ಬ್ರಹ್ಮಲೋಕಂ ಮೋಹಿನೀ ವಿಧಿನಂದಿನೀ ।**
**ಕಿಂ ಚಕಾರ ತತಃ ಪಶ್ಚಾತ್ತನ್ನೋ ವ್ಯಾಖ್ಯಾತುಮರ್ಹಸಿ ॥ ೨ ॥**

**ಸೂತ ಉವಾಚ**

**ಶೃಣುಧ್ವಮೃಷಯಃ ಸರ್ವೇ ಮೋಹಿನ್ಯಾಶ್ಚರಿತಂ ಶುಭಂ ।**
**ಯಚ್ಚಕಾರ ವಸೋಃ ಪಶ್ಚಾತ್ತೀರ್ಥಾನಾಂ ಪರಿಸೇವನಂ ॥ ೩ ॥**

---

### ಎಂಬತ್ತೆರಡನೆಯ ಅಧ್ಯಾಯ

೧. ಋಷಿಗಳು ಹೇಳಿದರು:-ಸಾಧುವಾದ ಸೂತನೇ! ನೀನು ಶ್ರೀ ಕೃಷ್ಣನ ಚರಿತ್ರೆಯೆಂಬ ಅಮೃತವನ್ನು ಹೇಳಿರುವೆ. ನಿಮ್ಮ ಅನುಗ್ರಹದಿಂದ ನಾವು ಅದನ್ನು ಕೇಳಿ ಕೃತಾರ್ಥರಾದೆವು.

೨. ವಸುವು ಬ್ರಹ್ಮಲೋಕಕ್ಕೆ ಹೋದಮೇಲೆ ವಿಧಿಕುಮಾರಿಯಾದ ಮೋಹಿನಿಯು ಏನುಮಾಡಿದಳೆಂಬುದನ್ನು ನಮಗೆ ಹೇಳಬೇಕು ಎಂಬುದಾಗಿ ಸೂತನನ್ನು ಕೇಳಿದರು.

೩. ಸೂತನು ಹೇಳಿದನು:—ಋಷಿಗಳೆಲ್ಲಾ ಕೇಳಿರಿ! ವಸುವು ಬ್ರಹ್ಮಲೋಕಕ್ಕೆ ಹೋದಮೇಲೆ ಮೋಹಿನಿಯು ಮಾಡಿದ ಶುಭಕರವಾದ ತೀರ್ಥಸೇವನೆಯ ಚರಿತ್ರೆಯನ್ನು ಹೇಳುವೆನು.

ಯಥಾನುಶಿಷ್ಟಾ ವಸುನಾ ಮೋಹಿನೀ ಸಾ ವಿಧೇಃ ಸುತಾ |
ಜಗಾಮ ವಿಧಿನಾ ತೀರ್ಥಯಾತ್ರಾರ್ಥಂ ಸ್ವರ್ಣದೀತಟಂ ॥ ೪ ॥

ತತ್ರ ಗತ್ವಾ ಸಮಾಪ್ಲುತ್ಯ ಗಂಗಾದೀನಿ ತು ವೈಧಸೀ |
ಚಚಾರ ವಿಧಿವದ್ಧೃಷ್ಟಾ ಬ್ರಾಹ್ಮಣೈಃ ಸಹ ಸಂಗತಾ ॥ ೫ ॥

ಪುರೋಹಿತೇನ ವಸುನಾ ಯಸ್ಯ ತೀರ್ಥಸ್ಯ ಯೋ ವಿಧಿಃ |
ಕಥಿತಸ್ತತ್ಪ್ರಕಾರೇಣ ಸೇವಮಾನಾ ಚಚಾರ ಹ ॥ ೬ ॥

ತೇಷು ತೀರ್ಥೇಷು ದೇವಾಂಶ್ಚ ವಿಷ್ಣ್ವಾದೀನ್ ಪೂಜಯಂತ್ಯಥ |
ಸಮರ್ಪಯಂತೀ ವಿಪ್ರೇಭ್ಯೋ ದಾನಾನಿ ವಿವಿಧಾನಿ ಚ ॥ ೭ ॥

ಗಯಾಯಾಂ ವಿಧಿವದ್ಭರ್ತುಃ ಪಿಂಡದಾನಂ ಚಕಾರ ಹ |
ಕಾಶ್ಯಾಂ ವಿಶ್ವೇಶ್ವರಂ ಪ್ರಾರ್ಚ್ಯ ಸಂಪ್ರಾಪ್ತಾ ಪುರುಷೋತ್ತಮಂ ॥ ೮ ॥

---

೪. ಬ್ರಹ್ಮಕುಮಾರಿಯಾದ ಆ ಮೋಹಿನಿಯು ವಸುವು ಅಪ್ಪಣೆಕೊಡಿಸಿದ ವಿಧಾನಾನುಸಾರವಾಗಿ ತೀರ್ಥಯಾತ್ರೆಮಾಡಲು ಗಂಗಾನದಿಯ ತೀರಕ್ಕೆ ಹೊರಟಳು.

೫. ವಿಧಿಪುತ್ರಳಾದ ಮೋಹಿನಿಯು ಬ್ರಾಹ್ಮಣರ ಸಹಿತವಾಗಿ ಗಂಗಾದಿತೀರ್ಥಗಳಲ್ಲಿ ಸ್ನಾನಮಾಡಿ ಸಂತುಷ್ಟಳಾಗಿ ವಿಧ್ಯನುಸಾರ ತೀರ್ಥಗಳನ್ನು ಕುರಿತು ಸಂಚಾರಮಾಡಿದಳು.

೬. ಪುರೋಹಿತನಾದ ವಸುವು ಹೇಳಿದಂತೆಯೇ ಆಯಾ ತೀರ್ಥಗಳಲ್ಲಿ ಆಚರಿಸುತ್ತಾ ತೀರ್ಥಸಂಚಾರಮಾಡಿದಳು.

೭. ಆಯಾ ತೀರ್ಥಗಳಲ್ಲಿ ವಿಷ್ಣ್ವಾದಿ ದೇವತೆಗಳನ್ನು ಪೂಜಿಸುವವಳಾಗಿ ನಾನಾವಿಧ ದಾನಗಳನ್ನು ಬ್ರಾಹ್ಮಣರಿಗೆ ಕೊಡುತ್ತಿದ್ದಳು.

೮. ಗಯಾಕ್ಷೇತ್ರದಲ್ಲಿ ವಿಧಾನಾನುಸಾರವಾಗಿ ತನ್ನ ಗಂಡನಿಗೆ ಶ್ರಾದ್ಧವನ್ನು ಮಾಡಿದಳು. ಕಾಶಿಯಲ್ಲಿ ವಿಶ್ವೇಶ್ವರನನ್ನು ಪೂಜಿಸಿ ಪುರುಷೋತ್ತಮಕ್ಷೇತ್ರಕ್ಕೆ ಬಂದಳು.

ತಸ್ಮಿನ್ ಕ್ಷೇತ್ರೇ ತು ನೈವೇದ್ಯಂ ಭುಕ್ತ್ವಾ ಸಾ ಜಗದೀಶಿತುಃ ।
ಶುದ್ಧದೇಹಾ ತತಃ ಪಶ್ಚಾತ್ಸಂಪ್ರಾಪ್ತಾ ಲಕ್ಷ್ಮಣಾಚಲಂ ॥ ೯ ॥

ತಂ ಸಮಭ್ಯರ್ಚ್ಯ ವಿಧಿವದ್ಗತ್ವಾ ಸೇತುಂ ಸಮರ್ಚ್ಯ ಚ ।
ರಾಮೇಶ್ವರಂ ಮಹೇಂದ್ರಾದ್ರಿಂ ಭಾರ್ಗವಂ ಸಮವಂದತ ॥ ೧೦ ॥

ಗೋಕರ್ಣಂ ಚ ಶಿವಕ್ಷೇತ್ರಂ ಗತ್ವಾಭ್ಯರ್ಚ್ಯ ತಮೀಶ್ವರಂ ।
ಪ್ರಭಾಸಂ ಪ್ರಯಯೌ ವಿಪ್ರ್ಯಃ ಸಾರ್ಧಂ ತೈರ್ದ್ವಿಜಸತ್ತಮೈಃ ॥ ೧೧ ॥

ಸ್ನಾತ್ವಾ ಸಂತರ್ಪ್ಯ ದೇವಾದೀಂಸ್ತಸ್ಯ ಯಾತ್ರಾಂ ವಿಧಾಯ ಚ ।
ದ್ವಾರಕಾಯಾಂ ಹರಿಂ ದೃಷ್ಟ್ವಾ ಕುರುಕ್ಷೇತ್ರಂ ಜಗಾಮ ಸಾ ॥ ೧೨ ॥

ತತ್ರಾಪಿ ವಿಧಿವದ್ಯಾತ್ರಾಂ ಸಂವಿಧಾಯ ನರೇಶ್ವರೀ ।
ಗಂಗಾದ್ವಾರಮುಪೇಯಾಥ ತತ್ರ ಸಸ್ನೌ ವಿಧಾನತಃ ॥ ೧೩ ॥

---

೯. ಆ ಕ್ಷೇತ್ರದಲ್ಲಿ ಮೋಹಿನಿಯು ಜಗದೀಶ್ವರನ ನೈವೇದ್ಯವನ್ನು ಭಕ್ಷಣೆಮಾಡಿ ದೇಹಶುದ್ಧಿಯನ್ನು ಹೊಂದಿ ಅಲ್ಲಿಂದ ಮುಂದೆ ಲಕ್ಷ್ಮಣಾಚಲಕ್ಕೆ ಬಂದಳು.

೧೦. ಅಲ್ಲಿ ಲಕ್ಷ್ಮಣಸ್ವಾಮಿಯನ್ನು ವಿಧಿವತ್ತಾಗಿ ಪೂಜಿಸಿ ಅಲ್ಲಿಂದ ಸೇತುವಿಗೆ ಹೋಗಿ ರಾಮೇಶ್ವರನನ್ನು ಪೂಜಿಸಿ ಮಹೇಂದ್ರಾದ್ರಿಗೆ ಬಂದು ಪರಶುರಾಮನನ್ನು ಸೇವಿಸಿದಳು.

೧೧. ಬಳಿಕ ಗೋಕರ್ಣವೆಂಬ ಶಿವಕ್ಷೇತ್ರಕ್ಕೆ ಹೋಗಿ ಗೋಕರ್ಣೇಶ್ವರನನ್ನು ಪೂಜಿಸಿ ದ್ವಿಜಶ್ರೇಷ್ಠರೊಡನೆ ಪ್ರಭಾಸಕ್ಷೇತ್ರಕ್ಕೆ ಬಂದಳು.

೧೨. ಸ್ನಾನಮಾಡಿ ದೇವಾದಿಗಳಿಗೆ ತರ್ಪಣಮಾಡಿ ಆ ಕ್ಷೇತ್ರದ ಯಾತ್ರೆಯನ್ನು ಮುಗಿಸಿಕೊಂಡು ದ್ವಾರಕೆಗೆ ಬಂದು ಹರಿಯ ದರ್ಶನಮಾಡಿ ಕುರುಕ್ಷೇತ್ರಕ್ಕೆ ಹೊರಟಳು.

೧೩. ನರೇಶ್ವರಿಯಾದ ಮೋಹಿನಿಯು ಅಲ್ಲಿಯೂ ವಿಧಿವತ್ತಾಗಿ ಯಾತ್ರೆಮಾಡಿ ಗಂಗಾದ್ವಾರಕ್ಕೆ ಬಂದು ಅಲ್ಲಿ ವಿಧಾನಾನುಸಾರವಾಗಿ ಸ್ನಾನಮಾಡಿದಳು.

ತತಸ್ತು ದೃಷ್ಟ್ವಾ ಕಾವೇದಾಂ ನಮಸ್ಕೃತ್ಯ ಮುದಾನ್ವಿತಾ ।
ಬದರ್ಯಾಶ್ರಮಮಾಸಾದ್ಯ ನರನಾರಾಯಣಾವೃಷೀ ॥ ೧೪ ॥

ಸಮಭ್ಯರ್ಚ್ಯಾಥ ಕಾಮಾಕ್ಷೀಂ ಯಯೌ ದ್ರಷ್ಟುಂ ತ್ವರಾನ್ವಿತಾ ।
ಸಿದ್ಧನಾಥಂ ನಮಸ್ಕೃತ್ಯ ತತೋಽಯೋಧ್ಯಾಮುಪಾಗತಾ ॥ ೧೫ ॥

ಸ್ನಾತ್ವಾ ಸರಯ್ವಾಂ ವಿಧಿವತ್ಪ್ರಾರ್ಚ್ಯ ಸೀತಾಪತಿಂ ತತಃ ।
ಮಧ್ಯಯಾತ್ರಾಮುಪಾಶ್ರಿತ್ಯ ಯಯಾವಮರಕಂಟಕಂ ॥ ೧೬ ॥

ಮಹೇಶಂ ತತ್ರ ಸಂಪೂಜ್ಯ ಪ್ರತಿಸ್ರೋತಸ್ಸು ನರ್ಮದಾಂ ।
ಸಂಸೇವ್ಯೋಂಕಾರಮೀಶಾನಂ ದೃಷ್ಟ್ವಾ ಮಾಹಿಷ್ಮತೀಂ ಯಯೌ ॥ ೧೭ ॥

ತ್ರ್ಯಂಬಕೇಶಂ ತತಃ ಪ್ರಾರ್ಚ್ಯ ಸಂಪ್ರಾಪ್ತಾ ಸಾ ತ್ರಿಪುಷ್ಕರಂ ।
ಪುಷ್ಕರೇಷು ವಿಧಾನೇನ ದತ್ವಾ ದಾನಾನ್ಯನೇಕಶಃ ॥ ೧೮ ॥

ಸಂಪ್ರಾಪ್ತಾ ಸಾ ತು ಮಥುರಾಂ ಸರ್ವತೀರ್ಥೋತ್ತಮೋತ್ತಮಾಂ ।
ವಿಧಾಯಾಭ್ಯಂತರೀಂ ಯಾತ್ರಾಂ ಯೋಜನಾನಾಂ ತು ವಿಂಶತಿಂ ॥ ೧೯ ॥

---

೧೪-೧೫- ತರುವಾಯ ಕಾವೇದೆಯನ್ನು ದರ್ಶನಮಾಡಿ ನಮಸ್ಕರಿಸಿ ಸಂತೋಷಪಟ್ಟು ಅಲ್ಲಿಂದ ಬದರಿಕಾಶ್ರಮಕ್ಕೆ ಹೋಗಿ ನರನಾರಾಯಣಋಷಿಗಳನ್ನು ಪೂಜಿಸಿ ಕಾಮಾಕ್ಷೀದೇವಿಯ ದರ್ಶನವನ್ನು ಮಾಡಲು ಶೀಘ್ರವಾಗಿ ಹೊರಟಳು. ಬಳಿಕ ಸಿದ್ಧನಾಥನನ್ನು ನಮಸ್ಕರಿಸಿ ಅಯೋಧ್ಯೆಗೆ ಬಂದಳು.

೧೬. ಅಲ್ಲಿ ಸರಯೂನದಿಯಲ್ಲಿ ಸ್ನಾನಮಾಡಿ ವಿಧಿವತ್ತಾಗಿ ಸೀತಾಪತಿಯನ್ನು ಪೂಜಿಸಿ ಮಧ್ಯಕ್ಷೇತ್ರಕ್ಕೆ ಬಂದು ಅಲ್ಲಿಂದ ಅಮರಕಂಟಕಕ್ಕೆ ಹೊರಟಳು.

೧೭. ಅಲ್ಲಿ ಮಹೇಶ್ವರನನ್ನು ಪೂಜಿಸಿ ನರ್ಮದಾನದಿಯ ಸೇವನೆ ಮಾಡಿ ಓಂಕಾರೇಶ್ವರನನ್ನು ಸಂದರ್ಶಿಸಿ ಮಾಹಿಷ್ಮತೀಕ್ಷೇತ್ರಕ್ಕೆ ಬಂದಳು.

೧೮. ತ್ರ್ಯಂಬಕೇಶ್ವರನನ್ನು ಪೂಜಿಸಿ ತ್ರಿಪುಷ್ಕರಕ್ಕೆ ಬಂದಳು. ಅಲ್ಲಿ ವಿಹಿತವಾದ ಅನೇಕ ದಾನಗಳನ್ನು ಮಾಡಿದಳು.

೧೯. ತರುವಾಯ ಮೋಹಿನಿಯು ತೀರ್ಥಗಳಲ್ಲೆಲ್ಲಾ ಉತ್ತಮೋತ್ತಮವಾದ ಮಥುರೆಗೆ ಬಂದಳು. ಇಪ್ಪತ್ತುಗಾವುದ ವಿಸ್ತಾರವುಳ್ಳ ಆ ಮಥುರಾಕ್ಷೇತ್ರದ ಒಳಗೆಲ್ಲಾ ಸಂಚರಿಸಿದಳು.

ಪರಿಕ್ರಮ್ಯ ಪುರೀಂ ಪಶ್ಚಾಚ್ಚತುರ್ವ್ಯೂಹಂ ದದರ್ಶ ಸಾ ।
ಸ್ನಾತ್ವಾ ವಿಂಶತಿತೀರ್ಥೇ ತು ಸಮಾಪ್ಯಾಥ ಪ್ರದಕ್ಷಿಣಂ ॥ ೨೦ ॥

ಧೇನೂನಾಮಯುತಂ ಪ್ರಾದಾನ್ಮಾಥುರೇಭ್ಯೋ ಹ್ಯಲಂಕೃತಂ ।
ಸಂಭೋಜ್ಯ ತಾನ್ ವರಾನ್ನೇನ ಭಕ್ತಿಕ್ಲಿನ್ನೇನ ಚೇತಸಾ ॥ ೨೧ ॥

ನಮಸ್ಕೃತ್ಯ ವಿಸೃಜ್ಯೈತಾನ್ ಕಾಲಿಂದೀಂ ಸಮುಪಾವಿಶತ್ ।
ತತಃ ಪ್ರವಿಷ್ಟಾ ಸಾ ದೇವೀಂ ಕಾಲಿಂದೀಮಘನಾಶಿನೀಂ ॥ ೨೨ ॥

ನಾದ್ಯಾಪಿ ನಿರ್ಗತಾ ಭೂಯೋ ಯಮತಿಥ್ಯಂತವಸ್ಥಿತಾ ।
ಸ್ಮಾರ್ತಾನ್ ಸೂರ್ಯೋದಯಂ ಪ್ರಾಪ್ಯ ಶ್ರೌತಾನಪ್ಯರುಣೋದಯಂ ॥ ೨೩ ॥

ನಿಶೀಥಂ ವೈಷ್ಣವಾನ್ ವಿಪ್ರಾಃ ಪ್ರಾಪ್ಯ ದೂಷಯತೇ ವ್ರತಾನ್ ।
ಮೋಹಿನೀವೇಧರಹಿತಾಮುಪೋಷ್ಯೈಕಾದಶೀಂ ನರಃ ॥ ೨೪ ॥

---

೨೦-೨೧. ಅನಂತರ ಪಟ್ಟಣವನ್ನು ಪ್ರದಕ್ಷಿಣೆಮಾಡಿ ಚತುರ್ವ್ಯೂಹವನ್ನು ದರ್ಶನಮಾಡಿದಳು. ಇಪ್ಪತ್ತು ತೀರ್ಥಗಳಲ್ಲಿಯೂ ಸ್ನಾನಮಾಡಿ ಪ್ರದಕ್ಷಿಣೆಯನ್ನು ಮುಗಿಸಿಕೊಂಡು ಮಥುರಾವಾಸಿಗಳಾದ ಬ್ರಾಹ್ಮಣರಿಗೆ ಅಲಂಕೃತವಾದ, ಹತ್ತುಸಾವಿರ ಗೋವುಗಳನ್ನು ದಾನಮಾಡಿದಳು.

೨೧-೨೨. ಬಳಿಕ ಆ ಬ್ರಾಹ್ಮಣರಿಗೆ ಉತ್ಕೃಷ್ಟಾನ್ನಭೋಜನಮಾಡಿಸಿ ಮನಃಪೂರ್ವಕವಾದ ಭಕ್ತಿಯಿಂದ ನಮಸ್ಕಾರಮಾಡಿ ಅವರನ್ನು ಕಳುಹಿಸಿ ತಾನು ಕಾಳಿಂದಿಯನ್ನು ಕುರಿತು ಹೊರಟಳು. ಅಲ್ಲಿಗೆ ಬಂದು ಪಾಪನಾಶಕಳಾದ ಕಾಳಿಂದೀದೇವಿಯನ್ನು ಪ್ರವೇಶಿಸಿದಳು.

೨೩-೨೪. ಆ ಮೋಹಿನಿಯು ಇದುವರೆಗೂ ಅಲ್ಲಿಂದ ಹೊರಕ್ಕೆ ಬರಲಿಲ್ಲ. ಹಾಗೆಯೇ ಯಮುನಿಗೆ ಅತಿಥಿಯಾದಳು. ಮೋಹಿನಿಯು ಸ್ಮೃತ್ಯುಕ್ತ ವ್ರತಗಳನ್ನು ಸೂರ್ಯೋದಯಕಾಲದಲ್ಲಿಯೂ, ವೇದವಿಹಿತವ್ರತಗಳನ್ನು ಅರುಣೋದಯಕಾಲದಲ್ಲಿಯೂ ವೈಷ್ಣವ ವ್ರತಗಳನ್ನು ಅರ್ಧರಾತ್ರಿಕಾಲದಲ್ಲಿಯೂ ವ್ಯಾಪಿಸಿ ಅವನ್ನು ಅಗ ದುಷ್ಟಗಳನ್ನಾಗಿ ಮಾಡುವಳು.

ದ್ವಾದಶ್ಯಾಂ ವಿಷ್ಣುಮಭ್ಯರ್ಚ್ಯ ವೈಕುಂಠಂ ಯಾತ್ಯಸಂಶಯಂ ।
ಮೋಹಿನೀ ವಿಧಿಜಾ ದೇವೀ ವಿಷ್ಣುಜೈಕಾದಶೀ ದ್ವಿಜಾಃ ॥ ೨೫ ॥

ವಿಷ್ಣುಜಾಸ್ಪರ್ಧಯಾ ಧಾತ್ರಾ ಮೋಹಿನೀ ಸಾ ವಿನಿರ್ಮಿತಾ ।
ರುಕ್ಮಾಂಗದಸ್ತು ರಾಜರ್ಷಿರ್ವಿಷ್ಣುಭಕ್ತಿಪರಾಯಣಃ ॥ ೨೬ ॥

ನ ತು ವಾರಯಿತುಂ ಶಕ್ತಾ ಸಾ ತಮೇಕಾದಶೀವ್ರತಾತ್ ।
ವಿಷ್ಣುಲೋಕಂ ಗತೇ ತಸ್ಮಿನ್ ಸಭಾರ್ಯೇ ಸಸುತೇ ನೃಪೇ ॥ ೨೭ ॥

ಸ್ಪರ್ಧಂತ್ಯೈಕಾದಶೀಂ ಸಿದ್ಧಿಂ ಯಮಾಂತೇ ಮೋಹಿನೀ ಸ್ಥಿತಾ ।
ಇತ್ಯೇತದುಕ್ತಂ ವಿಪ್ರೇಂದ್ರಾ ಮೋಹಿನೀಚರಿತಂ ಮಯಾ ॥ ೨೮ ॥

ಯದರ್ಥಂ ನಿರ್ಮಿತಾ ಧಾತ್ರಾ ತಥಾ ಚಾತ್ರ ವ್ಯವಸ್ಥಿತಾ ।
ನಾರದೀಯೋತ್ತರಂ ಹ್ಯೇತತ್ಪ್ರೋಕ್ತಂ ವೋ ಭುಕ್ತಿಮುಕ್ತಿದಂ ॥ ೨೯ ॥

---

೨೪-೨೫. ಮನುಷ್ಯನು ಮೋಹಿನೀವೇಧರಹಿವಾದ ಏಕಾದಶಿಯನ್ನು ಉಪವಾಸಮಾಡಿ ದ್ವಾದಶಿಯ ದಿನ ವಿಷ್ಣುದೇವನನ್ನು ಪೂಜಿಸಿದರೆ ಖಂಡಿತ ವಾಗಿ ವೈಕುಂಠಕ್ಕೆ ಹೋಗುವನು.

೨೫-೨೬. ದ್ವಿಜರೇ! ಮೋಹಿನೀದೇವಿಯು ಬ್ರಹ್ಮಜಾತಳು. ಏಕಾದಶಿಯು ವಿಷ್ಣುಜಾತವು. ವಿಷ್ಣುನಿರ್ಮಿತವಾದ ಏಕಾದಶಿಯಲ್ಲಿ ಸ್ಪರ್ಧೆಯಿಂದ ಬ್ರಹ್ಮನು ಮೋಹಿನಿಯನ್ನು ನಿರ್ಮಿಸಿದನು. ರುಕ್ಮಾಂಗದರಾಜರ್ಷಿಯು ವಿಷ್ಣುಭಕ್ತಿಪರನು.

೨೭-೨೮. ವಿಧಿಜಾತೆಯಾದ ಮೋಹಿನಿಯು ಅವನಿಂದ ಏಕಾದಶೀವ್ರತವನ್ನು ಬಿಡಿಸಲು ಶಕ್ತಳಾಗಲಿಲ್ಲ. ಆ ರುಕ್ಮಾಂಗದನು ತನ್ನ ಪತ್ನೀಪುತ್ರಸಹಿತನಾಗಿ ವಿಷ್ಣುಲೋಕಕ್ಕೆ ಹೋಗಲು ಮೋಹಿನಿಯು ಏಕಾದಶೀಸಿದ್ಧಿಯನ್ನು ಸ್ಪರ್ಧಿಸುವವಳಾಗಿ ಯಮನ ಹತ್ತಿರ ನಿಂತಳು. ವಿಪ್ರೇಂದ್ರರೇ! ಈ ರೀತಿಯಾಗಿ ಮೋಹಿನಿಯ ಚರಿತ್ರೆಯನ್ನು ಹೇಳಿರುವೆನು.

೨೯. ಬ್ರಹ್ಮನು ಮೋಹಿನಿಯನ್ನು ಸೃಷ್ಟಿಸಿದ ಉದ್ದೇಶವನ್ನು ಸಫಲಗೊಳಿಸಲು ಅವಳು ಇಲ್ಲಿ ನಿಂತಳು.

ಅತ್ರ ಸಮ್ಯಕ್ ಹರೇರ್ಭಕ್ತಿಃ ಸಾಧ್ಯತೇನುಪದಂ ನೃಣಾಂ |
ನಾರದೀಯಂ ಪುರಾಣಂ ತು ಲಕ್ಷಣೈರ್ದಶಭಿರ್ಯುತಂ || ೩೦ ||

ಯಃ ಶೃಣೋತಿ ನರೋ ಭಕ್ತ್ಯಾ ಸ ಗಚ್ಛೇದ್ವೈಷ್ಣವಂ ಪದಂ |
ಧರ್ಮಾರ್ಥಕಾಮಮೋಕ್ಷಾಣಾಂ ಚತುರ್ಣಾಂ ಕಾರಣಂ ಪರಂ || ೩೧ ||

ಸರ್ವೇಷಾಂ ಚ ಪುರಾಣಾನಾಮಿದಂ ಬೀಜಂ ಸನಾತನಂ |
ಪ್ರವೃತ್ತಂ ಚ ನಿವೃತ್ತಂ ಚ ಪುರಾಣೇಽಸ್ಮಿನ್ ದ್ವಿಜೋತ್ತಮಾಃ || ೩೨ ||

ವಿಸ್ತರಾದುದಿತಂ ಸರ್ವಂ ಪಾರಾಶರ್ಯೇಣ ಧೀಮತಾ |
ಅಲೌಕಿಕಚರಿತ್ರಾಢ್ಯಂ ಪುರಾಣಂ ನಾರದೀಯಕಂ || ೩೩ ||

ಯಸ್ಮೈ ಕಸ್ಮೈ ನ ದಾತವ್ಯಂ ಮಹ್ಯಂ ವ್ಯಾಸೇನ ಕೀರ್ತಿತಂ |
ಹಿತ್ವಾ ಸ್ವಶಿಷ್ಯಾನ್ ಪೈಲಾದೀನ್ ಮಹ್ಯಂ ನಾರದಸಂಹಿತಾಂ || ೩೪ ||

---

ಈ ನಾರದೀಯಪುರಾಣದ ಉತ್ತರಭಾಗವು ಭೋಗಮೋಕ್ಷಪ್ರದಾಯಕ ವೆಂದು ಉಕ್ತವಾಗಿದೆ.

೩೦. ಈ ಭಾಗದಲ್ಲಿ ಮನುಷ್ಯರಿಗೆ ಕೇಳಿದಕೂಡಲೇ ಹರಿಭಕ್ತಿಯುಂಟಾಗುವಂತೆ ಮಾಹಾತ್ಮ್ಯೆಯು ನಿರೂಪಿತವಾಗಿದೆ. ನಾರದೀಯಪುರಾಣವು ಹತ್ತು ಲಕ್ಷಣಗಳಿಂದ ಯುಕ್ತವಾಗಿದೆ.

೩೧. ಈ ಪುರಾಣವನ್ನು ಭಕ್ತಿಯಿಂದ ಶ್ರವಣಮಾಡುವ ಮನುಷ್ಯನು ವೈಷ್ಣವಸ್ಥಾನ ಎಂದರೆ ವೈಕುಂಠಕ್ಕೆ ಹೋಗಿ ಆನಂದಿಸುವನು. ಈ ಪುರಾಣ ಶ್ರವಣವು ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ನಾಲ್ಕು ಪುರುಷಾರ್ಥಗಳಿಗೆ ಮುಖ್ಯಕಾರಣವು.

೩೨-೩೩. ದ್ವಿಜೋತ್ತಮರೇ! ಸಕಲ ಪುರಾಣಗಳಿಗೂ ಸನಾತನವಾದ ಈ ಪುರಾಣವು ಬೀಜವಾಗಿದೆ. ಈ ಪುರಾಣದಲ್ಲಿ ಪ್ರವೃತ್ತ ಮತ್ತು ನಿವೃತ್ತ ಧರ್ಮಗಳನ್ನೆಲ್ಲಾ ವಿಸ್ತಾರವಾಗಿ ಪರಾಶರಪುತ್ರನು, ಜ್ಞಾನಿಯೂ ಆದ ವೇದವ್ಯಾಸ ಮುನಿಯು ಹೇಳಿರುವನು. ನಾರದೀಯಪುರಾಣವು ಅಲೌಕಿಕ ಚರಿತ್ರೆಗಳಿಂದ ತುಂಬಿದೆ.

ಯೋ ವ್ಯಾಚಕ್ರೇ ಸಮಸ್ತಸ್ಮೈ ವೇದವ್ಯಾಸಾಯ ವಿಷ್ಣವೇ ।
ಪುರಾಣಸಂಹಿತಾಮೇತಾಂ ನಾರದಾಯ ವಿಪಶ್ಚಿತೇ ॥ ೩೫ ॥

ಸನಕಾದ್ಯಾ ಮಹಾಭಾಗಾ ಮುನಯಃ ಪ್ರಚಕಾಶಿರೇ ।
ಹಂಸಸ್ವರೂಪೀ ಭಗವಾನ್ಯದಾ ತಂ ಬ್ರಹ್ಮ ಶಾಶ್ವತಂ ॥ ೩೬ ॥

ತದುಪಾದಿಶದೇತೇಭ್ಯೋ ವಿಜ್ಞಾನೇನ ವಿಜೃಂಭಿತಂ ।
ತದಿದಂ ಭಗವಾನ್ ಸಾಕ್ಷಾನ್ನಾರದೋಧ್ಯಾತ್ಮದರ್ಶನಃ ॥ ೩೭ ॥

ವೇದವ್ಯಾಸಾಯ ಮುನಯೇ ರಹಸ್ಯಂ ನಿರ್ದಿದೇಶ ಹ ।
ಮಯಾ ಪ್ರಕಾಶಿತಂ ಹ್ಯೇತದ್ರಹಸ್ಯಂ ಭುವಿ ದುರ್ಲಭಂ ॥ ೩೮ ॥

ಚತುರ್ವರ್ಗಪ್ರದಂ ನೄಣಾಂ ಶೃಣ್ವತಾಂ ಪಠತಾಂ ಸದಾ ।
ವಿಪ್ರೋ ವೇದನಿಧಿರ್ಭೂಯಾತ್ ಕ್ಷತ್ರಿಯೋ ಜಯತೇ ಮಹೀಂ ॥ ೩೯ ॥

---

೩೪-೩೫ ಶೀಲಸ್ವಭಾವಗಳನ್ನರಿಯದೆ ಈ ಪುರಾಣವನ್ನು ಯಾರಿಗೂ ಹೇಳಬಾರದು. ನನಗೆ ವ್ಯಾಸಮುನಿಯು ಇದನ್ನು ಉಪದೇಶಿಸಿರುವನು ತನ್ನ ಶಿಷ್ಯರಾದ ಪೈಲ ಮುಂತಾದವರನ್ನೂ ಬಿಟ್ಟು ಈ ನಾರದಸಂಹಿತೆಯನ್ನು ನನಗೆ ಉಪದೇಶಿಸಿದ, ವಿಷ್ಣ್ವವತಾರನಾದ ವೇದವ್ಯಾಸದೇವನಿಗೆ ನಮಸ್ಕಾರ!

೩೫-೩೮. ಪೂಜ್ಯರಾದ ಸನಕಾದಿಮುನಿಗಳು ಜ್ಞಾನಿಯಾದ ನಾರದನಿಗೆ ಈ ಪುರಾಣಸಂಹಿತೆಯನ್ನು ಉಪದೇಶಿಸಿರುವರು. ಹಂಸಸ್ವರೂಪಿಯಾದ ಭಗವಂತನು ಶಾಶ್ವತವಾದ ಬ್ರಹ್ಮತತ್ತ್ವವನ್ನು ಈ ಸನಕಾದಿಮುನಿಗಳಿಗೆ ಉಪದೇಶಿಸಿದನು. ವಿಜ್ಞಾನವಿಜೃಂಭಿತವಾದ ಈ ರಹಸ್ಯವನ್ನು ಪೂಜ್ಯನು, ಅಧ್ಯಾತ್ಮಜ್ಞಾನಿಯೂ ಆದ ನಾರದಮುನಿಯು ವೇದವ್ಯಾಸಮುನಿಗೆ ಹೇಳಿದನು. ದುರ್ಲಭವಾದ ಈ ರಹಸ್ಯವನ್ನು ನಾನು ಭೂಲೋಕದಲ್ಲಿ ಪ್ರಕಾಶಪಡಿಸಿದೆನು.

೩೯. ಈ ಪುರಾಣವನ್ನು ಯಾವಾಗಲೂ ಶ್ರವಣಪಠನೆ ಮಾಡುವ ಮನುಷ್ಯರಿಗೆ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವರ್ಗವು ಲಭಿಸುವುದು. ಇದನ್ನು ಶ್ರವಣಮಾಡಿದರೆ ಬ್ರಾಹ್ಮಣನು ವೇದನಿಧಿಯಾಗುವನು. ಕ್ಷತ್ರಿಯನು ಭೂಮಂಡಲವನ್ನೇ ಜಯಿಸುವನು.

ವೈಶ್ಯೋ ಧನಸಮೃದ್ಧಃ ಸ್ಯಾಚ್ಛೂದ್ರೋ ಮುಚ್ಯೇತ ದುಃಖತಃ ।
ಪಂಚವಿಂಶತಿಸಾಹಸ್ರೀ ಸಂಹಿತೇಯಂ ಪ್ರಕೀರ್ತಿತಾ ॥ ೪೦ ॥

ಪಂಚಪಾದಸಮಾಯುಕ್ತಾ ಕೃಷ್ಣದ್ವೈಪಾಯನೇನ ಹ ।
ಅಸ್ಯಾಂ ವೈ ಶ್ರೂಯಮಾಣಾಯಾಂ ಸರ್ವಸಂದೇಹಭಂಜನಂ ॥ ೪೧ ॥

ಪುಂಸಾಂ ಸಕಾಮಭಕ್ತಾನಾಂ ನಿಷ್ಕಾಮಾನಾಂ ವಿಮೋಕ್ಷಣಂ ।
ಪುಣ್ಯತೀರ್ಥಂ ಸಮಾಸಾದ್ಯ ನೈಮಿಷಂ ಪುಷ್ಕರಂ ಗಯಾಂ ॥ ೪೨ ॥

ಮಥುರಾಂ ದ್ವಾರಕಾಂ ವಿಪ್ರಾ ನರನಾರಾಯಣಾಶ್ರಮಂ ।
ಕುರುಕ್ಷೇತ್ರಂ ನರ್ಮದಾಂ ಚ ಕ್ಷೇತ್ರಂ ಶ್ರೀಪುರುಷೋತ್ತಮಂ ॥ ೪೩ ॥

ಹವಿಷ್ಯಾಶೀ ಧರಾಶಾಯೀ ನಿಃಸಂಗೋ ವಿಜಿತೇಂದ್ರಿಯಃ ।
ಪಠಿತ್ವಾ ಸಂಹಿತಾಮೇನಾಂ ಮುಚ್ಯತೇ ಭವಸಾಗರಾತ್ ॥ ೪೪ ॥

---

೪೦. ವೈಶ್ಯನು ಧನಸಮೃದ್ಧಿಯನ್ನು ಹೊಂದುವನು. ಶೂದ್ರನು ದುಃಖವಿಮೋಚನೆಯನ್ನು ಹೊಂದುವನು. ಈ ಪುರಾಣಸಂಹಿತೆಯು ಇಪ್ಪತ್ತೈದು ಸಾವಿರಗ್ರಂಥಪರಿಮಿತಿಯುಳ್ಳದು ಎಂದು ಉಕ್ತನಾಗಿದೆ.

೪೧-೪೨. ಕೃಷ್ಣದ್ವೈಪಾಯನವ್ಯಾಸಮುನಿಯಿಂದ ರಚಿತವಾದ ಈ ಪುರಾಣದಲ್ಲಿ ಐದು ಪಾದಗಳಿವೆ. ಇದನ್ನು ಶ್ರವಣಮಾಡಿದರೆ ಸಕಾಮಭಕ್ತರಿಗೆ ಸಕಲ ಸಂದೇಹಗಳ ಪರಿಹಾರವಾಗುವುದು. ನಿಷ್ಕಾಮಭಕ್ತಜನರಿಗೆ ಮೋಕ್ಷವಾಗುವುದು.

೪೨-೪೪. ಬ್ರಾಹ್ಮಣರೇ ! ಪುಣ್ಯತೀರ್ಥವಾದ ನೈಮಿಷ, ಪುಷ್ಕರ, ಗಯ, ಮಥುರಾ, ದ್ವಾರಕಾ, ನರನಾರಾಯಣಾಶ್ರಮ, ಕುರುಕ್ಷೇತ್ರ, ನರ್ಮದಾ, ಶ್ರೀಪುರುಷೋತ್ತಮಕ್ಷೇತ್ರ ಇವುಗಳಿಗೆ ಹೋಗಿ ವಿಜಿತೇಂದ್ರಿಯನು, ಸಂಗವರ್ಜಿತನೂ ಆಗಿ ಹವಿಷ್ಯಭೋಜನ ಮತ್ತು ಭೂಶಯನಗಳನ್ನು ಮಾಡುತ್ತಾ ಈ ಪುರಾಣಸಂಹಿತೆಯನ್ನು ಪಠನೆಮಾಡಿದರೆ ಅವನು ಸಂಸಾರಸಾಗರದಿಂದ ಮುಕ್ತನಾಗುವನು.

ಏಕಾದಶೀ ವ್ರತಾನಾಂ ಚ ಸರಿತಾಂ ಜಾಹ್ನವೀ ಯಥಾ ।
ವೃಂದಾವನಮರಣ್ಯಾನಾಂ ಕ್ಷೇತ್ರಾಣಾಂ ಕೌರವಂ ಯಥಾ ॥ ೪೫ ॥

ಯಥಾ ಕಾಶೀ ಪುರೀಣಾಂ ಚ ತೀರ್ಥಾನಾಂ ಮಥುರಾ ಯಥಾ ।
ಸರಸಾಂ ಪುಷ್ಕರಂ ವಿಪ್ರಾಃ ಪುರಾಣಾನಾಮಿದಂ ತಥಾ ॥ ೪೬ ॥

ಗಣೇಶಭಕ್ತಾಃ ಸೌರಾಶ್ಚ ವೈಷ್ಣವಾಃ ಶಾಕ್ತಶಾಂಭವಾಃ ।
ಸರ್ವೇಧಿಕಾರಿಣೋ ಹ್ಯತ್ರ ಸಕಾಮಾಶ್ಚಾಪ್ಯಕಾಮಕಾಃ ॥ ೪೭ ॥

ಯಂ ಯಂ ಕಾಮಮಭಿಧ್ಯಾಯನ್ನರೋ ನಾರ್ಯೋಥವಾದರಾತ್ ।
ಶೃಣೋತಿ ಶ್ರಾವಯೇದ್ವಾಪಿ ತಂ ತಂ ಪ್ರಾಪ್ನೋತಿ ನಿಶ್ಚಿತಂ ॥ ೪೮ ॥

ರೋಗಾರ್ತೋ ಮುಚ್ಯತೇ ರೋಗಾದ್ಭಯಾರ್ತೋ ನಿರ್ಭಯೋ ಭವೇತ್ ।
ಜಯಕಾಮೋ ಜಯೇಚ್ಛತ್ರೂನ್ನಾರದೀಯಾನುಶೀಲನಾತ್ ॥ ೪೯ ॥

---

೪೫-೪೬. ವ್ರತಗಳಲ್ಲಿ ಏಕಾದಶೀವ್ರತವೂ, ನದಿಗಳಲ್ಲಿ ಗಂಗಾನದಿಯೂ, ವನಗಳ ಪೈಕಿ ವೃಂದಾವನವೂ, ಕ್ಷೇತ್ರಗಳೊಳಗೆ ಕುರುಕ್ಷೇತ್ರವೂ, ಪುಣ್ಯಪತ್ತನಗಳಲ್ಲಿ ಕಾಶಿಯೂ, ತೀರ್ಥಗಳಲ್ಲಿ ಮಥುರೆಯೂ, ಸರೋವರಗಳಲ್ಲಿ ಪುಷ್ಕರವೂ ಶ್ರೇಷ್ಠವಾಗಿರುವಂತೆ ಪುರಾಣಗಳಲ್ಲಿ ಈ ಪುರಾಣವು ಅತ್ಯುತ್ತಮವು.

೪೭. ಗಣೇಶಭಕ್ತರು, ಸೂರ್ಯೋಪಾಸಕರು, ವೈಷ್ಣವರು, ಶಾಕ್ತರು ಮತ್ತು ಶೈವರು, ಸಕಾಮರು ಅಥವಾ ನಿಷ್ಕಾಮರಾದರೂ ಎಲ್ಲರೂ ಈ ಪುರಾಣ ಶ್ರವಣಾದಿಗಳನ್ನು ಮಾಡಲು ಅಧಿಕಾರಿಗಳಾಗಿದ್ದಾರೆ.

೪೮. ಗಂಡಸು ಅಥವಾ ಹೆಂಗಸು ಯಾವ ಯಾವ ಇಷ್ಟಾರ್ಥವನ್ನು ಪಡೆಯಬೇಕೆಂಬ ಉದ್ದೇಶದಿಂದ ಭಕ್ತಿಪೂರ್ವಕವಾಗಿ ಈ ಪುರಾಣವನ್ನು ಶ್ರವಣ ಪಠನೆ ಮಾಡುವರೋ ಅವರು ಆಯಾ ಇಷ್ಟಾರ್ಥಗಳನ್ನು ಖಂಡಿತವಾಗಿಯೂ ಹೊಂದುವರು.

೪೯. ನಾರದೀಯಪುರಾಣವನ್ನು ಮನನಮಾಡುವುದರಿಂದ ರೋಗಪೀಡಿತನು ನೀರೋಗಿಯಾಗುವನು. ಭಯಗ್ರಸ್ತನು ನಿರ್ಭಯನಾಗುವನು. ಜಯಾಭಿಲಾಷಿಯು ಶತ್ರುಜಯವನ್ನು ಹೊಂದುವನು.

ಸೃಷ್ಟ್ಯಾದೌ ರಜಸಾ ವಿಶ್ವಂ ಮಧ್ಯೇ ಸತ್ವೇನ ಪಾತಿ ಯಃ ।
ತಮಸೋಂತೇ ಗ್ರಸೇದೇತತ್ತಸ್ಮೈ ಸರ್ವಾತ್ಮನೇ ನಮಃ ॥ ೫೦ ॥

ಋಷಯೋ ಮನವಃ ಸಿದ್ಧಾ ಲೋಕಪಾಲಾಃ ಪ್ರಜೇಶ್ವರಾಃ ।
ಬ್ರಹ್ಮಾದ್ಯಾ ರಚಿತಾ ಯೇನ ತಸ್ಮೈ ಬ್ರಹ್ಮಾತ್ಮನೇ ನಮಃ ॥ ೫೧ ॥

ಯತೋ ವಾಚೋ ನಿವರ್ತಂತೇ ನ ಮನೋ ಯತ್ರ ಸಂವಿಶೇತ್ ।
ತದ್ವಿದ್ಯಾದಾತ್ಮನೋ ರೂಪಂ ಹ್ಯರೂಪಸ್ಯ ಚಿದಾತ್ಮನಃ ॥ ೫೨ ॥

ಯಸ್ಯ ಸತ್ಯತಯಾ ಸತ್ಯಂ ಜಗದೇತದ್ವಿಕಾಶತೇ ।
ವಿಚಿತ್ರರೂಪಂ ವಂದೇ ತಂ ನಿರ್ಗುಣಂ ತಮಸಃ ಪರಂ ॥ ೫೩ ॥

ಆದೌ ಮಧ್ಯೇ ಚಾಪ್ಯವಸಾನೇ ಚೈಕಾಕ್ಷರೋ ವಿಭುಃ ।
ವಿಭಾತಿ ನಾನಾರೂಪೇಣ ತಂ ವಂದೇಹಂ ನಿರಂಜನಂ ॥ ೫೪ ॥

---

೫೦. ಆದಿಯಲ್ಲಿ ರಜೋಗುಣದಿಂದ ಪ್ರಪಂಚವನ್ನು ಸೃಷ್ಟಿಸಿ ಮಧ್ಯ ಕಾಲದಲ್ಲಿ ಸತ್ವಗುಣದಿಂದ ಆದನ್ನು ಸಂರಕ್ಷಿಸಿ ಕೊನೆಗೆ ತಮೋಗುಣದಿಂದ ಸಂಹರಿಸುವ ಸರ್ವಾಂತರ್ಯಾಮಿಯಾದ ಆ ದೇವನಿಗೆ ನಮಸ್ಕಾರ!

೫೧. ಋಷಿಗಳು, ಮನುಗಳು, ಸಿದ್ಧರು, ಲೋಕಪಾಲಕರು, ಪ್ರಜೇಶ್ವರರು, ಬ್ರಹ್ಮಾದಿದೇವತೆಗಳು ಇವರನ್ನು ಸೃಷ್ಟಿಸಿದ ಪರಬ್ರಹ್ಮನಿಗೆ ನಮಸ್ಕಾರ!

೫೨. ವಾಕ್ಕು ಯಾರ ಮಹಿಮೆಯನ್ನು ಸಂಪೂರ್ಣವಾಗಿ ವಿಷಯೀಕರಿಸುವುದಿಲ್ಲವೋ, ಮನಸ್ಸೂ ಸಹ ಯಾರ ಮಾಹಾತ್ಮ್ಯೆಯನ್ನು ಸಂಪೂರ್ಣವಾಗಿ ಗೋಚರಿಸಲು ಸಮರ್ಥವಲ್ಲವೋ ಅಂತಹುದೇ ಪ್ರಾಕೃತರೂಪರಹಿತನು, ಜ್ಞಾನಾತ್ಮಕನೂ ಆದ ಪರಮಾತ್ಮನ ಸ್ವರೂಪವೆಂದು ತಿಳಿಯಬೇಕು.

೫೩. ಯಾರ ಪ್ರಸ್ತುತ್ವಾದಿ ಸಾಮರ್ಥ್ಯದಿಂದ ಸತ್ಯಭೂತವಾದ ಈ ಜಗತ್ತು ರಚಿತವಾಗಿ ವಿರಾಜಮಾನವಾಗಿದೆಯೋ ಅಂತಹ ಪ್ರಕೃತ್ಯತೀತನು, ಲೌಕಿಕಗುಣರಹಿತನೂ, ವಿಚಿತ್ರರೂಪನೂ ಆದ ದೇವನನ್ನು ನಮಸ್ಕರಿಸುವೆನು.

೫೪. ಉತ್ಪತ್ತಿರಹಿತನು, ಏಕಾಕ್ಷರಪ್ರಣವಪ್ರತಿಪಾದ್ಯನೂ ಆದ ಯಾವ ಸ್ವಾಮಿಯು ಆದಿಮಧ್ಯಾವಸಾನಗಳಲ್ಲಿ ನಾನಾರೂಪಗಳಿಂದ ವಿರಾಜಮಾನನಾಗುವನೋ ಅಂತಹ ನಿರ್ದೋಷನಾದ ದೇವನನ್ನು ನಾನು ನಮಸ್ಕರಿಸುವೆನು!

ನಿರಂಜನಾತ್ ಸಮುತ್ಪನ್ನಂ ಜಗದೇತಚ್ಚರಾಚರಂ ।
ತಿಷ್ಠತ್ಯಸ್ಯೇತಿ ವಾ ಯಸ್ಮಿಂಸ್ತತ್ಸತ್ಯಂ ಜ್ಞಾನಮದ್ವಯಂ ॥ ೫೫ ॥
ಶಿವಂ ಶೈವಾ ವದಂತ್ಯೇನಂ ಪ್ರಧಾನಂ ಸಾಂಖ್ಯವೇದಿನಃ ।
ಯೋಗಿನಃ ಪುರುಷಂ ವಿಪ್ರಾಃ ಕರ್ಮ ಮೀಮಾಂಸಕಾ ಜನಾಃ ॥ ೫೬ ॥
ವಿಭುಂ ವೈಶೇಷಿಕಾದ್ಯಾಶ್ಚ ಚಿಚ್ಛಕ್ತಿಂ ಶಕ್ತಿಚಿಂತಕಾಃ ।
ಬ್ರಹ್ಮಾದ್ವಿತೀಯಂ ತದ್ವಂದೇ ನಾನಾರೂಪಕ್ರಿಯಾಸ್ಪದಂ ॥ ೫೭ ॥
ಭಕ್ತಿರ್ಭಗವತಃ ಪುಂಸಾಂ ಭಗವದ್ರೂಪಕಾರಿಣೀ ।
ತಾಂ ಲಬ್ಧ್ವಾ ಚಾಪರಂ ಲಾಭಂ ಕೋ ವಾಂಛತಿ ವಿನಾ ಪಶುಂ ॥ ೫೮ ॥
ಭಗವದ್ವಿಮುಖಾ ಯೇ ತು ನರಾಃ ಸಂಸಾರಿಣೋ ದ್ವಿಜಾಃ ।
ತೇಷಾಂ ಮುಕ್ತಿರ್ಭವಾಟವ್ಯಾ ನಾಸ್ತಿ ಸತ್ಸಂಗಮಂ ನರಾಃ ॥ ೫೯ ॥

---

೫೫. ನಿರ್ದೋಷನಾದ ಯಾವ ಆದಿದೇವನಿಂದ ಚರಾಚರಾತ್ಮಕವಾದ ಈ ಪ್ರಪಂಚವು ಸೃಷ್ಟಿಸಲ್ಪಟ್ಟು ಅವನಿಂದಲೇ ಪಾಲಿತವಾಗಿ ಅವನಲ್ಲಿಯೇ ಲಯವನ್ನು ಹೊಂದುವುದೋ ಅವನು ಜ್ಞಾನರೂಪಿಯು, ಸತ್ಯನು ಮತ್ತು ಅದ್ವಿತೀಯನೂ ಆಗಿರುವನು.

೫೬-೫೭. ಅಂತಹ ಸೃಷ್ಟ್ಯಾದಿಕರ್ತನನ್ನು ಶೈವರು ಶಿವನೆಂದು ಹೇಳುವರು. ಸಾಂಖ್ಯರು ಪ್ರಕೃತಿಯೆಂದು ಹೇಳುವರು. ಯೋಗಿಗಳು ಪುರುಷನೆಂದು ಹೇಳುವರು. ಮೀಮಾಂಸಕರು ಕರ್ಮವೆನ್ನುವರು. ವೈಶೇಷಿಕಾದಿಗಳು ವಿಭುವೆನ್ನುವರು. ಶಾಕ್ತರು ಶಕ್ತಿಯೆನ್ನುವರು. ಹೀಗೆ ನಾನಾ ರೂಪಕ್ರಿಯೆಗಳಿಗಾಸ್ಪದನಾದ ಅದ್ವಿತೀಯಬ್ರಹ್ಮನನ್ನು ನಮಸ್ಕರಿಸುವೆನು !

೫೮. ಭಗವಂತನಲ್ಲಿ ಭಕ್ತಿಯು ಮನುಜರಿಗೆ ಭಗವಂತನ ಸಾರೂಪ್ಯವನ್ನು ಕೊಡುವುದು. ಅಂತಹ ಭಕ್ತಿಯನ್ನು ಹೊಂದಿದ ಬಳಿಕ ಪಶುವು ಹೊರತು ಚೇತನನಾದ ಯಾವನುತಾನೇ ಬೇರೆ ಪ್ರಯೋಜನವನ್ನು ಬಯಸಿಯಾನು ?

೫೯. ದ್ವಿಜರೇ ! ಭಗವದ್ವಿಮುಖರಾದ ಸಂಸಾರಿಪುರುಷರಿಗೆ ಈ ಸಂಸಾರವೆಂಬ ಅರಣ್ಯದಿಂದ ಬಿಡುಗಡೆಯಿಲ್ಲ. ಅಂತಹವರು ಸಾಧುಸಹವಾಸವನ್ನು ಹೊಂದಲಾರರು.

ಸಾಧವಃ ಸಮುದಾಚಾರಾಃ ಸರ್ವಲೋಕಹಿತಾವಹಾಃ |
ದೀನಾನುಕಂಪಿನೋ ವಿಪ್ರಾಃ ಪ್ರಪನ್ನಾಸ್ತಾರಯಂತಿ ಹಿ || ೬೦ ||
ಯೂಯಂ ಧನ್ಯತಮಾ ಲೋಕೇ ಮುನಯಃ ಸಾಧುಸಂಮತಾಃ |
ಯನ್ಮುಹುರ್ವಾಸುದೇವಸ್ಯ ಕೀರ್ತಿಂ ಪಲ್ಲವನೂತನಾಂ || ೬೧ ||
ಧನ್ಯೋಽಸ್ಮ್ಯನುಗೃಹೀತೋಽಸ್ಮಿ ಭವದ್ಭಿರ್ಲೋಕಮಂಗಲಂ |
ಯತ್ ಸ್ಮಾರಿತೋ ಹರಿಃ ಸಾಕ್ಷಾತ್ಸರ್ವಕಾರಣಕಾರಣಂ || ೬೨ ||

ಇತಿ ಶ್ರೀನಾರದೀಯಪುರಾಣೋತ್ತರಭಾಗೇ ಮಹಾಪುರಾಣೇ
ಏತತ್ಪುರಾಣಶ್ರವಣಾದಿಫಲನಿರೂಪಣಂ ನಾಮ
ದ್ವ್ಯಶೀತಿತಮೋಽಧ್ಯಾಯಃ

ಸಮಾಪ್ತಮಿದಂ ನಾರದೀಯಮಹಾಪುರಾಣಂ

---

೬೦. ಉತ್ಕೃಷ್ಟಸದಾಚಾರವುಳ್ಳ, ಸಕಲಲೋಕಹಿತೈಷಿಗಳು, ದೀನದಯಾಳುಗಳು, ಭಗವಂತನಲ್ಲಿ ಪ್ರಪನ್ನರೂ ಆದ ವಿಪ್ರರು ಅಜ್ಞರನ್ನುದ್ಧರಿಸುವರು.

೬೧. ಬಾರಿಬಾರಿಗೂ ವಾಸುದೇವನ ಕೀರ್ತಿಯೆಂಬ ವೃಕ್ಷದಲ್ಲಿ ನೂತನ ಪಲ್ಲವವು ಮೂಡುವುದನ್ನು ಹೊಗಳುತ್ತಿರುವ, ಸಾಧುಸಂಮತರಾದ ಶೌನಕಾದಿ ಮುನಿಗಳೇ! ನೀವೇ ಈ ಲೋಕದಲ್ಲೆಲ್ಲಾ ಧನ್ಯತಮರು!

೬೨. ಶೌನಕಾದಿಮುನಿಗಳೇ! ಲೋಕಕ್ಕೆ ಮಂಗಳಕಾರಕನು, ಸಕಲ ಜಗತ್ತಿಗೂ ಆದಿಕಾರಣನೂ ಆದ ಶ್ರೀಹರಿಯನ್ನು ನೀವು ಸ್ಮರಣೆಗೆ ತಂದುಕೊಟ್ಟುದರಿಂದ ಅನುಗ್ರಹವನ್ನು ಪಡೆದು ನಾನು ಧನ್ಯನಾದೆನು.

ಇಂತು ಶ್ರೀನಾರದೀಯಮಹಾಪುರಾಣೋತ್ತರಭಾಗದೊಳು ಪುರಾಣ
ಶ್ರವಣಾದಿಫಲನಿರೂಪಣೆಯೆಂಬ ಎಂಬತ್ತೆರಡನೆಯ ಅಧ್ಯಾಯವು
ಮುಗಿದುದು.

ಇಂತು ವಿದ್ವಚ್ಚಕ್ರಚೂಡಾಮಣಿ ದೊಡ್ಡಬಳ್ಳಾಪುರ ಗೋವಿಂದಕೃಷ್ಣಾಚಾರ್ಯ
ತನಯ "ಪಂಡಿತರತ್ನಂ" ಇತ್ಯಾದಿ ಬಿರುದಾಂಕಿತ ವಾಸುದೇವಾಚಾರ್ಯರಿಂದ
ವಿರಚಿತವಾದ ಕರ್ಣಾಟಕಭಾಷಾನುವಾದದೊಳು
ಶ್ರೀನಾರದೀಯಮಹಾಪುರಾಣವು ಮುಗಿಯಿತು.
ಶ್ರೀಕೃಷ್ಣಾರ್ಪಣಮಸ್ತು
ಮಂಗಳಂ